

ಇನ್‌ಫ್ಯಾಂಟ್ ಜೀಸಸ್

# ಸಾಂಪ್ರದಾಯಿಕ ಕಲಾ ಒಲವಿನ

# ಎಂ. ಗಿರಿಜಾ



ವಿಶೇಷ ವಿನ್ಯಾಸಗಳಿಂದ ಗಮನ ಸೆಳೆದಿರುವ ಮೈಸೂರು ಸಾಂಪ್ರದಾಯಿಕ ಕಲಾಶೈಲಿಯ ಕಲಾವಿದರಲ್ಲಿ ಶ್ರೀಮತಿ ಎಂ. ಗಿರಿಜಾ ಒಬ್ಬರು. ಬಾಲ್ಯದಿಂದಲೇ ಕಲಾ ಒಲವನ್ನು ಮೂಡಿಸಿಕೊಂಡ ಗಿರಿಜಾ ದಿ|| ಶಿಲ್ಪಿ ಬಸವಣ್ಣನವರಲ್ಲಿ ಶಿಲ್ಪಕಲೆಯ ಮೂಲ ವ್ಯಾಸಂಗವನ್ನು ಮಾಡಿದರು. ನಂತರ ಶಾಂತಿನಿಕೇತನದ ದಿ|| ಎನ್. ಆರ್. ಸೇನ್‌ಗುಪ್ತಾ ಅವರ ಬಳಿ ಕಲಾವ್ಯಾಸಂಗದಲ್ಲಿ ತರಬೇತಿ ಪಡೆದರು.

ಮೈಸೂರು ಸಾಂಪ್ರದಾಯಿಕ ಶೈಲಿಯ ರಚನಾ ವಿಧಾನದಲ್ಲಿ ಅನುಭವವನ್ನು ಪಡೆಯುವ ಹಂಬಲದಿಂದ ಕಳೆದ ಹತ್ತು ವರ್ಷಗಳಿಗೂ ಮೀರಿ ನಾಡಿನುದ್ದಗಲದಲ್ಲಿರುವ ಪ್ರಮುಖವಾದ ದೇವಾಲಯಗಳಿಗೆ ಭೇಟಿಯಿತ್ತು ಅನುಭವವನ್ನು ಪಡೆದರು. ಅಲ್ಲದೆ ಖಾಸಗಿಯಾಗಿ ಮನೆಗಳಲ್ಲಿ ಸಂಗ್ರಹವಾಗಿರುವ ಸಾಂಪ್ರದಾಯಿಕ ಚಿತ್ರಕಲಾ ರೂಪರೇಖೆಗಳನ್ನು ಕೂಲಂಕಷವಾಗಿ ಗಮನಿಸಿ ತಮ್ಮದೇ ಆದ ರಚನಾ ಶೈಲಿಯನ್ನು ರೂಢಿಸಿಕೊಂಡರು.

ಕರ್ನಾಟಕ ಚಿತ್ರಕಲಾ ಪರಿಷತ್, ಬೆಂಗಳೂರು, ಮತ್ತು ನವದೆಹಲಿಯ ಅಖಿಲ ಭಾರತ, ಚಿತ್ರಕಲೆ ಮತ್ತು ಕರಕುಶಲ ಕಲಾ ಸಂಸ್ಥೆಯಲ್ಲಿ ಚಿತ್ರಕಲೆ ಪ್ರದರ್ಶಿಸಿ ಗಮನ ಸೆಳೆದಿದ್ದರು. ತಮ್ಮ ''ರಾಧಾಕೃಷ್ಣ'' ಕಲಾಕೃತಿಗೆ ಪ್ರಶಸ್ತಿಯನ್ನು ಪಡೆದರು. ಬೃಂದಾವನದಲ್ಲಿ ಈ ಕೃತಿ ಸಂಗ್ರಹವಾಗಿದೆ. ಅಂತೆಯೇ ಕರ್ನಾಟಕ ಲಲಿತಕಲಾ ಅಕಾಡೆಮಿಯಲ್ಲಿ ಆಹ್ವಾನಿತ ಕಲಾವಿದರಾಗಿ ತಮ್ಮ ಕೃತಿಗಳನ್ನು ಪ್ರದರ್ಶಿಸಿದ್ದರು. ಅವರ ಸದ್ಯದ ವಾಸ್ತವ್ಯ ಮೈಸೂರಿನಲ್ಲಿ.

ಪಿ. ಎಂ. ರಾಜನ್
ಮೈಸೂರು



ಸಾಂಪ್ರದಾಯಿಕ ಕಲಾಕೃತಿ



ರಾಧಾಕೃಷ್ಣ



ಸಾಂಪ್ರದಾಯಿಕ ಕಲಾಕೃತಿ

# ಹೊಸತು

## ಒಳಗೇನಿದೆ.....




*ಚಿತ್ರಗಳು : ರಾಂಚಂದ್ರ, ಕೊಪ್ಪಲು, ಹರಿಣಿ, ಸತೀಶ್ ಯಲ್ಲಾಪುರ, ಜಿ. ಎಮ್. ಬೊಮ್ನಳ್ಳಿ, ಬಿ. ವಿಲ್ಸನ್, ನಹುಷೇಶ್, ರವಿಕುಮಾರ್ ಅಜ್ಜೀಪುರ, ಅನುಪಮಾ*

*ಮುಖಚಿತ್ರ : ಚಿತ್ರ ಒದಗಿಸಿದವರು ಕಿರಣ್ ಚೌಬೀನ, ಲಂಡನ್*

*ವಿನ್ಯಾಸ : ನವಕರ್ನಾಟಕ ವಿನ್ಯಾಸ*

*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


## ಈ ತಿಂಗಳು

**ಕಾ**ಶ್ಮೀರದ ಒಂದು ಗ್ರಾಮದಲ್ಲಿ ಇಪ್ಪತ್ತಕ್ಕೂ ಹೆಚ್ಚು ಮಂದಿ ಪಂಡಿತರನ್ನು ಕೊಚ್ಚಿ ಹಾಕಿದ ದಾರುಣ ಘಟನೆಯನ್ನು ಎಷ್ಟು ತೀವ್ರವಾಗಿ ಖಂಡಿಸಿದರೂ ಸಾಲದು. ಕಾಶ್ಮೀರವನ್ನು ಭಾರತದಿಂದ ಬಿಡುಗಡೆ ಮಾಡಿಸುವ ಯಜಮಾನಿಕೆ ವಹಿಸಿಕೊಂಡಿರುವ ಕೆಲವು ಕೊಳೆತ ಮನಸ್ಸುಗಳ ಬೀಭತ್ಸ ಕೃತ್ಯ ಇದು. ಈ ಸ್ವಯಂ ಘೋಷಿತ 'ವಿಮೋಚನಾ ಶೂರರು' ಮತಭೇದವಿಲ್ಲದೆ ಜನರನ್ನು ಕೊಲ್ಲುತ್ತಿರುವುದು ನೀಚತನದ ಪರಮಾವಧಿಯಾಗಿದೆ. ಇದೆಲ್ಲಾ ಘಟಿಸುವಾಗ ಕಾಶ್ಮೀರದ ಜನ ಅದರ ವಿರುದ್ಧ ಪ್ರಚಂಡವಾಗಿ ದನಿಯೆತ್ತದಿರುವುದಕ್ಕೆ ಭಾರತ ಹಾಗೂ ಕಾಶ್ಮೀರ ಸರ್ಕಾರಗಳು ಎರಡು ದಶಕಗಳಿಂದ ನಡೆದುಕೊಂಡಿರುವ ರೀತಿಯೂ ಒಂದು ಕಾರಣ. ಜನರಲ್ಲಿ ಪರಕೀಯತೆಯ ಭಾವನೆ ಕೆರಳಿರುವುದಕ್ಕೆ ಕಾರಣಗಳನ್ನು ಕಂಡುಕೊಂಡು, ಅವನ್ನು ತೊಡೆದು ಹಾಕಿ, ಜನರಲ್ಲಿ ಉತ್ಸಾಹ ಮತ್ತು ಐಕ್ಯತೆಯ ಪ್ರಜ್ಞೆ ಮೂಡುವಂತೆ ಮಾಡುವ ಜವಾಬ್ದಾರಿ ಇಡೀ ದೇಶದ ಮೇಲಿದೆ. ಪದೇಪದೇ ನೆರೆರಾಷ್ಟ್ರದ ಬೇಹುಗಾರಿ ಸಂಸ್ಥೆಯನ್ನು ತೆಗಳುವುದರಿಂದ ಪರಿಹಾರ ದೊರೆಯದು. ರಕ್ಷಣಾ ಸಿಬ್ಬಂದಿಯು ಭದ್ರತೆಯನ್ನು ಬಿಗಿಗೊಳಿಸುವುದು ಭಾಗಶಃ ಪರಿಹಾರ ನೀಡಬಹುದು, ಆದರೆ ವಾತಾವರಣವನ್ನು ತಿಳಿಗೊಳಿಸುವ ನೂರಾರು ಕ್ರಮಗಳು ಅಗತ್ಯ. ಅದಕ್ಕೆ ನೇರವಾಗಿ ಜನರೊಡನೆ ಸಂವಾದ ಏರ್ಪಡಿಸಿಕೊಳ್ಳಬೇಕು. ಹತ್ತು ವರ್ಷಗಳ ಹಿಂದೆ ಇದೇ ಜಗಮೋಹನ್ ಪಂಡಿತರ ದಾರಿ ತಪ್ಪಿಸಿದ್ದನ್ನು ಮರೆಯಬಾರದು. "ನೀವೆಲ್ಲಾ ಕಾಶ್ಮೀರ ಬಿಟ್ಟು ಹೊರಬನ್ನಿ, ಅಂತರರಾಷ್ಟ್ರೀಯ ಗಮನ ಸೆಳೆಯಲು ಅದೇ ಹಾದಿ; ಅದರಿಂದ ಸಮಸ್ಯೆ ಬಗೆಹರಿಯುತ್ತದೆ" ಎಂಬ ಮೂರ್ಖತನದ ಪ್ರೇರಣೆ ನೀಡಿದ ಕುಖ್ಯಾತಿ ಆತನದು. ಪಂಡಿತರ ಹತ್ಯೆಯಿಂದ ಹರಿದ ರಕ್ತ ಆತನ ಮನಸ್ಸಿಗೂ ಅಂಟಬೇಕು.

ಇಲ್ಲಿ ಇಪ್ಪತ್ತಕ್ಕೂ ಹೆಚ್ಚು ಹತ್ಯೆಗಳಾಗಿದ್ದರೆ ಇರಾಕಿನಲ್ಲಿ ಅಮೆರಿಕಾ ಮತ್ತು ಬ್ರಿಟನ್ನಿನ ರಾಕ್ಷಸೀ ಆಕ್ರಮಣದಲ್ಲಿ ಮೂರು ಸಾವಿರ ಇರಾಕಿ ಜನ ಹತ್ಯೆಗೊಳಗಾಗಿದ್ದಾರೆ. ಬರ್ಬರತೆಗೆ ಇನ್ನೊಂದು ಹೆಸರು ಅಮೆರಿಕಾ ಸರ್ಕಾರ. ಆ ದೇಶದ ಮೂಲನಿವಾಸಿಗಳ ಲಕ್ಷಗಟ್ಟಲೆ ಶವಗಳ ಮೇಲೆ ಕಟ್ಟಿದ್ದು ಬಿಳಿಮನೆ; ಅಮೆರಿಕಾದ ನರಹಂತಕ ಅಧ್ಯಕ್ಷನ ರಾಕ್ಷಸಕೋಟೆ. ಪ್ರಪಂಚಕ್ಕೆ ಕತ್ತಲನ್ನು ಹರಡುವ ಪೈಶಾಚಿಕ ನೃತ್ಯ ಆರಂಭವಾಗುವುದು ಅಲ್ಲಿನ ಸಭೆಗಳಲ್ಲಿ. ಈಗಿನ ಪಾತ್ರಧಾರಿಗಳು ಬುಷ್, ಡಿಕ್, ರಮ್ಸ್‌ಫೆಲ್ಡ್, ಕೊಂಡಲಿಸ್ಸಾ ಮತ್ತು ಪವೆಲ್.

ಅಮೆರಿಕಾ ಮತ್ತು ಬ್ರಿಟನ್ನುಗಳಿಗೆ ಸ್ವಂತದ ಯಾವ ಭವ್ಯ ನಾಗರಿಕತೆಯನ್ನೂ ಸೃಷ್ಟಿಸಿದ ಚರಿತ್ರೆಯಿಲ್ಲ; ಇರುವುದೆಲ್ಲಾ ಭಗ್ನಗೊಳಿಸುವ ಪರಂಪರೆ. ದೋಚಿ ಬಾಳುವುದು ಆ ಎರಡೂ ದೇಶಗಳ ಪ್ರಮುಖ ಲಕ್ಷಣ. ಕಬಳಿಸುವ ಶಕ್ತಿಯು ದುರಹಂಕಾರವನ್ನು ಬೆಳೆಸಿದೆ. ಆದ್ದರಿಂದ ಅವರು ಹೇಳಿದ್ದೇ ಪ್ರಜಾಪ್ರಭುತ್ವ, ಮುಕ್ತ ಸಮಾಜ, ವ್ಯಕ್ತಿ ಸ್ವಾತಂತ್ರ್ಯ ಮತ್ತು ಜೀವನ ಮೌಲ್ಯ. ಅಮೆರಿಕಾದ ಸಮಕಾಲೀನ ವ್ಯಕ್ತಿ ಸ್ವಾತಂತ್ರ್ಯ ಎಷ್ಟು ಜಾಳಾಗಿದೆಯೆಂದರೆ ಯಾವುದೇ ವಿಶ್ವವಿದ್ಯಾಲಯದ ಅಧ್ಯಾಪಕ ಪುಸ್ತಕ ಭಂಡಾರದಿಂದ ಏನು ಪುಸ್ತಕ ಪಡೆದು ಓದುತ್ತಾನೆಂಬ ಯಾದಿಯನ್ನು ದೇಶದ ಕೇಂದ್ರೀಯ ಪೊಲೀಸ್ ಕಚೇರಿ ಪಡೆಯುತ್ತದೆ. ಯಾದಿ ಕೊಡಲು ನಿರಾಕರಿಸಿದರೆ ಗ್ರಂಥಪಾಲನನ್ನು ದಸ್ತಗಿರಿ ಮಾಡುವ ಹಕ್ಕು ಸರ್ಕಾರಕ್ಕಿದೆ. ಇದು ಕೇವಲ ಒಂದು ಚಿಕ್ಕ ಉದಾಹರಣೆ. ಇಂತಹ ನೂರನ್ನು ಪಟ್ಟಿ ಮಾಡಬಹುದು. ಕ್ಯೂಬಾದ ಸರ್ಕಾರ ತನ್ನ ದೇಶದ ರಕ್ಷಣೆಗೆ ಬಿಗಿ ಕ್ರಮ ಅನುಸರಿಸಿದರೆ ಅದು ಸ್ವಾತಂತ್ರ್ಯದ ದಮನ, ಮಾನವ ಹಕ್ಕುಗಳ ಉಲ್ಲಂಘನೆ, ಎಂದೆಲ್ಲಾ ಅರಚುವ ಮತಿಭ್ರಷ್ಟರು ಅಮೆರಿಕಾದಲ್ಲಿ ಹಲವರಿದ್ದಾರೆ. ಹಾಗೆ ಪ್ರಚಾರ ಮಾಡಲು ಅವರ ಮಾಧ್ಯಮಗಳು ನೂರಾರಿವೆ. ಬೇರೆ ದೇಶಗಳಿಗೆ ಇವೇ ಮಾಧ್ಯಮಗಳು ಆದರ್ಶವಾಗಿ ಕಾಣುವುದು ಪ್ರಚಾರ ವೈಖರಿಯ ಯಶಸ್ಸು ಎನ್ನಬೇಕು. ಆ ದೇಶಗಳ ಮೌಢ್ಯವೂ ಒಂದು ಕಾರಣ. ಅಸೋಸಿಯೇಟೆಡ್ ಪ್ರೆಸ್ ಮತ್ತು ಸಿಎನ್‌ಎನ್‌ಗಿಂತಲೂ ದೊಡ್ಡ ಸುಳ್ಳುಗಾರರು ಎಲ್ಲೂ ದೊರೆಯುವುದಿಲ್ಲ. ಬುಷ್‌ಗೆ ಬ್ಲೇರ್ ಅಡಿಯಾಳಾಗಿರುವಂತೆ ಸಿಎನ್‌ಎನ್‌ಗೆ ಬಿಬಿಸಿ ಒಬ್ಬ ಶ್ರದ್ಧಾಳು. ಇದನ್ನು ಬ್ರಿಟಿಷ್ ಬೊಗಳೆ ಕಾರ್ಪೊರೇಷನ್ ಎಂದರೆ ಹೆಚ್ಚು ಔಚಿತ್ಯಪೂರ್ಣವಾಗಿರುತ್ತದೆ. ಸೋವಿಯೆತ್ ಒಕ್ಕೂಟದ ಪ್ರಾವ್ದಾ ಮತ್ತು ರೇಡಿಯೋ ಮಾಸ್ಕೋಗಳನ್ನು ಜರಿಯುತ್ತಿದ್ದ ಸಿಎನ್‌ಎನ್ ಮತ್ತು ಬಿಬಿಸಿ ಎಂತಹ ಹಸಿಸುಳ್ಳುಗಳನ್ನು ಹೊಸೆಯುತ್ತಾರೆಂಬುದು ಇರಾಕ್ ಯುದ್ಧದ ಸಂದರ್ಭದಲ್ಲಿ ವಿಶ್ವಕ್ಕೆ ಮನದಟ್ಟಾಯಿತು. ಈ ಬೊಗಳೆ ಕಾರ್ಪೊರೇಷನ್ನಿನ ಒಬ್ಬ ಮಹಿಳಾ ಬಾತ್ಮೀದಾರಳು ಬಾಗ್ದಾದಿನಿಂದ ವರದಿ ಮಾಡುತ್ತಾ ಹೇಳಿದಳು: "ಇಲ್ಲಿ ಕಾನೂನು ಕ್ರಮ, ನೀರು, ವಿದ್ಯುಚ್ಛಕ್ತಿ, ಇತ್ಯಾದಿ ಸೌಲಭ್ಯಗಳು ಇಲ್ಲದಿರುವುದರಿಂದ ಜನ ಅಸಮಾಧಾನ ತಾಳಿದ್ದಾರೆ. ಇವನ್ನೆಲ್ಲಾ

*೮ನೇ ಪುಟಕ್ಕೆ......*




ಸಂಪುಟ-೪ ಸಂಚಿಕೆ - ೧೦ ಮೇ ೨೦೦೩

*ಪ್ರಧಾನ ಸಂಪಾದಕ*

ಜಿ. ರಾಮಕೃಷ್ಣ

*ಸಂಪಾದಕ ಮಂಡಲಿ*

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಮಲ್ಲೇಪುರಂ ಜಿ. ವೆಂಕಟೇಶ್
ಬಿ. ವಿ. ವೀರಭದ್ರಪ್ಪ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ

*ವ್ಯವಸ್ಥಾಪಕರು*

ಎಸ್. ಸುರೇಂದ್ರ
ಎ. ಆರ್. ಉಡುಪ

*ಮುದ್ರಕ-ಪ್ರಕಾಶಕ*

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೯೨೬

*ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬಿಸಿ ಸೆಂಟರ್, ಕ್ರೆಸೆಂಟ್ ರಸ್ತೆ ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in
website :
www.navakarnatakabooks.com

# ಶಿಕ್ಷಣ ವ್ಯವಸ್ಥೆಗೆ ಇನ್ನೊಂದು ಕೊಡಲಿ ಪೆಟ್ಟು

**ಸಂಪಾದಕೀಯ**

ನಮ್ಮ ದೇಶದ ಸಾರ್ವಭೌಮತ್ವ ಮತ್ತು ಸ್ವಾವಲಂಬನೆಯ ಆಕಾಂಕ್ಷೆ ಜಾಗತೀಕರಣದ ಪ್ರಹಾರಕ್ಕೆ ಸಿಲುಕಿ ನಲುಗಿಹೋಗಿವೆ ಯೆಂಬುದನ್ನು ಶಿಕ್ಷಣ ಕ್ಷೇತ್ರದ ಹೊಸ ಸನ್ನಿವೇಶದಲ್ಲಿ ಸಹ ಕಾಣಬಹುದಾಗಿದೆ. ಉನ್ನತ ಶಿಕ್ಷಣಕ್ಕೆ ಹಣ ತೊಡಗಿಸುವುದನ್ನು ನಿಲ್ಲಿಸಿ ಪ್ರಾಥಮಿಕ ಶಿಕ್ಷಣಕ್ಕೆ ಆದ್ಯತೆ ನೀಡಬೇಕೆಂದು ಅನಭಿವೃದ್ಧ ದೇಶಗಳಿಗೆ ಗುನ್ನಾರ್ ಮಿರ್ಡಾಲನಂತಹ ಪ್ರಭೃತಿಗಳು ಉಪದೇಶ ನೀಡುತ್ತಾ ಬಂದಿದ್ದಾರೆ. ಒಂದಕ್ಕೆ ಕಡಿತವಿಲ್ಲದೆ ಇನ್ನೊಂದಕ್ಕೆ ಪೂರೈಕೆ ಸಾಧ್ಯವಿಲ್ಲದಂತಹ ಆರ್ಥಿಕ ಮುಗ್ಗಟ್ಟು ತಲೆದೋರದಿರುವಾಗ ಈ ಸಲಹೆ ಅನಪೇಕ್ಷಣೀಯ. ಎರಡನ್ನೂ ಬಿಟ್ಟು ಬೇರಾವುದೋ ಅನುಪಯುಕ್ತ ಬಾಬ್ತಿಗೆ ವೆಚ್ಚ ಮಾಡುವುದು ನಮ್ಮ ದೇಶಕ್ಕೆ ಹೊಸದಲ್ಲ.

ಮುಕ್ತ ಚಿಂತನೆಗೆ ಇಂಬುಕೊಡುವ ಉನ್ನತ ಶಿಕ್ಷಣದ ಮಾದರಿ ಹೇಗಿರಬೇಕೆಂಬ ಚರ್ಚೆ ನಮ್ಮಲ್ಲಿ ನಡೆದಿದೆ. ಅದು ಬೇರೆ ದೇಶಗಳ ಮಾದರಿಯ ಅಪರಾವತಾರವಲ್ಲ ಅಂದರೆ ಅದು ನಮ್ಮ ಸಾಮಾಜಿಕ ಅವಶ್ಯಕತೆಗಳ ಪೂರೈಕೆಗೆ ಸಾಧನ. ಅಭಿವೃದ್ಧ ರಾಷ್ಟ್ರಗಳು ತೊಡಗಿಸು ವಷ್ಟು ಹಣ ತೊಡಗಿಸಲು ನಮ್ಮಿಂದ ಸಾಧ್ಯವಿಲ್ಲ. ಸಹಜವಾಗಿಯೇ ಅಲ್ಲಿಯ ವ್ಯವಸ್ಥೆಯ ಪ್ರತಿರೂಪವನ್ನು ಇಲ್ಲಿ ಸೃಷ್ಟಿಸಬೇಕೆಂಬ ಸಡಗರ ಅನರ್ಥಕ. ಖಾಸಗೀತನವೊಂದೇ ಶಿಕ್ಷಣ ವ್ಯವಸ್ಥೆಯ ಲಕ್ಷಣವಾದರೆ ನಮ್ಮ ಸಾಮಾಜಿಕ ಅವಶ್ಯಕತೆ ಪೂರೈಸದು. ಏಕೆಂದರೆ, ಖಾಸಗಿಯ ಮೂಲ ಆಶಯ ಲಾಭ. ಅಲ್ಲದೆ ಸಮಾಜದ ಒಂದು ವಿಭಾಗಕ್ಕೆ ಮಾತ್ರ ಅದು ಉಣಬಡಿಸುತ್ತದೆ. ಅಂದರೆ ಸರ್ಕಾರದ ವಿಶಿಷ್ಟ ಜವಾಬ್ದಾರಿಯನ್ನು ಅದು ಹೊರುವುದಿಲ್ಲ. ಒಂದೇ ಸಾಮಾಜಿಕ ಗುಂಪಿಗೆ ಉನ್ನತ ಶಿಕ್ಷಣ ಲಭಿಸುವಂತಾದರೆ ಅದರ ಮೂಲ ಆಶಯ ವಾದ ಮುಕ್ತ ಚಿಂತನೆಗೆ ಕುತ್ತುಂಟಾಗುತ್ತದೆ. ಎಲ್ಲರಿಗೂ ಅಲ್ಲದಿದ್ದರೂ ಎಲ್ಲ ಗುಂಪುಗಳವರಿಗೂ ಅದು ಎಟುಕುವಂತಿರಬೇಕು. ಅವಕಾಶ ಗಳ ಸಮಾನ ಲಭ್ಯತ್ವವಿರಬೇಕಾದರೆ ಶಿಕ್ಷಣ ದುಬಾರಿಯಾಗಬಾರದು. ಇಂದಿನ ಕೇಂದ್ರ ಸರ್ಕಾರ ಹೇಳುವಂತೆ ಶಿಕ್ಷಣ ಸಂಸ್ಥೆಗಳು ಆರ್ಥಿಕ ಅಗತ್ಯಗಳನ್ನು ತಾವೇ ಪೂರೈಸಿಕೊಳ್ಳಬೇಕೆಂದು ಸಾಮಾನ್ಯೀಕರಿಸಿದರೆ ಶಿಕ್ಷಣವು ಎಲ್ಲರ ಕೈಗೂ ಎಟುಕುವಂತಿರುವುದಿಲ್ಲ.

ಸಂಪನ್ಮೂಲದ ಕೊರತೆಯಿಂದಾಗಿ ಸರ್ಕಾರವು ಉನ್ನತ ಶಿಕ್ಷಣದ ಭಾರ ಹೊರಲಾರದೆಂಬುದು ಒಂದು ಸಬೂಬು. ಆರ್ಥಿಕ ದಿವಾಳಿತನಕ್ಕೆ ಕಾರಣಗಳು ಹಲವು : ಅ) ಶ್ರೀಮಂತರಿಗೆ ತೆರಿಗೆ ವಿಧಿಸದಿರುವುದು; ಆ) ಆಯವ್ಯಯವನ್ನು ಸರಿದೂಗಿಸಲು ಸಾರ್ವಜನಿಕ ಸಂಪತ್ತನ್ನು ಬೇಕಾಬಿಟ್ಟಿ ವಿಲೇವಾರಿ ಮಾಡುವುದು. ಉದಾಹರಣೆಗೆ, ಐದು ಸಾವಿರ ಕೋಟಿ ಬೆಲೆಯ ಭಾರತ ಅಲ್ಯೂಮಿನಿಯಂ ಕಂಪನಿಯನ್ನು ಐನೂರು ಕೋಟಿಗೆ ಮಾರುವುದು ಮತ್ತು ನ್ಯಾಯಾಲಯ ಅದನ್ನು ಎತ್ತಿಹಿಡಿಯುವುದು. ಹೀಗೆ ಎಷ್ಟೋ ಕಾರಣಗಳಿವೆ. ನದಿಗಳ ಜೋಡಣೆಗೆ ಹತ್ತು ವರ್ಷದಲ್ಲಿ ೫೬೦ ಲಕ್ಷ ಕೋಟಿಗಳನ್ನು ಖರ್ಚು ಮಾಡಲು ಹೊರಡುವ ದೇಶಕ್ಕೆ ಶಿಕ್ಷಣ ಕ್ಷೇತ್ರವು ಹೊರೆಯೇ ? ಈಗ ನೀಡುತ್ತಿರುವುದಕ್ಕೆ ಇನ್ನೊಂದು ನೂರು ಕೋಟಿ ಸೇರಿಸಿದರೆ ಸಾಕು. ಗ್ಯಾಟ್ ಒಪ್ಪಂದದ ಪ್ರಕಾರ ತೆರಿಗೆಗಳನ್ನು ಖೋತಾ ಮಾಡಿ ಕಳೆದ ಹತ್ತು ವರ್ಷಗಳಲ್ಲಿ ದೇಶದ ಬೊಕ್ಕಸವು ಮೂವತ್ತು ಸಾವಿರ ಕೋಟಿಗಳನ್ನು ಕಳೆದುಕೊಂಡಿದೆಯೆಂದು ಅರ್ಥಶಾಸ್ತ್ರಜ್ಞ ಪ್ರಭಾತ್ ಪಟ್ನಾಯಕ್ ಹೇಳಿದ್ದಾರೆ. ರಾಷ್ಟ್ರೀಯ ಉತ್ಪಾದನೆಗೂ ತೆರಿಗೆಯ ಪ್ರಮಾಣಕ್ಕೂ ಬೇರೆ ದೇಶಗಳಲ್ಲಿರುವಂತೆ ಸಂಬಂಧ ಕಲ್ಪಿಸಿದರೆ ನಮ್ಮ ಸರ್ಕಾರವು ಜೋಳಿಗೆ ಹಿಡಿಯಬೇಕಾಗಿಲ್ಲ. ಆದರೆ ಪ್ರಭುತ್ವದ ಮೇಲೆ ಹಿಡಿತ ಸಾಧಿಸಿರುವವರು ವಿದೇಶಿ ಬಂಡವಾಳಿಗರು ಮತ್ತು ಅವರ ಸ್ಥಳೀಯ ಪ್ರತಿನಿಧಿಗಳು. ಅವರಿಗೆ ಶಿಕ್ಷಣದ ಪ್ರಸಾರ ಬೇಕಿಲ್ಲ; ಏನಿದ್ದರೂ ಅವರ ಲಾಭಾಂಶದ ಕಡೆಗೆ ಅವರ ಲಕ್ಷ್ಯ. ಶಿಕ್ಷಣಕ್ಕೆ ಹಣವಿಲ್ಲದ ದೇಶದಲ್ಲಿ ಬ್ಯಾಂಕುಗಳಿಂದ ಭಾರಿ ಮೊತ್ತದ ಸಾಲ ಪಡೆದು ಅದನ್ನು ಹಿಂದಿರುಗಿಸದೆ ನುಂಗಿರುವ ತಿಮಿಂಗಿಲಗಳನ್ನು ಕತ್ತರಿಸಿ ಹಾಕಬೇಕು. ಅವರಿಂದ ಎಪ್ಪತ್ತು ಸಾವಿರ ಕೋಟಿ ಬಾಕಿಯಿದೆ. ಅದನ್ನು ಪಡೆಯಲು ಕ್ರಮ ಜರುಗಿಸುವುದರ ಬದಲು ನಮ್ಮ ಅರ್ಥ ಸಚಿವರು ಚಿಕ್ಕ ಮೀನುಗಳಿಗಾಗಿ ಗಾಳ ಹಾಕುತ್ತಾರೆ.

ಶಿಕ್ಷಣ ಕ್ಷೇತ್ರವು ಈಗಾಗಲೇ ಉದ್ಯಮವಾಗಿಬಿಟ್ಟಿದೆ. ವಿದೇಶಿ ವಿಶ್ವವಿದ್ಯಾಲಯಗಳು ವಿದ್ಯಾರ್ಥಿಗಳನ್ನು ಹಿಡಿದು ಬುಟ್ಟಿಗೆ ಹಾಕಿಕೊಳ್ಳಲು ಪ್ರತಿದಿನ ನಮ್ಮ ನಗರಗಳಿಗೆ ಪ್ರತಿನಿಧಿಗಳನ್ನು ಕಳಿಸುತ್ತಿವೆ. ವಿಶ್ವ ವ್ಯಾಪಾರ ಸಂಘಟನೆಯ ನಿಯಮಗಳಲ್ಲಿ ಶಿಕ್ಷಣ, ಆರೋಗ್ಯ, ಕಾನೂನು, ನೀರು, ಅಂಚೆ ವ್ಯವಸ್ಥೆ ಪ್ರಕಾಶನ ಮುಂತಾದ ಸೇವೆಗಳನ್ನು ಸಲ್ಲಿಸುವ ಸಂಸ್ಥೆಗಳನ್ನೆಲ್ಲಾ ತೆರವು ಮಾಡಬೇಕೆಂಬ ಮಾರಕ ಸೂತ್ರಕ್ಕೆ ಬದ್ಧವಾಗಿ ನಮ್ಮ ಸರ್ಕಾರ ಶಿಕ್ಷಣ ಕ್ಷೇತ್ರದ ಜವಾಬ್ದಾರಿಯಿಂದ ಕಳಚಿಕೊಳ್ಳುತ್ತಿದೆ. ಒಪ್ಪಂದದಲ್ಲಿ ಇದನ್ನು ಸೇರಿಸುವುದರಿಂದ ಆಂತರಿಕ ಪ್ರತಿರೋಧವನ್ನೆದುರಿಸಲು ಅನಭಿವೃದ್ಧ ರಾಷ್ಟ್ರಗಳಿಗೆ ಸುಲಭವಾಗುತ್ತದೆಂದು ವಿಶ್ವ ವ್ಯಾಪಾರಿ ಸಂಘಟನೆ ಹೇಳಿಕೊಂಡಿದೆ. ಅಂದರೆ, ಗುಮ್ಮನನ್ನು ತೋರಿಸಿ ದೇಶದ ಜನರನ್ನು ಸುಮ್ಮನಿರಿಸಬಹುದೆಂಬ ಲೆಕ್ಕಾಚಾರ ಇದು. ಹೀಗೆ ತೆರವು ಮಾಡಿದ್ದರಿಂದ ನಮ್ಮ ದೇಶಕ್ಕೆ ಹೊರಗಿನಿಂದ ಬಂದ ವಿದ್ಯಾರ್ಥಿಗಳ ಸಂಖ್ಯೆ ಅತ್ಯಲ್ಪ. ಆದರೆ ೧೯೯೯ರಲ್ಲಿ ನಮ್ಮಿಂದ ಹೊರ ಹೋದವರ ಸಂಖ್ಯೆ ಇಪ್ಪತ್ತು ಸಾವಿರವಾದರೆ ೨೦೦೨ರಲ್ಲಿ ಅದರ ಮೂರು-ನಾಲ್ಕು ಪಟ್ಟು ಹೆಚ್ಚು.

ಹತ್ತನೆಯ ಪಂಚವಾರ್ಷಿಕ ಯೋಜನೆಯಲ್ಲಿ ಒಪ್ಪಂದದ ಪ್ರಭಾವ ಗಾಢವಾಗಿ ಪ್ರತಿಫಲಿತವಾಗಿದೆ. ಅಲ್ಲಿಯ ಕೆಲವು ನಿರ್ದೇಶನಗಳು ಇವು : ೧) ಒಪ್ಪಂದದ ಮರು ವಿಮರ್ಶೆಗೆ ಹಾದಿ ತೋರಿಸುವ ಸಮಿತಿಯೊಂದನ್ನು ನೇಮಿಸಬೇಕು. ಏಕೆಂದರೆ ವಿಶ್ವ ವ್ಯಾಪಾರಿ ಸಂಘಟನೆಯು ಇನ್ನೂ ಹೆಚ್ಚು ತೆರವಿಗಾಗಿ ಒತ್ತಡ ತರುತ್ತಿದೆ; ೨) ಉನ್ನತ ಶಿಕ್ಷಣ ಪಡೆಯಲು ಇಚ್ಛಿಸುವ ಹಿಂದುಳಿದ ವಿದ್ಯಾರ್ಥಿಗಳಿಗೆ ಸಾಲ ಸೌಲಭ್ಯ ಕಲ್ಪಿಸಲು ಶಿಕ್ಷಣ ಅಭಿವೃದ್ಧಿ ಬ್ಯಾಂಕಿನ ಸ್ಥಾಪನೆ; ೩) ಸಮಾನತೆಯ ಸೂತ್ರವನ್ನು ಒಪ್ಪಲು ಸಿದ್ಧವಿದ್ದರೆ ಖಾಸಗಿ ವಿಶ್ವವಿದ್ಯಾಲಯಗಳ ಸ್ಥಾಪನೆಗೆ ಅವಕಾಶ. (ಸಮಾನತೆಯ ಸೂತ್ರ ಎಂತಹುದೆಂಬುದನ್ನು ನ್ಯಾಯಾಲಯವು ಈಚಿನ ಸಾಮಾನ್ಯ ಪ್ರವೇಶ ಪರೀಕ್ಷೆ (ಸಿ.ಇ.ಟಿ.) ಸಂದರ್ಭದಲ್ಲಿ ತಿಳಿಸಿದೆ. ಅದರ ಪರಿಣಾಮ ಪೂರ್ಣ ಅಸಮಾನತೆಯೇ ಹೊರತು ಸಮಾನತೆಯಲ್ಲ); ೪) ಸರ್ಕಾರದ ಬೆಂಬಲದಿಂದ ಮುಕ್ತವಾದ ಖಾಸಗಿ ವಿಶ್ವವಿದ್ಯಾಲಯಗಳಲ್ಲಿ ವಿದೇಶಿ ವಿದ್ಯಾರ್ಥಿಗಳು ಹೆಚ್ಚಾಗಿರುವಂತೆ ಮಾಡುವುದು.

ಇಷ್ಟನ್ನು ಹೇಳಿ ಕಡೆಗೆ ಒಂದು ಸೂಚನೆ ನೀಡಲಾಗಿದೆ : ''ಅಭಿವೃದ್ಧಿಯ ಕಲ್ಪನೆ ಈಗ ಭಿನ್ನವಾಗಿದೆ, ವಿಸ್ತೃತವಾಗಿದೆ. ಸರಕುಗಳ, ಸೇವೆಗಳ ಮತ್ತು ಬೌದ್ಧಿಕ ಆಸ್ತಿಯ ಹಕ್ಕುಗಳ ನಿಯಂತ್ರಣದಲ್ಲಿ ಅಂತರರಾಷ್ಟ್ರೀಯ ಒಪ್ಪಂದಗಳ ಮಹತ್ವ ಹೆಚ್ಚಿದೆ. ಆದ್ದರಿಂದ ಸರ್ಕಾರದ ನೀತಿ ನಿಯಮಗಳನ್ನು ಕೈಬಿಟ್ಟು ಅಂತರರಾಷ್ಟ್ರೀಯ ಸಂರಚನೆಗಳಿಗೆ ಆದ್ಯತೆ ನೀಡಬೇಕು.'' ಹಣದ ಕೊರತೆ ಮುಂತಾದ ಸಬೂಬುಗಳನ್ನು ನೀಡುತ್ತಿರುವ ಸರ್ಕಾರವು ಸಾರ್ವಜನಿಕರಿಗೆ ವಂಚನೆ ಬಗೆಯುತ್ತಿದೆಯೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ನಮ್ಮ ದೇಶದ ಜನರ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಸಂದರ್ಭವನ್ನು ಕಡೆಗಾಣಿಸಿ ಹೊರಗಿನ ಕಪಟ ಪರಿಣತರ ಆಣತಿಯನ್ನು ಕಾರ್ಯಗತಗೊಳಿಸುವ ಸರ್ಕಾರಕ್ಕೆ ಛೀಮಾರಿ ಹಾಕಬೇಕು. ನಮ್ಮ ಜನರಿಗೆ ವಿದ್ಯೆ ಬೇಕೆ, ಹಾಗಿದ್ದರೆ ಅದಕ್ಕೆ ಶುಲ್ಕ ಕೊಡಲು ಅವರಿಗೆ ಎಷ್ಟು ಸಾಮರ್ಥ್ಯವಿದೆ,

ಸಾಮರ್ಥ್ಯವಿಲ್ಲದವರಿಗೆ ಸರ್ಕಾರದ ಬೆಂಬಲ ಎಷ್ಟಿರಬೇಕು, ಎಂಬಿತ್ಯಾದಿ ಅಂಶಗಳಿಗೆ ಒತ್ತು ಕೊಡುವುದು ನಮ್ಮ ದೇಶದ ಬಗ್ಗೆ ಮತ್ತು ಅದರ ಭವಿಷ್ಯದ ಬಗ್ಗೆ ಕಾಳಜಿ ಇರುವವರಿಗೆ ಪ್ರಸ್ತುತವಾಗಬೇಕು. ಅದನ್ನು ತುಚ್ಛೀಕರಿಸಿ ವಿದೇಶೀ ಆಳರಸರ ಕೈಗೊಂಬೆಗಳಾಗಿ ಕೆಲಸ ಮಾಡುವ ಸರ್ಕಾರವು ಜನವಿರೋಧಿ ಎನಿಸಿಕೊಳ್ಳುತ್ತದೆ. ಮತ್ತು ದೇಶದ ಬೌದ್ಧಿಕ ಸಾಮರ್ಥ್ಯವನ್ನು ಕುಗ್ಗಿಸಿ ಹಾಳುಗೆಡಹುತ್ತದೆ. ಕೇಂದ್ರದ ಮಾನವ ಸಂಪನ್ಮೂಲ ಸಚಿವ ಮುರಳಿ ಮನೋಹರ ಜೋಶಿ ೧೯೯೮ರಲ್ಲಿ ಯುನೆಸ್ಕೋ ಸಭೆಯಲ್ಲಿ ಭಾಗವಹಿಸಿದ್ದರು. ಪ್ಯಾರಿಸ್ಸಿನಲ್ಲಿ ನಡೆದ ಆ ಸಭೆಯಲ್ಲಿ ಎಲ್ಲ ದೇಶಗಳ ಪ್ರತಿನಿಧಿಗಳೂ ತಮ್ಮ ತಮ್ಮ ದೇಶಗಳಲ್ಲಿ ಶಿಕ್ಷಣ ವ್ಯವಸ್ಥೆಯ ಪರಿಪ್ರೇಕ್ಷ್ಯಗಳನ್ನು ಮಂಡಿಸಿದ್ದರು. ನಮ್ಮ ಸಚಿವ ಹೇಳಿದ್ದು ಭಾಗಶಃ ಹೀಗಿದೆ : "ಸಂಪನ್ಮೂಲಗಳನ್ನು ಕ್ರೋಢೀಕರಿಸಲು ಪ್ರಮುಖ ಯತ್ನಗಳನ್ನು ಮಾಡಲಾಗಿದ್ದು ಉನ್ನತ ಶಿಕ್ಷಣದ ಬಗ್ಗೆ ಸರ್ಕಾರವು ತನ್ನ ತೀವ್ರ ಬದ್ಧತೆಯನ್ನು ಪ್ರಕಟಿಸಬೇಕೆಂಬುದು ನಮ್ಮ ಆಶಯ. ಉನ್ನತ ಶಿಕ್ಷಣ ಸಂಸ್ಥೆಗಳು ತಮಗೆ ಅಗತ್ಯವಿರುವ ಸಂಪನ್ಮೂಲವನ್ನು ಸ್ವತಃ ತಾವೇ ಭರಿಸುವತ್ತ ಸಾಗಬೇಕೆಂಬುದು ನಮ್ಮ ಉದ್ದೇಶ. ಅದಕ್ಕಾಗಿ ಶಿಕ್ಷಣ ಶುಲ್ಕವನ್ನು ಹೆಚ್ಚಿಸಬಹುದು, ಖಾಸಗಿ ದಾನಗಳನ್ನು ಪಡೆಯಬಹುದು, ತಮ್ಮ ಪರಿಣತಿಯನ್ನು ಔದ್ಯಮಿಕ ಕ್ಷೇತ್ರಗಳಿಗೆ ನೀಡಿ ಹಣ ಸಂಗ್ರಹಿಸಬಹುದು ಮತ್ತು ಬೇರೆ ಹಲವು ವಿಧಾನಗಳನ್ನು ಅನುಸರಿಸಬಹುದು. ಖಾಸಗಿ ವಲಯಗಳಿಂದ ಹೀಗೆ ಹಣವನ್ನು ಸಂಗ್ರಹಿಸುವುದು ಸಮರ್ಥನೀಯವಷ್ಟೇ ಅಲ್ಲ, ಅದು ಅಪೇಕ್ಷಣೀಯ ಕೂಡ. ಅದರಿಂದ ಸಾರ್ವಜನಿಕ ಬೊಕ್ಕಸದ ಮೇಲಿನ ಒತ್ತಡ ಕಡಿಮೆಯಾಗುತ್ತದೆ." ಹೀಗೆ ಹೇಳುವಾಗ ಶ್ರೀ ಜೋಶಿಯವರಿಗೆ ನಮ್ಮ ದೇಶದ ಸಾಮಾಜಿಕ ದುರವಸ್ಥೆ ವಿದ್ಯಾರ್ಜನೆಗೆ ಬರುವವರ ಆರ್ಥಿಕ ಬಲಹೀನತೆ, ಮೊದಲ ತಲೆಮಾರಿನ ವಿದ್ಯಾರ್ಥಿಗಳಿಗಿರುವ ಭೀಕರ ಸಂಕಷ್ಟಗಳು, ಇವೆಲ್ಲಾ ಜ್ಞಾಪಕಕ್ಕೆ ಬರಲಿಲ್ಲ. ಪ್ಯಾರಿಸ್ಸಿನ ಹವಾನಿಯಂತ್ರಿತ ಸಭಾಂಗಣದಲ್ಲಿ ಹುಚ್ಚೆದ್ದು ಹೇಳಿದ್ದೂ ಅಲ್ಲ. ಅವರ ಸರ್ಕಾರವು ನಮ್ಮ ಶಿಕ್ಷಣ ಕ್ಷೇತ್ರದ ಮಾರ್ಪಾಡಿಗೆ ಸಲಹೆ ಕೇಳಿದ್ದು ಶಿಕ್ಷಣ ರಂಗದ ಪ್ರತಿಭಾವಂತರನ್ನಲ್ಲ. ಡಾ|| ಸಿ. ಎನ್. ಆರ್. ರಾವ್ ಅಂಥವರು ನಮ್ಮ ದೇಶದಲ್ಲಿದ್ದಾರೆಂದು ತಿಳಿಯಲು ಜೋಶಿಗೆ ಆಸಕ್ತಿಯಿಲ್ಲ. ಅವರಿಗೆ ತೋಚಿದ್ದು ಅಂಬಾನಿ-ಬಿರ್ಲಾ. ಪ್ಯಾರಿಸ್ಸಿನಿಂದ ಹಿಂದಿರುಗಿದ ಸಚಿವರು ಶಿಕ್ಷಣದ ಸುಧಾರಣೆಗೆ ಸಲಹೆ ನೀಡಬೇಕೆಂದು ಅವರನ್ನು ಕೇಳಿದರು, ಏಪ್ರಿಲ್ ೨೦೦೦ದಲ್ಲಿ ಅವರು ವರದಿ ನೀಡಿದರು. ಅವರ ಮುಖ್ಯ ಸಲಹೆಗಳು ಇವು: ಅ) ಶಿಕ್ಷಣದ ಕ್ಷೇತ್ರವು ಲಾಭದಾಯಕ ಮಾರುಕಟ್ಟೆಯಾಗಿ ಪರಿವರ್ತಿತಗೊಳ್ಳಲು ಕಾಲ ಸನ್ನಿಹಿತವಾಗಿದೆ; ಆ) ಶಿಕ್ಷಣದ ವೆಚ್ಚವನ್ನು ಸಂಪೂರ್ಣವಾಗಿ ವಿದ್ಯಾರ್ಥಿಗಳಿಂದಲೇ ಭರಿಸಬೇಕು; ಮತ್ತು ಇ) ಉನ್ನತ ಶಿಕ್ಷಣದ ಹಂತದಲ್ಲಿ ಹಲವು ವಿಭಾಗಗಳನ್ನು ಸಂಪೂರ್ಣವಾಗಿ ಮತ್ತು ಕೂಡಲೆ ಖಾಸಗೀಕರಣಗೊಳಿಸಬೇಕು.

ಯಾರಿಗೆ ಶಿಕ್ಷಣ ಎಂಬುದಕ್ಕೆ ಉತ್ತರ ಇಲ್ಲಿದೆ. ವಾಜಪೇಯಿ ಸರ್ಕಾರದ ಪ್ರಕಾರ ಯಾರಿಗೆ ಹಣ ತುಂಬುವ ಚೈತನ್ಯವಿದೆಯೋ ಅವರಿಗೆ ಮಾತ್ರವೇ ಶಿಕ್ಷಣ. ದೇಶದ ಸರ್ವಾಂಗೀಣ ಪ್ರಗತಿಗೆ ಇದು ಮಾರಕವಾದರೆ ಅವರಿಗೆ ಚಿಂತೆಯಿಲ್ಲ; ಅಂಬಾನಿ-ಬಿರ್ಲಾ ಹಾಗೂ ಅವರಂತಹ ದುಷ್ಟ ಸಂತತಿಯವರಿಗೆ ಮತ್ತು ಅವರೆಲ್ಲರ ವಿದೇಶಿ ಯಜಮಾನರಿಗೆ ಅನುಕೂಲವಾದರೆ ಸಾಕು ! ಯಾರಿಗೆ ಹಣ ತುಂಬಲು ಸಾಧ್ಯವಿಲ್ಲವೋ ಅವರು ಬೇರೆಯವರ ಕೊಟ್ಟಿಗೆ ಗುಡಿಸಿಕೊಂಡಿರಲಿ ಸಾಕು !! ತಂತ್ರಜ್ಞಾನ ಬಳಕೆಯನ್ನು ವ್ಯಾಪಕಗೊಳಿಸುವ ಉದ್ದೇಶವನ್ನು ಡಂಗೂರ ಬಾರಿಸಿ ಹೇಳುವ ವಾಜಪೇಯಿ ಸರ್ಕಾರಕ್ಕೆ ಅದು ಸಾಧ್ಯವಾಗಲು ಶಿಕ್ಷಣವು ಎಲ್ಲ ಸ್ತರಗಳಲ್ಲೂ ಹರಡಿಕೊಂಡಿರಬೇಕೆಂಬ ಪ್ರಾಥಮಿಕ ಜ್ಞಾನವೂ ಇಲ್ಲವೆಂದು ಮರುಗಬೇಕೋ, ಮೂರ್ಖತನವನ್ನು ಖಂಡಿಸಬೇಕೋ ನಮ್ಮ ದೇಶದ ನಾಗರಿಕರು ತೀರ್ಮಾನಿಸಬೇಕು. ಮೊದಲ ತಲೆಮಾರಿನ ಅಕ್ಷರಸ್ಥ ಕುಟುಂಬಗಳಿಂದ ಬರುವ ವಿದ್ಯಾರ್ಥಿಗಳು ಉನ್ನತ ಶಿಕ್ಷಣದ ಕ್ಷೇತ್ರಕ್ಕೆ ಕಾಲಿಡುವಂತಿಲ್ಲ. ಅಂದರೆ ಕಳೆದ ಐವತ್ತು ವರ್ಷಗಳ ಪ್ರಯತ್ನವನ್ನು ಒಮ್ಮೆಲೇ ವಿಸರ್ಜಿಸಿ ಹೊಸ ಅಧ್ಯಾಯ ಆರಂಭಿಸಹೊರಟಿದ್ದಾರೆ. ಅದು ನಮ್ಮ ದೇಶದ ಮುಕ್ಕಾಲು ಭಾಗದ ಜನರಿಗೆ ಕತ್ತಲೆಯ ಅಧ್ಯಾಯ, ಕರಾಳ ಶಾಸನ. ಈಗಾಗಲೇ ಪರಿಶಿಷ್ಟ ಜಾತಿ ಮತ್ತು ಬುಡಕಟ್ಟುಗಳಿಂದ ಬಂದ ವಿದ್ಯಾರ್ಥಿಗಳ ಶೇಕಡಾವಾರು ಪ್ರಮಾಣ ಕಡಿಮೆಯಾಗಿದೆ. ೧೯೫೭ರಲ್ಲಿ ಶೇ. ೧೩.೭೬ ಇದ್ದುದು ೧೯೯೯ರಲ್ಲಿ ಶೇ. ೧೨.೨೫ಕ್ಕೆ ಇಳಿದಿತ್ತು. ಸಂಖ್ಯೆಯಲ್ಲಿ ಹೆಚ್ಚಳ ಕಾಣಬಹುದು, ಆದರೆ ಪ್ರಮಾಣದಲ್ಲಿ ಕಡಿತವಾಗಿದೆ. ಹೊಸ ನೀತಿಯ ಹೊಡೆತದಿಂದ ಅದು ಇನ್ನೂ ಕಡಿಮೆಯಾಗಲಿದೆ. ಶಿಕ್ಷಣವು ಕೆಲವರ ಸ್ವತ್ತು ಮಾತ್ರವಾದಾಗ ನಮ್ಮ ಪ್ರಜಾಪ್ರಭುತ್ವದಲ್ಲಿ ಅಧಿಕಾರವೂ ಅಷ್ಟೇ ಸೀಮಿತ ಬಣದ ಸ್ವತ್ತಾಗುತ್ತದೆ. ಶ್ರೇಣೀಕೃತ ವ್ಯವಸ್ಥೆಯ ಪಿಡುಗನ್ನು ಹಲವು ಶತಮಾನಗಳಿಂದ ಅನುಭವಿಸಿರುವ ನಾವು ಮತ್ತೆ ಅದೇ ಕೂಪದಲ್ಲಿ ಬೀಳಲಿದ್ದೇವೆ. ಜಾಗತೀಕರಣದ ಹೆಸರಿನಲ್ಲಿ ವಾಜಪೇಯಿ ಸರ್ಕಾರ ನಮಗೆ ನೀಡುತ್ತಿರುವ ಬಳುವಳಿ ಇದು ! ಇಂತಹ ಸರ್ಕಾರ ನಮಗೆ ಬೇಕೆ ಎಂಬುದೇ ಮೂಲ ಪ್ರಶ್ನೆ.

ಶಿಕ್ಷಣಕ್ಕಾಗಿ ತೊಡಗಿಸಿದ ಹಣವೆಲ್ಲಾ ಸಂಬಳಗಳಿಗೇ ಹೋಗುತ್ತದೆ, ಇನ್ನು ವಿದ್ಯಾರ್ಥಿಗಳಿಗೆ ಸವಲತ್ತುಗಳು ಎಲ್ಲಿಂದ ಬರಬೇಕೆಂಬ ಮಾತು ನಮ್ಮ ಸರ್ಕಾರಗಳ ವಕ್ತಾರರಿಂದ ಆಗಿಂದಾಗ್ಗೆ ಹೊರಬರುತ್ತದೆ. ಇದಕ್ಕೆ ತಲೆದೂಗುವ ಬದಲು ಜನ ಇದರರ್ಥವನ್ನು ಗ್ರಹಿಸಬೇಕು. ಅರ್ಥ ಇಷ್ಟೆ: ನಮ್ಮ ಜನವಿರೋಧಿ ಹೊಲಸು ಆರ್ಥಿಕ ನೀತಿಗಳಿಂದಾಗಿ ನಾವು ತೊಡಗಿಸುತ್ತಿರುವ ಹಣವೇ ಅಲ್ಪ ಪ್ರಮಾಣದ್ದು. ಈಗಿಗಿಂತಲೂ ಕಡಿಮೆ ತೊಡಗಿಸಿದರೆ ಸಂಬಳಕ್ಕೂ ಸಾಲುವುದಿಲ್ಲವೆಂಬುದನ್ನು ಸಂಶೋಧನೆಯಿಂದ ತಿಳಿಯಬೇಕಾಗಿಲ್ಲ. ರಾಷ್ಟ್ರೀಯ ಉತ್ಪಾದನೆಯ ಶೇ. ೬ರಷ್ಟನ್ನು ಶಿಕ್ಷಣಕ್ಕೆ ತೆಗೆದಿಡಬೇಕೆಂಬ ಸೂತ್ರವನ್ನು ಅಂಗೀಕರಿಸಿ ಒಂದು ದಶಕವನ್ನು ಮೀರಿದೆ. ಆದರೆ ಅದಿನ್ನೂ ಶೇ. ೩ನ್ನು ಸಹ ಮುಟ್ಟಿಲ್ಲ. ತಿಮಿಂಗಿಲಗಳು ಕಬಳಿಸಲು ದೇಶದಲ್ಲಿ ಹಣವಿದೆ; ಸಾರ್ವಜನಿಕ ಅಗತ್ಯಗಳಿಗೆ ತೊಡಗಿಸಲು ಹಣವಿಲ್ಲ ಅಷ್ಟೇ. ಉನ್ನತ ಶಿಕ್ಷಣಕ್ಕೆ ಕಡಿಮೆ ಪ್ರಮಾಣದ ಖರ್ಚನ್ನು ತೋರಿಸಿದರೆ ಮಿಕ್ಕಿದ್ದು ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣಕ್ಕೆ ಸಿಗುತ್ತದೆಯೇ ಎಂದರೆ ಅದೂ ಇಲ್ಲ. ಕರ್ಮಕಾಂಡವನ್ನೋ, ಜ್ಯೋತಿಷ ಶಾಸ್ತ್ರವನ್ನೋ ಕಲಿಸಲು ಲಕ್ಷಗಟ್ಟಲೆ ಅನುದಾನ ನೀಡುವ ವೈಜ್ಞಾನಿಕ ಪ್ರತಿಭೆ ಮುರಳಿ ಮನೋಹರ ಜೋಶಿಯದು. ಜೊತೆಗೆ, ಸಂಸ್ಕೃತ ಸಂಭಾಷಣೆ ಕಲಿಸಲು ಒಂದೊಂದು ರಾಜ್ಯಕ್ಕೂ ಎರಡೆರಡು ಕೋಟಿ ಹಂಚುತ್ತಾರೆ. ಸಂಸ್ಕೃತ ಗ್ರಂಥಗಳ ಅಧ್ಯಯನ ಮಾಡುವ ಶಿಸ್ತು ಬೇರೆ, ಅಂಗಡಿಗೆ ಹೋಗಿ ಬಾಳೆಹಣ್ಣು ಕೊಳ್ಳಲು ಸಂಸ್ಕೃತ ಭಾಷೆ ಪ್ರಯೋಗಿಸುವುದು ಬೇರೆ. ಎಂಥದೋ ಭಾವುಕತೆಯ ತೆವಲಿಗಾಗಿ ಕೋಟಿಗಟ್ಟಲೆ ಖರ್ಚು ಮಾಡುವ ಕೇಂದ್ರಸರ್ಕಾರಕ್ಕೆ ಸಾಮಾಜಿಕ ಶೈಕ್ಷಣಿಕ ಅಗತ್ಯಗಳ ಪರಿಜ್ಞಾನ ಎಳ್ಳಷ್ಟೂ ಇಲ್ಲವೆಂಬುದು ಒಂದು ದುರಂತ.

ಹೀಗಿರುವಾಗ ನ್ಯಾಯಾಲಯವು ಶಿಕ್ಷಣ ಕ್ಷೇತ್ರದ ಬಗೆಗಿನ ಒಂದು ಆಜ್ಞೆಯಲ್ಲಿ ಇಂದಿನ ಸನ್ನಿವೇಶವನ್ನು ಇನ್ನೂ ಹೆಚ್ಚು ಜಟಿಲಗೊಳಿಸಿದೆ. ಅದೂ ಸೇರಿದಂತೆ ಇಡೀ ಶಿಕ್ಷಣ ಕ್ಷೇತ್ರವನ್ನು ಜನಸಾಮಾನ್ಯರ ಪರವಾಗಿರುವಂತೆ ಬದಲಾಯಿಸುವುದು, ಸುಗಮ ಪರ್ಯಾಯವನ್ನು ರಚಿಸಿಕೊಳ್ಳುವುದು, ಇಂದು ಹಿಂದೆಂದಿಗಿಂತಲೂ ಹೆಚ್ಚು ತುರ್ತಿನ ಅಗತ್ಯವಾಗಿದೆ. ಆ ದಿಸೆಯಲ್ಲಿ ಹೆಜ್ಜೆ ಹಾಕೋಣ.


ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ







*ಚಂದಾ ವಿವರಗಳು*

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

*ನವಕರ್ನಾಟಕ ಶಾಖೆಗಳು*

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☎ : ೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☎ : ೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☎ : ೪೨೪೩೦೨




ಏಪ್ರಿಲ್ ೨೦೦೩ರ "ಹೊಸತು" ಸಂಚಿಕೆಯಲ್ಲಿನ ಅರವಿಂದ ಚೊಕ್ಕಾಡಿ ಅವರ ಲೇಖನ "ಕೇನ್ಸ್, ಉದ್ಯೋಗ ಮತ್ತು ನಾವು" ವಿಶಿಷ್ಟವಾಗಿದೆ. ಲಾರ್ಡ್ ಕೇನ್ಸ್, ಸಾಯುತ್ತಿದ್ದ ಬಂಡವಾಳಶಾಹಿ ವ್ಯವಸ್ಥೆಗೆ ಸರ್ಕಾರಿ ಹಸ್ತಕ್ಷೇಪದ ಮೂಲಕ ಮರುಜನ್ಮ ಕೊಟ್ಟ ಶ್ರೇಯಸ್ಸಿಗೆ ಪಾತ್ರರಾದವರು. ಅವರ "ಜನರಲ್ ಥಿಯರಿ" ಆರ್ಥಿಕ ವಿಶ್ಲೇಷಣೆಯ ದಿಗಂತದಲ್ಲಿಯೇ ಕ್ರಾಂತಿಕಾರಿ ಕೃತಿ.

ಭಾರತದಂತಹ, ಸಾಮಾಜಿಕ ವೈಚಿತ್ರ್ಯಗಳನ್ನು ಹೊಂದಿರುವ, ಶ್ರಮ ಗೌರವದ ಕೊರತೆ ಎದ್ದು ಕಾಣುತ್ತಿರುವ ಅರ್ಥವ್ಯವಸ್ಥೆಯಲ್ಲಿ ಮುಖ್ಯವಾಗಿ ಸಾಂಸ್ಥಿಕ, ಸಾಮಾಜಿಕ ಬದಲಾವಣೆ ಜರೂರಾಗಿ ಆಗಬೇಕಿದೆ. ಇಂದು ಗ್ರಾಮೀಣ ಮಟ್ಟದಲ್ಲಿ ಅಸ್ತಿತ್ವಕ್ಕೆ ಬಂದಿರುವ ಸ್ವ-ಸಹಾಯ ಗುಂಪುಗಳು ಬದಲಾವಣೆಯ ಕಿಡಿಗಳಾಗುವುದರಲ್ಲಿ ಸಂದೇಹವಿಲ್ಲ.

*ಸೇಡಂ* **ಅಣ್ಣಾಸಾಗರ್ ಬಿ. ಆರ್.**

ಡಾ|| ವಸು ಅವರ 'ಭಾರತೀಯತೆ ಮತ್ತು ವೈವಿಧ್ಯತೆ' ಎಂಬ ಲೇಖನ ತುಂಬ ಅರ್ಥಪೂರ್ಣವಾದದ್ದು. ಅನೇಕ ಹೊಸ ಹೊಳಹುಗಳಿಂದ ಕೂಡಿದ ಈ ಲೇಖನ ಭಾರತದಲ್ಲಿ ಏಕರೂಪ ಸಂಸ್ಕೃತಿ ರೂಪುಗೊಳ್ಳದೆ ವೈವಿಧ್ಯಮಯವಾದ ಬಹುಸಂಸ್ಕೃತಿ ಸ್ವರೂಪ ಯಾಕೆ ಉಳಿದುಕೊಂಡಿತು ಎಂಬುದನ್ನು ತುಂಬ ಸೊಗಸಾಗಿ ವಿಶ್ಲೇಷಿಸಿದೆ. ಇಂಥ ಬರಹಗಳು ಹೆಚ್ಚು ಹೆಚ್ಚು ಪ್ರಕಟವಾಗಲಿ.

*ಮಧುಗಿರಿ* **ಎನ್. ವಿ. ಪದ್ಮಪ್ರದೀಪ್**

ಮಾನವ ಜನಾಂಗದ ಶತ್ರು ಅಮೆರಿಕಾ ಸರ್ಕಾರ – ಏಪ್ರಿಲ್ ತಿಂಗಳ ಸಂಪಾದಕೀಯ ಚಿಂತನೀಯವಾಗಿತ್ತು. ದೊಡ್ಡಣ್ಣನೆನಿಸಿದ ಅಮೆರಿಕಾ ಭಯೋತ್ಪಾದನೆ ಹೆಸರಲ್ಲಿ ತಾನೇ ಅದರಾಳಕ್ಕಿಳಿದು ಮಾನವತೆಯ ಜೊತೆ ಚೆಲ್ಲಾಟವಾಡುತ್ತಿರುವುದು ಅಕ್ಷಮ್ಯ ಅಪರಾಧ. ವಿಶ್ವಸಂಸ್ಥೆಯ ಮಾತನ್ನೂ ಅದು ಗಣನೆಗೆ ತೆಗೆದುಕೊಂಡಿಲ್ಲ ಅಂದ್ರೆ ಅದರ ಉದ್ಧಟತನ ಎಷ್ಟಿರಬೇಕು ? ಭಾರತವೂ ಇಂಥ ಘೋರ




ಯುದ್ಧದ ವಿರುದ್ಧ ಗಟ್ಟಿಯಾಗಿ ಸೊಲ್ಲೆತ್ತದಿರುವುದು ದುರಂತವೇ ಸರಿ !

*ಕಣಿವೆಬಿಳಚಿ* **ಸಂತೇಬೆನ್ನೂರು ಫೈಜ್ನಟ್ರಾಜ್**

### ಸಚಿವ ಶ್ರೀ ಬಾಬುರಾವ್ ಚವ್ಹಾಣ್ ಅವರಿಗೆ ಬರೆದ ಪತ್ರ ಗ್ರಂಥಾಲಯ ಪುಸ್ತಕಗಳ ಖರೀದಿ ಬಗ್ಗೆ

ಸಾರ್ವಜನಿಕ ಗ್ರಂಥಾಲಯ ಇಲಾಖೆಯಿಂದ ೨೦೦೨-೦೩ರ ಆರ್‌ಆರ್‌ಎಲ್‌ಎಫ್ ಯೋಜನೆಯಡಿ ನಾವು ಪ್ರಕಟಿಸಿರುವ 'ನಮ್ಮ ಪರಿಸರ' ಎಂಬ ಪುಸ್ತಕದ ೧೮೬ ಪ್ರತಿಗಳನ್ನು ಸರಬರಾಜು ಮಾಡುವಂತೆ ಆದೇಶ ಬಂದಿದೆ. ಪುಸ್ತಕಗಳನ್ನು ಮಾರ್ಚ್ ೨೯ನೇ ತಾರೀಖು ಅಥವಾ ಅದಕ್ಕಿಂತ ಮುಂಚೆ ಸರಬರಾಜು ಮಾಡತಕ್ಕದ್ದು ಎಂಬ ಆದೇಶ ಬಂದದ್ದು ೩೧ನೇ ತಾರೀಖು ಮಧ್ಯಾಹ್ನ. ಸಹಜವಾಗಿ ಆಯ್ಕೆಯಾಗಿ ನಿಗದಿತ ಅವಧಿಗೆ ಮುಂಚೆ ಸರಬರಾಜು ಮಾಡುವಂಥ ಇಷ್ಟು ಸರಳ ಕಾರ್ಯವನ್ನು, ಕೊನೆಯವರೆಗೂ ಗುಟ್ಟಾಗಿರಿಸಿಕೊಂಡು, ಅವಧಿ ಮುಗಿದ ನಂತರ ಆದೇಶ ಕಳಿಸಿರುವ ಕ್ರಮವನ್ನು ನೋಡಿದಾಗ, ಇದರ ಹಿನ್ನೆಲೆಯಲ್ಲಿ ಏನೋ ಇರಬಹುದು ಎಂಬ ಸಂಶಯ ಸಾಮಾನ್ಯ ಜನರಿಗೂ ಉಂಟಾಗುತ್ತದೆ. ಅವಧಿ ಮುಗಿದ ನಂತರ, ಈ ಸಂಸ್ಥೆಯ ಯಾವುದಾದರೊಂದು ಪುಸ್ತಕ ಸರಬರಾಜಿಗೆ ಆದೇಶ ನೀಡಿ ಕೈತೊಳೆದುಕೊಂಡರಾಯಿತು ಎಂಬ ಬುದ್ಧಿವಂತಿಕೆಯೂ ಇರಬಹುದು ! ಅಥವಾ ಪುಸ್ತಕ ಅದರ ಯೋಗ್ಯತೆಯಿಂದಲೇ ಸಾರ್ವಜನಿಕ ಗ್ರಂಥಾಲಯಗಳಿಗೆ ಹಾಗೂ ಪ್ರಶಸ್ತಿಗಳಿಗೆ ಆಯ್ಕೆಯಾಗಬೇಕು ಎಂದು ಭಾವಿಸುವ ನಾವು ಕೊನೆಯವರೆಗೂ ಯಾವುದೇ ಪ್ರಭಾವ ಬೀರದೆ ಅಥವಾ ಒತ್ತಡ ತರದೆ ಇದ್ದುದೂ ಇದಕ್ಕೆ ಕಾರಣವಿರಬಹುದೆ ಎಂದು ಸಂಶಯಪಡುವಂತಾಗುತ್ತದೆ. ಆಯ್ಕೆಯಾದ ಶೀರ್ಷಿಕೆಗಳನ್ನು ಬಹಿರಂಗಪಡಿಸದೆ, ಗೋಪ್ಯವಾಗಿಡಲು ಕಾರಣವೇನು ? ಆರ್‌ಆರ್‌ಎಲ್‌ಎಫ್ ಯೋಜನೆಯಡಿ ಆಯ್ಕೆ ಮಾಡಿದ ಶೀರ್ಷಿಕೆಗಳ ಪಟ್ಟಿಯನ್ನು ಈ ಕೂಡಲೆ ಪತ್ರಿಕೆಗಳಿಗೆ ಬಿಡುಗಡೆ ಮಾಡಬೇಕೆಂದು ಸಾರ್ವಜನಿಕ ಹಿತದೃಷ್ಟಿಯಿಂದ ಆಗ್ರಹಿಸುತ್ತೇವೆ. ಪುಸ್ತಕಗಳನ್ನು ಆಯ್ಕೆ ಮಾಡಲು ಯಾವ ಅಳತೆಗೋಲನ್ನು ಬಳಸಲಾಯಿತು; ಇದೆಲ್ಲ ಸಹಜವಾಗಿ, ಪಾರದರ್ಶಕವಾಗಿ ನಡೆಯಿತೆ ಎಂಬ ಸಂಶಯಕ್ಕೂ ಕಾರಣವಾಗುತ್ತದೆ.

ಪುಸ್ತಕ ಆಯ್ಕೆ ಹಾಗೂ ಅನಂತರ ಪ್ರಕಾಶಕರಿಗೆ ಆದೇಶ ಕಳುಹಿಸುವಲ್ಲಿ ನೀವು ಅನುಸರಿಸಿದ ಸಾಧುವಲ್ಲದ ಕ್ರಮಕ್ಕೆ ಪ್ರತಿಭಟನೆಯಾಗಿ, ಮೇಲಿನ ಪುಸ್ತಕವನ್ನು ಸರಬರಾಜು ಮಾಡದಿರಲು ತೀರ್ಮಾನಿಸಿದ್ದೇವೆ. ಇದು ಸಾರ್ವಜನಿಕ ತಿಳುವಳಿಕೆ ಸಂಬಂಧಪಟ್ಟಿರುವ ವಿಷಯವಾದ್ದರಿಂದ ಈ ಪತ್ರವನ್ನು ಪತ್ರಿಕೆಗಳಿಗೂ ಬಿಡುಗಡೆ ಮಾಡುತ್ತಿದ್ದೇವೆ.

*ನವಕರ್ನಾಟಕ ಪ್ರಕಾಶನ* **ಆರ್. ಎಸ್. ರಾಜಾರಾಮ್**

ಕೇಂದ್ರದ ಎನ್.ಡಿ.ಎ. ಸರ್ಕಾರದ ಪ್ರಧಾನಮಂತ್ರಿ ವಾಜಪೇಯಿಯ ಕೆಟ್ಟ ದರೋಡೆಕೋರ ನೀತಿಗಳನ್ನು ತಿಳಿಸುವಂತಹ ಲೇಖನವನ್ನು ಬರೆದು ತಿಳಿಸಿಕೊಟ್ಟ ಸೀಯಾರ್ಕೆಯವರಿಗೆ ಧನ್ಯವಾದಗಳು. ಪ್ರಸ್ತುತ ಸಂದರ್ಭದಲ್ಲಿ ವಿದೇಶಿ ರಾಷ್ಟ್ರಗಳ ಎಲ್ಲಾ ನಿಯಮಗಳಿಗೆ ಬದ್ಧರಾಗಿ ಇಡೀ ಭಾರತವನ್ನೇ ವಿದೇಶಿಯರಿಗೆ ಮಾರು ವಂತಹ ಕೆಲಸವನ್ನು ವಾಜಪೇಯಿ ಸರ್ಕಾರ ಮಾಡುತ್ತಿದೆ ಎಂಬುದನ್ನು ಈ ಲೇಖನದಿಂದ ತಿಳಿಯಬಹುದು.

*ಹೊನ್ನಾಯ್ಕನಹಳ್ಳಿ* **ನೆಲ್ಲೂರ ಕೆ. ಹನುಮೇಗೌಡ**

## ಬಂದಾ ಹಾಜಿರ್ ಹೈ !

ಇಂದು ಕೋಮು ಗಲಭೆಗಳಿಂದ ಇಡೀ ದೇಶವೇ ಹೊತ್ತಿ ಉರಿಯುತ್ತಿದೆ. ಅಮಾಯಕರು, ವೃದ್ಧರು, ಮಹಿಳೆಯರು ಮತ್ತು ಮಕ್ಕಳು ವಿನಾಕಾರಣ ದಹಿಸಿ ಹೋಗುತ್ತಿದ್ದಾರೆ.

೧೯೬೧ನೇ ಸಾಲಿನಲ್ಲಿ ನಾನು ರಾಯಚೂರಿನ ಆರೋಗ್ಯ ಇಲಾಖೆಯಲ್ಲಿ ಕೆಲಸಕ್ಕೆ ಹಾಜರಾದ ಹೊಸದರಲ್ಲಿ ನಡೆದ ಪ್ರಸಂಗವಿದು.

ರಾಯಚೂರಿನಲ್ಲಿ ಈಗಿರುವ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳವರ ಕಾರ್ಯಾಲಯದ ಬಳಿಯಲ್ಲಿಯೇ ನಾನು ರೂಮೊಂದರಲ್ಲಿದ್ದೆ. ಆಗ ನನ್ನ ವಯಸ್ಸು ೨೪ ವರ್ಷ.

ನಾನು ತಿರುಗಾಡಲು ಏಕಮಿನಾರ ಬಳಿಯ ಮಸೀದಿಯ ಮುಂದಿನಿಂದ ಹೋಗುವುದು ರೂಢಿ. ಒಂದು ದಿನ ನಾನು ಮಿನಾರನ್ನು ದಾಟಿ ಹೋಗುತ್ತಿದ್ದಾಗ ಬೆಳಗಿನ ೫-೩೦ ಗಂಟೆಯಾಗಿರಬಹುದು. ಇನ್ನೂ ಮಬ್ಬುಗತ್ತಲೆ.

'ಅದಾಬ್ ಅರಜ ಹೈ'– ಎಂಬ ದನಿ ಕೇಳಿಸಿತು.

ಅನತಿ ದೂರದಲ್ಲಿಯೇ ಬಿಳಿ ಗಡ್ಡದ, ಎಡಗೈಯಲ್ಲಿ ಉದ್ದನೆಯ ಕೋಲನ್ನು ಹಿಡಿದ ವೃದ್ಧರೊಬ್ಬರು ನಿಂತಿದ್ದರು. ನಾನು ರಾಯಚೂರಿಗೇ ಹೊಸಬ. ಇಲ್ಲಿ ನನ್ನ ಪರಿಚಿತರಾರೂ ಈ ವಯಸ್ಸಿನವರಿರಲಿಲ್ಲ. ಬಹುಶಃ ತಮ್ಮ ಪರಿಚಿತರಾರಿಗೋ ಆತ ನಮಸ್ಕರಿಸಿರಬಹುದೆಂದು ತಿಳಿದು ನಾನು ಮುಂದೆ ಸಾಗಿದೆ.

ಮರುದಿನವೂ ನನಗೆ ಅದೇ ರೀತಿಯ ಅನುಭವವಾಯಿತು.

ಮೂರನೆಯ ದಿನ ಅದೇ ಸ್ಥಳದಲ್ಲಿ ಆ ಮುಪ್ಪಿನ ಮನುಷ್ಯ ನನಗೆ ಮತ್ತೆ 'ಅದಾಬ್' ಸಲ್ಲಿಸಿದುದನ್ನು ಕಂಡು ಕುತೂಹಲಗೊಂಡು ನಿಂತೆ. ಪ್ರತಿವಂದಿಸಿ, 'ನಾನು ಈ ಊರವನಲ್ಲ. ನನ್ನ ಪರಿಚಯ ತಮಗೆ ತಿಳಿದಿರುವುದು ಅಸಾಧ್ಯ. ನನಗೆ ತಾವಾರೆಂಬುದು ಗೊತ್ತಿಲ್ಲ, ಆದರೂ ತಾವು ಕಳೆದ ಮೂರು ದಿನಗಳಿಂದ ನನ್ನಂಥ ಎಳೆಯನಿಗೆ 'ಅದಾಬ್' ಮಾಡುತ್ತೀರಲ್ಲ, ಏಕೆ ?' ಎಂದು ಕೇಳಿದೆ. ಆತ ಬಚ್ಚುಬಾಯಿ ತೆರೆದು ಮುಗುಳು ನಗುತ್ತ "ತಮ್ಮ ಮಾತು ಬಿಲ್‌ಕುಲ್ ಸಚ್ ಹೈ. ತಾವು ಪರ ಊರಿನವರೆಂಬುದು ನನಗೆ ಗೊತ್ತಾಗಿದೆ. ಹೊರಗಡೆಯಿಂದ ಬಂದವರಿಗೆ ಪರಸ್ಥಳಗಳಲ್ಲಿ ಹೊಂದಿಕೊಳ್ಳಲು ಅನೇಕ ವಸ್ತುಗಳ ಕೊರತೆ ಇರುತ್ತದೆ. ಆ ಕಾರಣ, ತಮಗೆ ಯಾವುದೇ ವಸ್ತುವಿನ ಅವಶ್ಯಕತೆ ಇದ್ದರೆ ನನಗೆ ಹುಕುಂ ಮಾಡಿರಿ. ತಮಗೆ ಮದತ್ ಮಾಡಲು ಏ ಬಂದಾ ಹಾಜಿರ್ ಹೈ" ಎಂದು ಹೇಳುತ್ತ ಎದುರಿನ ಮನೆಯೊಂದನ್ನು ನನಗೆ ತೋರಿಸುತ್ತ "ಇದು ನನ್ನ ಮನೆ. ಮೇರಾ ನಾಮ್ ಸೈಯ್ಯದ್ ಮುನಿರುಲ್ ಹಸನ್ ಹೈ" – ಎಂದು ಅನ್ನುತ್ತ ಆತ್ಮೀಯವಾಗಿ ಕೈ ಕುಲುಕಿದರು. ಎಂಥ ಹೃದಯ ವೈಶಾಲ್ಯವದು !

**– ಎಂ. ಸಿ. ಅಂಟಿನ, ಬೆಳಗಾವಿ**

## ಯುದ್ಧ

ಅಂದು ಮಹಾಭಾರತದಲ್ಲಿ ಪ್ರಾರಂಭವಾದ ದಾಯಾದಿಗಳ ಕುರುಕ್ಷೇತ್ರ ಕಾಳಗ ಇನ್ನೂ ಮುಂದುವರಿದಿದೆಯಲ್ಲಾ? ಇದಕ್ಕೆ ಕೊನೆ ಇಲ್ಲವೇ ? ಸಾವು ನೋವಿಗೆ ಸಮಾಪ್ತಿ ಇಲ್ಲವೆ ?

ಅಮೆರಿಕಾದ ಹೆಮ್ಮೆಯ ಅವಳಿ ಕಟ್ಟಡ, ಪೆಂಟಗನ್ ಹಾಗೂ ವಿಶ್ವಮಾರುಕಟ್ಟೆ ಸಂಕೀರ್ಣ ವಿಮಾನ ಡಿಕ್ಕಿಯಿಂದ ೧೧-೦೯-೨೦೦೧ ರಂದು ನೆಲಸಮ. ಕುಕೃತ್ಯದ ರೂವಾರಿ ಓಸಾಮಾ ಬಿನ್ ಲಾಡೆನ್, ಅಮೆರಿಕಾ ಪಾಲಿನ ಆಧುನಿಕ ಭಸ್ಮಾಸುರ. ಹಿರಿಯಣ್ಣನ ಅಹಮಿಕೆಗೆ ಕುಂದುಂಟಾದಾಗ ಬುಷ್, ಬುಸ್ ಎಂದು ಬುಸುಗುಡುತ್ತ ಸಾರಿದ ಭಯೋತ್ಪಾದನೆಯ ವಿರುದ್ಧ ವಿಶ್ವಸಮರ. ಅಪ್ಘಾನಿಸ್ತಾನದ ಮೇಲೆ ಬಾಂಬುಗಳ ಸುರಿಮಳೆ, ಎದುರಾಳಿಗಳ ಅಂತ್ರಾಕ್ಸ್ ಜೈವಿಕ ತೆರೆಮರೆ ಸಮರ. ಎರಡು ಯುದ್ಧಗಳ ನಡುವಿನ ಅವಧಿಯನ್ನು ಶಾಂತಿ ಎಂದು ಕರೆಯಬೇಕಾಗಿದೆ. ಇಂದು ಎರಡನೇ ಕೊಲ್ಲಿ ಯುದ್ಧದ ಸಾವು ನೋವುಗಳು ನಮ್ಮ ಮುಂದಿವೆ.

ದೇವರ ಹೆಸರಿನಲ್ಲಿ, ಧರ್ಮದ ಹೆಸರಿನಲ್ಲಿ ಮತಾಂಧತೆಯ ಮುಸುಕಿನಲ್ಲಿ 'ಜೇಹಾದ' ಧರ್ಮಯುದ್ಧ ಧರ್ಮ ಹುಟ್ಟಿದಾಗಿನಿಂದ ಅವಿರತ ಸಾಗಿದೆ. ಮನುಷ್ಯನಿಂದಲೇ ಮಾನವ ಜನಾಂಗದ ಬೇಟೆ. ಸುಂದರ, ಸಮೃದ್ಧ ಸೃಷ್ಟಿಯ ನಡುವೆ ಪಶು, ಪಕ್ಷಿ, ಕ್ರಿಮಿಕೀಟದಂತೆ ಸಹಬಾಳ್ವೆಯಿಂದ ಬದುಕಬಾರದೆ ಮಾನವ ? ಮಾನವನ ಮಹಾಮಹಿಮೆ ಹಿರಿಮೆ, ಗರಿಮೆ ಅಡಗಿದೆಯಲ್ಲವೆ ಮಾನವೀಯ ಮೌಲ್ಯಗಳಲ್ಲಿ? ಬಸವನೆಂದಂತೆ 'ದಯವೇ ಧರ್ಮದ ಮೂಲವಲ್ಲವೆ ?'

ಪ್ರಾಣಿಗಳಲ್ಲಿ ಬಲಿಷ್ಠವೇ ಮುಖಂಡ. ಮಾನವರಲ್ಲಿ ಶಾರೀರಿಕವಾಗಿ ದುರ್ಬಲವಾದ ವಯೋವೃದ್ಧನೂ ಬುದ್ಧಿಬಲದಿಂದ ನಾಯಕನಾಗಬಲ್ಲ, ರಾಷ್ಟ್ರಪತಿಯಾಗಬಲ್ಲ. ಎಲ್ಲವನ್ನೂ ದೈಹಿಕ ಬಲದಿಂದ ಗೆಲ್ಲಲು ಸಾಧ್ಯವೆ? ಎಲ್ಲದಕ್ಕೂ ಶಸ್ತ್ರಾಸ್ತ್ರಗಳು ಉತ್ತರವಾಗಲಾರದು. ಶಿಕ್ಷೆಯಲ್ಲೂ ಮನೋಪರಿವರ್ತನೆಯ ಮಾನವೀಯ ತುಡಿತ ಮಿಡಿತ ಇರಬೇಕಲ್ಲವೇ ? ಭೂಮಿಯ ಮೇಲೆ ನಡೆದ ಯುದ್ಧಗಳೆಷ್ಟು? ಅದರಿಂದುಂಟಾದ ಸಾವು ನೋವುಗಳ ಲೆಕ್ಕವೆಷ್ಟು? ಯುದ್ಧದಿಂದ ಸಾಧಿಸಿದ್ದಾದರೂ ಏನು ? ಒಬ್ಬರ ಅಹಮಿಕೆ ತಣಿಸಲು, ಒಬ್ಬರ ಅಹಮಿಕೆ ಮಣಿಸಲು, ಹೊನ್ನು, ಮಣ್ಣಿಗಾಗಿ ಕದನವಲ್ಲವೆ ? ಯುದ್ಧ ಮಾಡುವವರೆಲ್ಲ ಸ್ವಾರ್ಥಿಗಳೆ. ಯಾವ ಯುದ್ಧದಿಂದ ಮಾನವ ಜನಾಂಗದ ಉದ್ಧರವಾಗಿದೆ ಹೇಳಿ ?

ಹಾಗಾದರೆ ಯುದ್ಧ ನಮಗೆ ಬೇಡವೆ ? ಯುದ್ಧ ನಮಗೆ ಬೇಕು ! ಯುದ್ಧ ವಿಶ್ವಕ್ಕೆ ಬೇಕೆಬೇಕು ! ಮಹಾಮಾರಿ ಹೆಮ್ಮಾರಿ ರೋಗಗಳಾದ ಮಲೇರಿಯಾ, ಮೈಲಿಬೇನೆ, ಸಿಡುಬು, ಕಾಲರಾ, ಏಡ್ಸ್, ಮುಂತಾದ ರೋಗಗಳ ತಡೆಗಟ್ಟಲು, ತೊಲಗಿಸಲು ಮಾನವ ಜನಾಂಗದ ಉಳಿವಿಗಾಗಿ ಸಮರ ಸಾರಬೇಕು.

ಯುದ್ಧದ ಬೀಜಗಳು ಹುದುಗಿದ್ದೆಲ್ಲಿ? ಮನೋಭೂಮಿಯಲ್ಲಿ ಅಲ್ಲವೆ ಅಡಗಿದ್ದು ? ಇಂದಿನ ತುರ್ತು ಅವಶ್ಯಕತೆ ಎಂದರೆ ಯುದ್ಧ ಬೀಜಗಳ ಹುರಿದು, ಶಸ್ತ್ರಾಸ್ತ್ರಗಳನ್ನು ನಿಷ್ಕ್ರಿಯಗೊಳಿಸುವುದು. ಕಾಯಕದಲ್ಲಿ ಕೈಲಾಸವನ್ನು ಕಂಡ ಶರಣರಂತೆ ಸುಖ, ಶಾಂತಿ, ನೆಮ್ಮದಿಗಾಗಿ, ಸಮೃದ್ಧಿಗಾಗಿ ಶಾಂತಿಯ ಬೀಜಗಳನ್ನು ಉತ್ತಿ ಬಿತ್ತಿ ಬೆಳೆಯುವುದು. ಇದು ನಾವು ಮುಂದಿನ ಜನಾಂಗಕ್ಕೆ ಕೊಡುವ ಕೊಡುಗೆಯಾಗಿದೆ.

ಸಹಬಾಳ್ವೆಯಿಂದ ಬದುಕಿಗೆ ಬೆಲೆ ತಂದು 'ವಿಶ್ವಮಾನವ ಧರ್ಮ' ಬೆಳೆಸಿ ಸುಖಿ, ಸಮೃದ್ಧ ಸಮಾಜ ನಿರ್ಮಿಸಬೇಕಾಗಿದೆ. ಕಟ್ಟಿದ್ದನ್ನು ಕೆಡುವುದು ಕಾಲಧರ್ಮ. ಚಲ ಬಿಡದೆ ಧೃತಿಗೆಡದೆ ಕಟ್ಟುವುದು ಮನುಜಧರ್ಮ.

**ಅಪ್ಪಾಸಾಹೇಬ ಅಲಿಬಾದಿ**
ಅಭಿವೃದ್ಧಿ ಅಧಿಕಾರಿ, ಭಾರತೀಯ ಜೀವವಿಮಾ ನಿಗಮ, ಅಥಣಿ ಶಾಖೆ.

---

## ಇಂತವರೂ ಇದ್ದಾರೆ !

ಪ್ರಾಮಾಣಿಕತೆ ಎಂದರೆ ನಂಬಿಕೆಗೆ ಅರ್ಹವಾದುದು. ಇದು ಶಬ್ದಕೋಶದೊಳಗಿನ ಮಾತಾಯಿತು. ''ಹಾಮಾನಾ''ರು ಕಲ್ಲೊಡೆಯುವ ಹೆಂಗಸರು ಮತ್ತು ಅವರ ಮಕ್ಕಳಲ್ಲಿ ''ಸಂಸ್ಕೃತಿ'' ಪದದ ಅರ್ಥವನ್ನು ಕಂಡಂತೆ, ಪ್ರಾಮಾಣಿಕತೆಯ ದರ್ಶನವನ್ನು ನಮ್ಮ ಶೀರನಹಳ್ಳಿಯ ತೋಟಮ್ಮ ನನಗೆ ಮಾಡಿಸಿದಳು.

ಕಳೆದ ವರ್ಷದ ಜೂನ್ ತಿಂಗಳು ತೋಟಮ್ಮ ತನ್ನ ಮೊಮ್ಮಗನನ್ನು ಶಾಲೆಗೆ ದಾಖಲು ಮಾಡಲು ಬಂದಿದ್ದಳು. ಹಣ್ಣಾದ ಮುದುಕಿಯ ಖಡ್‌ಕ್ ಮಾತ್ ಕೇಳಿ, ಖಾಸಗಿಯಾಗಿ ಒಂದೆರಡು ಮಾತಾಡಿದೆ. ಅದರ ಸಾರಾಂಶ ಹಿಂಗೈತಿ.

ಹಾಲುಗಲ್ಲದ ಹಸುಳೆ ತೋಟಮ್ಮ-ತಂಗಿಯೊಡನೆ-ಗಲ್ಲಿಗಳಲ್ಲಿ ಕುಂಟಾಬಿಲ್ಲೆ-ಕಣ್ಣಾಮುಚ್ಚಾಲೆ ಆಡಿಕೊಂಡಿದ್ದಾಗಲೇ ಈ ದೇಶಕ್ಕೆ ಸ್ವಾತಂತ್ರ್ಯ ಸಿಕ್ತು. ದೇಶ ಸ್ವತಂತ್ರ ಆದಮ್ಯಾಲೆ ದೇಶೀಯ ಸಂಸ್ಥಾನಗಳ ವಿಲಿನೀಕರಣ ಆರಂಬಾತು. ಆದ್ರ ಅದ ಸಮಯಕ್ಕೆ ಹೈದ್ರಾಬಾದ್-ಕರ್ನಾಟಕ ಭಾಗದಲ್ಲಿ ಪಠಾಣರಿಂದ ಲೂಟಿ-ಅತ್ಯಾಚಾರಗಳು ಭುಗಿಲೆದ್ದವು. ಕಂಗಾಲಾದ ಜನತೆ ಮನೆ ಮಠ ತೊರೆದು-ಮುಂಬಯಿ ಕರ್ನಾಟಕದತ್ತ ಸುರಕ್ಷಿತ ಸ್ಥಳಗಳಿಗೆ ಬಂದು ಠಿಕಾಣಿ ಹೂಡಿದರು.

ಇಂತವರಲ್ಲಿ ಕೊಪ್ಪಳ ಜಿಲ್ಲೆ ಕಾತರಕಿಯಿಂದ ಮುಂಡರಗಿ ತಾಲೂಕಾ ಶೀರನಹಳ್ಳಿಗೆ ಬಂದು ನೆಲಸಿದ ತೋಟಮ್ಮನ ಕುಟುಂಬವೂ ಒಂದು. ಶೀರನಹಳ್ಳಿ ತುಂಗಭದ್ರ ನದಿ ದಡದಲ್ಲಿರುವ ಒಂದು ಚಿಕ್ಕ ಹಳ್ಳಿ. ಜನ ಮಾತ್ರ ದೊಡ್ಡ ಮನಸ್ಸಿನವರು. ಬಂದ ಹೊಸತರಲ್ಲಿ ಗುಡಿ-ಗುಂಡಾರದಲ್ಲಿ ನೆಲಸಿದ ತೋಟಮ್ಮನ ತಾಯಿ-ತಂಗಿ, ಜನ ಪರಿಚಿತರಾದ ಮೇಲೆ ಊರ ಮಧ್ಯದ ಬ್ರಾಹ್ಮಣರ ಬಯಲು ಜಾಗೆಯಲ್ಲಿ ಗುಡಿಸಲೊಂದನ್ನು ಕಟ್ಟಿಕೊಂಡು ನೆಲಸತೊಡಗಿದರು. ಮುಂದೆ ತೋಟಮ್ಮನ ಮದುವೆಯಾಗಿ ಅಲ್ಲಿಯೇ ಇರತೊಡಗಿದರು.

ಪ್ರತಿ ವರ್ಷ ಬಾಗಿಲಪಟ್ಟಿ (ಮನೆ-ತೆರಿಗೆ) ಕಟ್ಟಬೇಕು. ಅನೇಕ ಜನ ''ಪಾವತಿ ನಿನ್ನ ಹೆಸರಿನ್ಯಾಗ ಹರಿಸು, ಮುಂದ ಜಾಗ ನಿನ್ನದ ಆಗತ್ತೆ'' ಅಂದ್ರು. ಅದಕ್ಕೆ ತೋಟಮ್ಮ ''ನಾ ಹುಟ್ಟಿರೋದು ಒಬ್ಬರಿಗೆ. ಇನ್ನೊಬ್ಬರ ಹೆಸರ ಹೇಳಾಕ ನಾ ತಯಾರಿಲ್ಲ'' ಅಂತ ೩೦ ವರ್ಷಗಳಿಂದ ಮಾಲಿಕರ ಹೆಸರಿನಲ್ಲೆ ಪಾವತಿ ಹರಿಸಿದಳು.

ಅಂದು ಸ್ಥಳ ನೀಡಿದ ಮಾಲಿಕ ಈಗಿಲ್ಲ. ಅವರ ಮಕ್ಕಳು ನೌಕರಿ ಮಾಡುತ್ತಾ ಪಟ್ಟಣದಲ್ಲಿ ಉತ್ತಮ ಸ್ಥಿತಿಯಲ್ಲಿದ್ದಾರೆ. ಅಜ್ಜಿಯ ಪ್ರಾಮಾಣಿಕತೆ ಕಂಡು ಆ ಸ್ಥಳವನ್ನು ಅವಳಿಗೇ ಬಿಟ್ಟುಕೊಡಲು ತೀರ್ಮಾನಿಸಿದ್ದಾರೆ. ಪ್ರಾಮಾಣಿಕತೆಗೆ ಇದಕ್ಕಿಂತ ದೊಡ್ಡ ಗೌರವ ಇನ್ನೇನು ಬೇಕು ?

*   *   *

ಒಂದು ಶನಿವಾರ ಸಂಜೆ ರಾಣೆಬೆನ್ನೂರಿನ ತಹಶಿಲ್ದಾರ ಕಚೇರಿ ಎದುರುಗಡೆ ಭಿಕ್ಷುಕನೊಬ್ಬ ಭಿಕ್ಷೆ ಬೇಡುತ್ತಿದ್ದಾನೆ. ಸೈಕಲ್ಲೇರಿ ಬರುವ ಮಹಾನುಭಾವರತ್ತ ಭಿಕ್ಷೆಗಾಗಿ ಕೈಚಾಚಿದ. ಹತ್ತಿರ ನೋಟಿದೆ, ೮ ರೂ. ಚಿಲ್ಲರೆ ಕೊಡು ಎಂದು ೮ ರೂ. ಗಳನ್ನು ಜೇಬಿಗೆ ಸೇರಿಸಿ ಸೈಕಲ್ಲ ತುಳಿಯುತ್ತಾ ಹೊರಟ್ಹೋಗಿಬಿಟ್ಟ. ಇತ್ತ ಭಿಕ್ಷುಕನ ಚೀರಾಟ ಜೋರಾಯ್ತು. ''ಎಪ್ಪಾ ತಂದಿ ನೀನು ರೊಕ್ಕಾ ಕೊಡೋದು ಬ್ಯಾಡ, ನನ್ನ ಚಿಲ್ಲರನಾದ್ರು ಕೊಡೊ ತಂದಿ'' ಎಂದು ಗೋಳಿಟ್ಟ. ಈ ಹೊತ್ತಿಗೆ ಹಣ ದೋಚಿದವ ಕಣ್ಮರೆಯಾಗಿದ್ದ.

ಅಕ್ಕ-ಪಕ್ಕದ ಜನ ಈತನ ಚೀರಾಟ ಕೇಳಿಸಿಕೊಂಡ್ರು, ನಾನು ಮೆಲ್ಲಗೆ ಹೋಗಿ ಮಾತನಾಡಿಸಿದೆ. ಮೂಲತಃ ಶಿವಮೊಗ್ಗ ಜಿಲ್ಲೆಯವನಾದ ಈತ ಮೊದಲು ಲಾರಿ ಚಾಲಕನಾಗಿದ್ದನಂತೆ. ಮಾಸಿದ ಚಾಲಕರ ಪರವಾನಿಗೆ ಪತ್ರವನ್ನು ತೋರಿಸಿದ. ಅಪಘಾತವೊಂದರಲ್ಲಿ ಕಾಲನ್ನು ಕಳೆದುಕೊಂಡು, ದುಡಿಯಲು ದುರ್ಬಲನಾದ. ಹೆಂಡತಿ-ಮಕ್ಕಳು ಈತನನ್ನು ಮನೆಯಿಂದ ಹೊರತಳ್ಳಿದಾಗ ಭಿಕ್ಷಾಟನೆ ಪ್ರಾರಂಭವಾಯಿತು ಎಂದು ಕಂಬನಿಗರೆಯುತ್ತ ಹೇಳುತ್ತಿರುವಾಗಲೇ ನನ್ನ ಬಸ್ಸು ಬಂತು – ಹೊರಟು ಬಂದೆ.

ತೀರಾ ಹಿಂದುಳಿದ - ಹಳ್ಳಿಯ ಅಜ್ಜಿಯ ನಡವಳಿಕೆ ಹಾಗೂ ಆಧುನಿಕತೆಯ ಅಮಲಿನಲ್ಲಿ ಬೆಳೆಯುತ್ತಿರುವ ನಗರದ ಕರುಣೆ-ಮಮಕಾರ ಮರೆತು, ಭಿಕ್ಷುಕರಿಂದ ಹಣ ದೋಚುವ ಕಟುಕರ ನಡುವಿನ ಅಂತರ ಅಗಾಧವಾಗಿದೆಯಲ್ಲವೆ ?

**ರವಿ. ಸೋ. ದೇವರಡ್ಡಿ**
ಶಿಕ್ಷಕರು, ಹೊನ್ನ ಹಮ್ಮಿಗಿ-೫೮೨ ೧೧೮
ಮುಂಡರಗಿ ತಾಲೂಕು, ಗದಗ ಜಿಲ್ಲೆ

೩ನೇ ಪುಟದಿಂದ.... (ಈ ತಿಂಗಳು)

ಒದಗಿಸಿದರೆ ಅಮೆರಿಕಾ ಮತ್ತು ಬ್ರಿಟನ್ನಿನ ಸೈನ್ಯವನ್ನು ಅವರು ಸ್ವಾಗತಿಸುತ್ತಾರೆ. ಅವರಿಗೆ ಬಿಡುಗಡೆ ಹರ್ಷ ತಂದಿದೆ.'' ಹೀಗೆ ಒರಲಿದ ಆ ಮಹಿಳೆಗೆ ಮೆಸಪೊಟೇಮಿಯಾ ನಾಗರಿಕತೆಯ ಪ್ರಾಚೀನತೆ ಮತ್ತು ವೈಭವದ ಪರಿಚಯ ಹಾಳಾಗಲಿ, ಇರಾಕಿನ ಕಳೆದ ನೂರು ವರ್ಷಗಳ ಇತಿಹಾಸದ ಗಂಧವೂ ಇಲ್ಲ! ಇದೇ ಬೊಗಳೆ ಟಿವಿಯಲ್ಲಿ ನಡೆದ ಒಂದು ಚರ್ಚೆಯಲ್ಲಿ ಒಬ್ಬ ಪತ್ರಕರ್ತಳು ವಾದಿಸುತ್ತಿದ್ದಳು: ''ಈ ಇರಾಕಿನ ಜನರ ಮನಸ್ಸಿಗೆ ಏನು ರೋಗ ತಗುಲಿದೆ? ಎಲ್ಲೆಲ್ಲೂ ಲೂಟಿ. ಆಸ್ಪತ್ರೆಯೊಂದರಿಂದ ಯಾವನೋ ಒಂದು ಇಂಕ್ಯುಬೇಟರ್ ಹೊತ್ತು ತರುತ್ತಿದ್ದ. ಅವನಿಗೇನಾಗಿದೆ? ಅದರಿಂದ ಅವನೇನು ಮಾಡುತ್ತಾನೆ?'' ಈ ಸಾಧ್ವೀಮಣಿಗೆ ತಿಳಿದಿದೆ: ತನ್ನ ದೇಶದ ಹಾಗೂ ಅಮೆರಿಕಾದ ಸೈನ್ಯ ಇರಾಕಿನ ಅತಿ ಪ್ರಶಸ್ತವಾದ ಚಾರಿತ್ರಿಕ ದಾಖಲೆಗಳನ್ನು ಹಾಳುಮಾಡಿದೆ, ಕಲೆಯನ್ನು ಸುಟ್ಟು ಬೂದಿ ಮಾಡಿದೆ, ಪ್ರಾಚೀನ ಗ್ರಂಥಭಂಡಾರಗಳಿಗೆ ಬೆಂಕಿ ಇಕ್ಕಿದೆ, ಪುರಾತನ ಅವಶೇಷಗಳನ್ನು ಕದ್ದು ತೆಗೆದುಕೊಂಡು ಹೋಗಿದೆ, ಉತ್ಖನನಗಳನ್ನು ವಿರೂಪಗೊಳಿಸಿದೆ. ಇಡೀ ಇರಾಕಿನ ಸಂಪತ್ತನ್ನು ಕೊಳ್ಳೆ ಹೊಡೆಯುತ್ತಿರುವ ದೇಶಗಳ ಪ್ರತಿನಿಧಿಯಾಗಿ ಈ ಮಹಿಳೆಗೆ ಯಾವನೋ ಒಬ್ಬ ಒಂದು ಇನ್‌ಕ್ಯುಬೇಟರ್ ಕದ್ದೊಯ್ದರೆ ಅದು ಮನೋವೈಕಲ್ಯವನ್ನು ಸೂಚಿಸುತ್ತದೆ. ಅವಳ ದೇಶ ಕೊಳ್ಳೆ ಹೊಡೆದರೆ ಅದು ಸಭ್ಯತೆ! ಇದು ''ಸ್ವತಂತ್ರ, ವಸ್ತುನಿಷ್ಠ'' ವರದಿಗೆ ''ಹೆಸರಾದ'' ಬೊಗಳೆ ಕಾರ್ಪೊರೇಷನ್ನಿನ ಮಾದರಿ. ಅವನ್ನೇ ನೆಚ್ಚಿ ಮೆಚ್ಚಿಕೊಳ್ಳುತ್ತಿರುವ ನಮ್ಮ ದೇಶದ ಅಗಾಧ ಪಂಡಿತರ ವ್ಯಕ್ತಿತ್ವಕ್ಕೆ ಬೇರೆ ಕನ್ನಡಿ ಹಿಡಿಯುವ ಅಗತ್ಯವಿಲ್ಲ.

ಇರಾಕಿನಲ್ಲಿ ಕಳೆದ ಎರಡು ದಶಕಗಳಲ್ಲಿ ಧ್ರುವೀಕರಣ ನಡೆದದ್ದು ಸದ್ದಾಂ ಪರ ಮತ್ತು ವಿರೋಧ ಎಂಬ ನೆಲೆಯಲ್ಲಿ. ಎರಡು ಬಣಗಳೂ ಪೂರ್ತಿಯಾಗಿ ಇರಾಕ್ ಪರ. ಅಮೆರಿಕಾದ ಭಂಟರು ದೇಶದ ಹೊರಗೆಲ್ಲೋ ಉಳಿದಿದ್ದರು. ಈಗ ಅವರಿಗೆ ಕಿರೀಟ ತೊಡಿಸಲು ಬುಷ್ ಹಾತೊರೆಯುತ್ತಿದ್ದಾನೆ. ಆಳ್ವಿಕೆ ಸುಲಭವಾಗಲು ಜನರನ್ನು ಒಡೆಯಬೇಕು; ಅದಕ್ಕಾಗಿ ಶಿಯಾ-ಸುನ್ನಿ ಭೇದವನ್ನು ಎತ್ತಿಹಿಡಿಯಲಾಗುತ್ತಿದೆ, ಮೌಢ್ಯದ ಆಚರಣೆಗಳನ್ನು ಜೀವಂತಗೊಳಿಸುವ ತಂತ್ರ ಅನುಸರಿಸಲಾಗುತ್ತಿದೆ. ಅಮೆರಿಕಾ ಮತ್ತು ಬ್ರಿಟನ್ ಇರಾಕಿನಿಂದ ತೊಲಗಬೇಕೆಂದು ಶಿಯಾ-ಸುನ್ನಿಗಳಿಬ್ಬರೂ ಒಂದಾದರೆ ಅದಕ್ಕೆ ಅಪಾರ್ಥ ಕಲ್ಪಿಸಿ ಅಮೆರಿಕಾ ಶಿಯಾಗಳನ್ನು ಬೇರೊಂದು ಬಣವನ್ನಾಗಿ ನೋಡುತ್ತದೆ. ಈ ಮಧ್ಯೆ ಕಮ್ಯುನಿಸ್ಟರು ಮಧ್ಯಪ್ರವೇಶ ಮಾಡಲು ಬಹಿರಂಗವಾಗಿ ಕಣಕ್ಕೆ ಇಳಿದಿದ್ದಾರೆ.

ಈ ಹೊಸ ಶತಮಾನದ ಆದಿಯಲ್ಲಿ ಒಂದು ಸ್ವತಂತ್ರ, ಸಾರ್ವಭೌಮ, ಸಂಪದ್ಭರಿತ ದೇಶವನ್ನು ಆಕ್ರಮಿಸಿ, ಅಮೆರಿಕಾ - ಬ್ರಿಟನ್ ನೆಲೆಯೂರಿ, ತಮ್ಮದೇ ಅಧಿಕಾರ ಸ್ಥಾಪಿಸಿಕೊಂಡು, ಐಶ್ವರ್ಯವನ್ನು ನುಂಗುತ್ತಾ ಹಿರಿಹಿರಿ ಹಿಗ್ಗುತ್ತಿದ್ದಾರೆಂಬುದನ್ನು ನಂಬಲು ಸಾಧ್ಯವಾಗುತ್ತಿಲ್ಲ. ನಮ್ಮ ದೇಶವು ವಸಾಹತಾಗಿದ್ದಾಗ ಎಷ್ಟು ಜನ ಪ್ರಜ್ಞಾವಂತರು ನೆಮ್ಮದಿ ಕಳೆದುಕೊಂಡು ಸದಾ ಒಳಗೊಳಗೇ ಬೆಂದು ಹೋಗುತ್ತಿದ್ದರೆಂಬುದನ್ನು ತಿಳಿದುಕೊಳ್ಳಲು ಈಗಿನ ಇರಾಕಿನ ಪ್ರಸಂಗ ಸಹಾಯ ಮಾಡುತ್ತದೆ. ಬೇರೊಂದು ರಾಷ್ಟ್ರದೊಳಕ್ಕೆ ಸೈನ್ಯ ನುಗ್ಗಿಸಿ, ನಗರಗಳನ್ನು ಪುಡಿಪುಡಿ ಮಾಡಿ, ತನ್ನದೇ ಹಣವನ್ನು ಚಲಾವಣೆಗೆ ತಂದು, ಜನರ ತಲೆಯ ಮೇಲೆ ಕಾಲಿಟ್ಟು ಹಿಂಸಿಸಿ-ಅವಮಾನಿಸಿ-ನಗ್ನವಾಗಿಸಿ ನಗುತ್ತಾ ನಿಲ್ಲುವ ಸೈನಿಕರು, ಅಧಿಕಾರಿಗಳು ಮತ್ತು ಬುಷ್-ಬ್ಲೇರರಿಗೆ ಯಾರೂ ಹೊಡೆದು ಚಚ್ಚಿ ಅಟ್ಟಲಾಗದೇ ಎಂಬ ತವಕ ಕಾಡುತ್ತದೆ. ಭಯೋತ್ಪಾದಕರೆಂದು ಎಲ್ಲರನ್ನೂ ದಂಡಿಸುವ ಈ ಖೂಳರಿಗಿಂತ ಬೇರೆ ಭಯೋತ್ಪಾದಕರುಂಟೆ ಎಂಬ ಉದ್ವಿಗ್ನತೆ ಮೂಡುತ್ತದೆ. ಮಾರಕಾಸ್ತ್ರಗಳು ಇರಲಿಲ್ಲ, ಸಿಗಲಿಲ್ಲ; ಆದರೆ ಮರಣ ಹಿಂಡುಹಿಂಡಾಗಿ ಹರಿದುಬಂತು. ಒಂದಷ್ಟು ಮಾರಕಾಸ್ತ್ರಗಳನ್ನು ತನ್ನ ದೇಶದಿಂದ ಇರಾಕಿಗೆ ಕಳಿಸಿ ಅವನ್ನೇ ಇರಾಕಿನಲ್ಲಿ ದೊರೆತ ಮಾರಕಾಸ್ತ್ರಗಳೆಂದು ಪ್ರದರ್ಶಿಸುವ ಬುಷ್‌ಗೆ ಹೇಗೂ ಸಿಎನ್‌ಎನ್ - ಬೊಗಳೆ ಕಾರ್ಪೊರೇಷನ್ನುಗಳಿವೆ! ಈಗ ಸಿರಿಯಾ, ಇರಾನ್‌ಗಳ ಮೇಲೂ ವಕ್ರಕಣ್ಣು. ವಿಶ್ವಸಂಸ್ಥೆಯ ಕಾರ್ಯದರ್ಶಿ ಕೋಫಿ ಅನ್ನಾನ್‌ಗೆ ಉಸಿರು ಅಡಗಿಹೋಗಿದೆ. ಎಲ್ಲರಿಗೂ ಉರಿಯುವ ಮನೆಯಲ್ಲಿ ಗಳ ಹಿರಿಯುವ ಸನ್ನಾಹ. ಎಂಥಾ ಅದ್ಭುತ ಮಾನವ ಸಂಸ್ಕೃತಿ! ಅದರ ಅಧಿನಾಯಕ ಬುಷ್‌ಗೆ ಎಷ್ಟು ಹಿಡಿ ಶಾಪ ಹಾಕೋಣ? ಆ ರಣಹದ್ದಿನ ಕಣ್ಣು ಭಾರತದ ಮೇಲೆ ಬೀಳಲು ಇನ್ನೆಷ್ಟು ದಿನ ಹಿಡಿಯಬಹುದು? ಅರಬ್ ರಾಷ್ಟ್ರಗಳ ಆ ಅಯೋಗ್ಯ ರಾಜ-ರಾಜಕುಮಾರರಿಗೆ, ಶೇಕ್‌ಗಳಿಗೆ, ಬುದ್ಧಿ ಬರುವುದೆಂದು ಮತ್ತು ಆ ದೇಶಗಳ ಜನರ ಪೀಡನೆ ನಿಲ್ಲುವುದೆಂದು?

ಹೀಗಿರುವಾಗ ಲಕ್ನೋದ ರಾಜಕುಮಾರಿ ಹೇಳುತ್ತಿದ್ದಾರೆ: ಅಪ್ರತಿಮ ಪ್ರತಿಭಾವಂತ ಜನನಾಯಕ, ದೀನದಲಿತರ ಉದ್ಧಾರಕ ಕಾನ್ಶೀರಾಮರ ದೊಡ್ಡ ಮೂರ್ತಿಯೊಂದನ್ನು ಲಕ್ನೋದ ಕೇಂದ್ರಭಾಗದಲ್ಲಿ ನಿಲ್ಲಿಸುತ್ತಾರಂತೆ ಮತ್ತು ಹಾಗೆ ನಿಲ್ಲಿಸಲು ಸ್ವತಃ ಕಾನ್ಶೀರಾಮರೇ ಅನುಮತಿ ನೀಡಿದ್ದಾರಂತೆ. ಮಾಯಾವತಿ ಮತ್ತು ಕಾನ್ಶೀರಾಮರಿಗೆ ದೊರೆ ಓಸಿಮಾಂಡಿಯಾಸ್‌ನ ಪ್ರತಿಮೆಯ ಕತೆ ತಿಳಿದಿರಬೇಕೆಂದು ನಿರೀಕ್ಷಿಸುವುದು ತಪ್ಪಾಗುತ್ತದೆ. ಆದರೆ ಅಂತಹ ಯಾವ ಪ್ರತಿಮೆಯನ್ನಾದರೂ ಬೀಳಿಸಲು ಬರುವ ಅಮೆರಿಕಾ ಬ್ರಿಟನ್ನಿನ ಸೈನ್ಯಗಳನ್ನು ತಡೆಗಟ್ಟಲು ನಮ್ಮ ದೇಶ ದಿಟ್ಟತನದ ಸಾಮರ್ಥ್ಯ ಪ್ರದರ್ಶಿಸುತ್ತದೆಂದು ನಿರೀಕ್ಷಿಸೋಣ.

(signature)

---

**ಕೈಫಿ ಆಜ್ಮಿಯವರ ಎರಡು ಕವಿತೆಗಳು**

# ಗಝಲ್

೧

ನಾವಿಂದು ಚಂದ್ರನ ಊರಿಂದ ಮರಳಿದೆವು
ಅಲ್ಲಿಯೂ ಕಲ್ಲು ದೇವರುಗಳ ಕಂಡೆವು.

ಗೋಡೆಗಳು ಎಲ್ಲೆಡೆ ನಿಂತಿವೆ
ಎಲ್ಲಿ ಹೋಯಿತು ಕರುಣಾಮಯಿ ನೆರಳು?

ಅಡವಿಯ ಬಿರುಗಾಳಿ ಸುಳಿಯುತ್ತಿದೆ ಇತ್ತ
ಜೋಕೆ, ಈ ಕಾಗದದ ನಗರ ಹಾರಿ ಹೋದೀತು!

ಲೈಲಾ ಮತ್ತೊಮ್ಮೆ ಹುಟ್ಟಿ ಬಂದಿದ್ದಾಳೆ, ಇಲ್ಲಿ
ಅವಳಿಗೆ ಹೃದಯ ಕೊಡಬಲ್ಲ ಭಾತಿಯ ಮಜನು ಇದ್ದಾನೆಯೆ?

ಹೃದಯದಲ್ಲಿರುವಷ್ಟು ನೆತ್ತರ ತನ್ನಿ
ಈ ಭೂಮಿಗೆ ಇಂದು ಹೊಸ ಸ್ನಾನದ ತಹತಹ

ಮರುಭೂಮಿಗಳು ರಕ್ತದ ಮಡುವಿನಲ್ಲಿ ಕುದಿಯುತ್ತಿವೆ
ಮತ್ತೆ ಫರಾತ್ ನದಿ ತೀರದಿಂದ ಮರಳಿದ್ದಾರೆ ಬಾಯಾರಿದವರು.



ಅನುವಾದ: ವಿಭಾ ತಿರಕಪಡಿ
ಕುಬಸದ ಗಲ್ಲಿ, ಮಹಾಲಿಂಗಪುರ, ಬಿಜಾಪುರ ಜಿಲ್ಲೆ - ೫೮೭ ೩೧೨

೨

ನಾನು ಬಯಸುವ ಆ ಜಗತ್ತು ಸಿಗುತ್ತಿಲ್ಲ
ಆ ಹೊಸ ಭೂಮಿ ಹೊಸ ಆಗಸ ಕಾಣುತ್ತಿಲ್ಲ

ಹೊಸ ಭೂಮಿ ಹೊಸ ಆಗಸ ದೊರೆತರೂ
ಹೊಸ ಮನುಷ್ಯರ ಗುರುತು ಸಿಗುತ್ತಿಲ್ಲ

ನನ್ನ ಕೊಲೆ ಮಾಡಿದ ಖಡ್ಗ ಸಿಕ್ಕರೂ ಕೂಡ
ಕೊಲೆಗಾರನ ಕೈಯ ಗುರುತು ಸಿಗುತ್ತಿಲ್ಲ

ಅದು ನನ್ನ ಊರು ಅದು ನನ್ನೂರಿನ ಒಲೆ
ಅದರಲ್ಲಿ ಬೆಂಕಿಯಷ್ಟೇ ಅಲ್ಲ ಹೊಗೆ ಕೂಡ ಕಾಣುತ್ತಿಲ್ಲ

ದೇವರು ಸಿಗುತ್ತಿಲ್ಲವೆಂಬುದೇನು ಮಹಾದುರಂತವಲ್ಲ
ನನಗೆ ನನ್ನದೇ ಹೆಜ್ಜೆಗಳ ಗುರುತು ಸಿಗುತ್ತಿಲ್ಲ

ಗುಂಪಿನೊಳಗೆ ನಿಂತು ಹುಡುಕುತ್ತಿದ್ದೇನೆ
ಎಲ್ಲೂ ನಿನ್ನ ಮೊಗದ ನಿಶಾನೆ ಕಾಣುತ್ತಿಲ್ಲ



# ನದಿ ಜೋಡಣೆಯೆಂಬ ಮಳೆಬಿಲ್ಲು ಹಾಗೂ ಹಿತ್ತಲ ಮೋಕ್ಷ

*ನೀರಿನ ಸಮಸ್ಯೆ ಭುಗಿಲೆದ್ದಾಗಲೆಲ್ಲ ಕುರ್ಚಿಯಲ್ಲಿ ಕೂತ ಪ್ರಭುಗಳು ದೂರದ ನದಿ ಸಂಪನ್ಮೂಲಗಳ ಕನಸನ್ನು ಜನರ ಕಣ್ಣಿಗೆ ತುಂಬುವ ಯಶಸ್ವಿ ನಾಟಕ ಆಡುತ್ತಲೇ ಬಂದಿದ್ದಾರೆ. ಆ ಯೋಜನೆ ಯಶಸ್ವಿಯಾಗುತ್ತದೆಯೇ ? ಯೋಜನೆಗೆ ಅಗತ್ಯವಾದ ಸಂಪನ್ಮೂಲಗಳ ಸಂಗ್ರಹಣೆ ಸಾಧ್ಯವೇ ? ಉಹ್ಞುಂ, ಪ್ರಶ್ನೆಗಳನ್ನು ಕೇಳುವುದು ಯುಗಧರ್ಮವೇ ಅಲ್ಲ! 'ಗಂಗಾ-ಕಾವೇರಿ' ಜೋಡಣೆ ರಾಜಕಾರಣಿಗಳಿಗೆ ಸಿಕ್ಕಿರುವ ಹೊಸ ಮಳೆಬಿಲ್ಲು. ದಕ್ಷಿಣ ಭಾರತದಲ್ಲಿ ತಲೆದೋರಿರುವ ನೀರಿನ ಕೊರತೆ ಹಾಗೂ ಕಾವೇರಿ ವಿವಾದದಿಂದಾಗಿ ಗಂಗಾ-ಕಾವೇರಿ ಜೋಡಣೆ ಯೋಜನೆಗೆ ಚಾಲನೆ ಸಿಕ್ಕಿದೆ. ಸುಪ್ರೀಂ ಕೋರ್ಟ್ ಕೂಡ ಯೋಜನೆಯನ್ನು ತ್ವರಿತವಾಗಿ ಪೂರೈಸುವಂತೆ ಕೇಂದ್ರ ಸರ್ಕಾರಕ್ಕೆ ತಾಕೀತು ಮಾಡಿದೆ.*

**ರಘುನಾಥ ಚ. ಹ.**

**ಯಾ**ವುದೋ ಒಂದು ಬೆಟ್ಟದ ಗರ್ಭದಿಂದ, ಅರಣ್ಯದ ಒಡಲಿನಿಂದ ಎಳೆಯಾಗಿ ಹುಟ್ಟುವ ನೀರ ಹರಿವು, ನಂತರದಲ್ಲಿ ಸಣ್ಣ ಸಣ್ಣ ಜಲಮೂಲಗಳನ್ನು ಅರಗಿಸಿಕೊಳ್ಳುತ್ತ, ತನ್ನ ಹರಿವಿನುದ್ದಕ್ಕೂ ಹಸಿರನ್ನು ಸೃಷ್ಟಿಸುತ್ತ ಜೀವಸೆಲೆಯನ್ನು ಪೋಷಿಸಿ ಸಾಗುತ್ತ ಅಂತಿಮವಾಗಿ ಸಾಗರದಲ್ಲಿ ಕೊನೆಗೊಳ್ಳುವ ಪರಿ ವಿಸ್ಮಯ ಹುಟ್ಟಿಸುತ್ತದೆ. ನೀರಿನ ಪ್ರಯಾಣದ ಈ ಘಟ್ಟಗಳು ಪ್ರಕೃತಿಯ ಸುಸಂಬದ್ಧ ಜೋಡಣೆಯ ಚಿತ್ರದಂತೆ ಕಾಣುತ್ತವೆ. ಪ್ರಕೃತಿಯ ಇನ್ನೊಂದು ಚಿತ್ರವಾದ ಮನುಷ್ಯ ಕೂಡ ನದಿಯ ಒಡಲಿನ ಹರವಿನಲ್ಲಿಯೇ ಬೆಳೆದವನು. ನದಿ ಪಾತ್ರದಲ್ಲಿಯೇ ನಾಗರಿಕತೆಗಳು ಮೊಳೆತಿವೆ, ವಿಕಾಸ ಹೊಂದಿವೆ, ಅವಸಾನವನ್ನೂ ಕಂಡಿವೆ. ಆಗೆಲ್ಲ ಜನ ಗುಂಪು ಗುಂಪಾಗಿ ನದಿ ತೀರಗಳಲ್ಲಿ ವಾಸಿಸುತ್ತಿದ್ದರು. ನದಿಗೆ ಅಂಟಿಕೊಂಡೇ ಬದುಕುತ್ತಿದ್ದರು. ಜನಸಂಖ್ಯೆ ಸ್ಫೋಟಿಸುತ್ತಾ ಹೋದಂತೆ ನದಿ ಪ್ರಾಂತಗಳಿಂದ ದೂರದ ಪ್ರದೇಶಗಳಲ್ಲಿ ನೆಲೆ ಕಂಡುಕೊಳ್ಳುವುದು ಜನರಿಗೆ ಅನಿವಾರ್ಯವಾಯಿತು. ಇದೆಲ್ಲ ಹಳೆಯ ಕತೆ. ನಾಗರಿಕತೆಯ ಆರಂಭದ ದಿನಗಳಲ್ಲಿ ನದಿ ಬಯಲುಗಳಿದ್ದಲ್ಲಿಗೆ ಹೋಗಿ ನೆಲೆ ಕಂಡುಕೊಳ್ಳುತ್ತಿದ್ದ ಮನುಷ್ಯ, ಆಧುನಿಕ ನಾಗರಿಕತೆಯ ಇವತ್ತಿನ ಸಂದರ್ಭದಲ್ಲಿ ತಾನು ಇದ್ದಲ್ಲಿಗೇ ನದಿಗಳನ್ನು ತಿರುವಿಕೊಳ್ಳುವ ಪ್ರಯತ್ನದಲ್ಲಿದ್ದಾನೆ. ಅಂದರೆ ನದಿಗಳನ್ನು ಪಳಗಿಸಲು ಪ್ರಯತ್ನ ನಡೆಸಿದ್ದಾನೆ.

ನಾಗರಿಕತೆಯ ಹಾದಿಯುದ್ದಕ್ಕೂ ನದಿಯೊಂದಿಗಿನ ಮನುಷ್ಯನ ಬಾಳುವೆ ಸೌಹಾರ್ದಯುತವಾಗಿಯೇನೂ ಇಲ್ಲ. ನದಿ ಪ್ರಾಂತಗಳಲ್ಲಿಯೇ ಅರಳುತ್ತಿದ್ದ ಮನುಷ್ಯನ ಬದುಕು, ನದಿ ಪ್ರಾಂತಗಳಲ್ಲಿಯೇ ಮಣ್ಣಾದ ಉದಾಹರಣೆಗಳು ಸಾಕಷ್ಟು. ತೀರಾ ಈಚಿನ ದಿನದವರೆಗೂ ಮನುಷ್ಯನನ್ನು ಕಾಡುವ ಅತಿ ದೊಡ್ಡ ಪ್ರಕೃತಿ ವಿಕೋಪಗಳಲ್ಲೊಂದಾಗಿ ನದಿ ಪ್ರವಾಹ ಪರಿಗಣಿತವಾಗಿತ್ತು. ಕಾಲ ಬದಲಾಗಿದೆ; ಪ್ರವಾಹದಿಂದ ಬಚಾವಾಗಲು ಮನುಷ್ಯ ಹಲವು ದಾರಿ ಹುಡುಕಿಕೊಂಡಿದ್ದಾನೆ. ಈಗೇನಿದ್ದರೂ ನದಿಯಲ್ಲಿ ನೀರು ಇಳಿಮುಖವಾದಾಗಲೇ ಆತಂಕ ಹೆಚ್ಚುತ್ತದೆ. ನೀರು ಕಡಿಮೆಯಾದಾಗಲೆಲ್ಲ ಜನ ತಮ್ಮವರದೇ ಜುಟ್ಟು ಹಿಡಿದುಕೊಳ್ಳುತ್ತಿದ್ದಾರೆ. ರಾಜ್ಯಗಳು ಕೋರ್ಟು ಕಟ್ಟೆ ಹತ್ತುತ್ತಿವೆ.

ನದಿ ನೀರು ಹಂಚಿಕೆ ವಿವಾದ ಮಾಹಿತಿ ತಂತ್ರಜ್ಞಾನ ಯುಗದ ನಾಗರಿಕತೆಗೆ ಎದುರಾಗಿರುವ ಬಹುದೊಡ್ಡ ಸವಾಲು. ಒಂದು ಪ್ರದೇಶದ ಸಿರಿ ಸಮೃದ್ಧಿಗೆ ಕಾರಣವಾಗುವ ನದಿಗಳು ಅಶಾಂತಿಗೂ ಕಾರಣವಾಗುತ್ತಿವೆ. ನೀರಿಗಾಗಿ ರಕ್ತ ಹರಿಯುವುದು ಮಾಮೂಲಿ ಅನ್ನುವಂತಾಗಿದೆ. ನದಿಗಳ ಮೇಲೆ ಹೆಚ್ಚುತ್ತಿರುವ ಒತ್ತಡ ಕೂಡ ಸಮಸ್ಯೆಯ ತೀವ್ರತೆಗೆ ಕಾರಣವಾಗಿದೆ.

ಹೊನ್ನು ಮಣ್ಣು ಧರ್ಮದ ಕಾರಣಗಳಿಗಾಗಿ ಹೊರ ದೇಶದ ಶತ್ರುಗಳಿಂದ ಅಪಾಯವನ್ನೆದುರಿಸುವುದು ಸಹಜ. ಆದರೆ, ಅದೇ ಕಾಲದಲ್ಲಿ ರಾಜ್ಯಗಳ ನಡುವೆ ತಲೆದೋರುವ ನದಿ ನೀರು ಹಂಚಿಕೆಯಂಥ ವಿವಾದಗಳು ಆಂತರಿಕ ಅಭದ್ರತೆ ಉಂಟುಮಾಡುತ್ತಿವೆ, ಅಭಿವೃದ್ಧಿ ಚಟುವಟಿಕೆಗಳನ್ನು ಕುಂಠಿತಗೊಳಿಸುತ್ತಿವೆ.

ಕರ್ನಾಟಕ ಹಾಗೂ ತಮಿಳುನಾಡುಗಳ ನಡುವೆ ಶತಮಾನಕ್ಕೂ ಹೆಚ್ಚು ಕಾಲದಿಂದ ಬಿಗು ವಾತಾವರಣ ಸೃಷ್ಟಿಸಿರುವ ಕಾವೇರಿ ನದಿ ನೀರಿನ ಹಂಚಿಕೆಯ ವಿವಾದ ನಮ್ಮ ಕಣ್ಣೆದುರೇ ಇದೆ. ತೆಲುಗು, ಮಲಯಾಳಿ, ಗುಜರಾತಿ, ಮರಾಠಿ – ಯಾರಾದರೂ ಪರವಾ ಇಲ್ಲ. ಆದರೆ ಕನ್ನಡಿಗ/ತಮಿಳ ಪರಸ್ಪರರ ಹೆಸರೆತ್ತಿದರೆ ಮುಖ ಗಂಟಿಕ್ಕಿಕೊಳ್ಳುತ್ತಾರೆ. ಇಬ್ಬರ ನಡುವೆ ಅಸಮಾಧಾನದ ಹೊಗೆ ವಿನಾಕಾರಣ ಸುಳಿಯುತ್ತಿರುತ್ತದೆ.

ಕಾವೇರಿಯಷ್ಟೇ ಅಲ್ಲ; ದೇಶದ ಅನೇಕ ನದಿಗಳು ವಿವಿಧ ರಾಜ್ಯಗಳ ನಡುವಿನ ಸಂಬಂಧವನ್ನು ಬಿಗಿಗೊಳಿಸಿವೆ. ದೆಹಲಿ, ಹರಿಯಾಣ ಮತ್ತು ಉತ್ತರಪ್ರದೇಶಗಳು

ಯಮುನಾ ನದಿ ನೀರಿಗಾಗಿ ಜಗಳವಾಡುತ್ತಿದ್ದರೆ, ರಾವಿ ನದಿ ಹೆಸರಲ್ಲಿ ಹರಿಯಾಣ, ಜಮ್ಮು ಮತ್ತು ಕಾಶ್ಮೀರ, ರಾಜಸ್ತಾನ ಹಾಗೂ ಪಂಜಾಬ್ ಪರಸ್ಪರ ಮುನಿಸಿಕೊಂಡಿವೆ. ಕೃಷ್ಣಾ-ಗೋದಾವರಿ ನದಿ ನೀರಿನ ಹಂಚಿಕೆ ಮಹಾರಾಷ್ಟ್ರ, ಆಂಧ್ರಪ್ರದೇಶ, ಕರ್ನಾಟಕ, ಮಧ್ಯಪ್ರದೇಶ ಹಾಗೂ ಒರಿಸ್ಸಾಗಳ ನಡುವಿನ ಕಲಹಕ್ಕೆ ಕಾರಣವಾಗಿದೆ.

ನದಿ ನೀರಿನ ಸಮಸ್ಯೆಗೆ ಶಾಶ್ವತ ಪರಿಹಾರಗಳೇ ಇಲ್ಲವೇ ?

ನದಿ ಇರುವವರೆಗೂ ವಿವಾದ ಇದ್ದೇ ಇರುತ್ತದಾದರೂ, ವಿವಾದವನ್ನು ಸಹಕಾರ ಮನೋಭಾವದಿಂದ ಶಾಂತಿಯುತವಾಗಿ ಹಾಗೂ ನ್ಯಾಯಯುತವಾಗಿ ಬಗೆಹರಿಸಿ ಕೊಳ್ಳುವುದು ಸಾಧ್ಯವಿದೆ. ಹಂಚಿಕೊಳ್ಳುವ ಮನಸ್ಸಿದ್ದಲ್ಲಿ ಮುನಿಸಿಗೆ ಆಸ್ಪದವೇ ಇಲ್ಲ.

ನದಿ ನೀರಿನ ಸಮಸ್ಯೆಗಳಿಗೆ ಪರಿಹಾರವಾಗಿ ಕೆಳಗಿನ ಸಾಧ್ಯತೆಗಳನ್ನು ಪರಿಶೀಲಿಸಬಹುದು. ಅವುಗಳೆಂದರೆ :

- ನದಿ ನೀರಿನ ಮೇಲಿನ ಅವಲಂಬನೆಯನ್ನು ಕನಿಷ್ಠಗೊಳಿಸುವುದು.
- ನದಿ ನೀರು ಹಂಚಿಕೆಯ ನಿರ್ವಹಣೆಯನ್ನು ಆಯಾ ರಾಜ್ಯಗಳ ರೈತರೇ ವಹಿಸಿಕೊಳ್ಳುವುದು. ರಾಜಕಾರಣಿಗಳನ್ನು ದೂರವಿಡುವುದು.
- ಸ್ಥಳೀಯ ಜಲಮೂಲಗಳನ್ನು ಪುನಶ್ಚೇತನಗೊಳಿಸುವುದು.
- ಪರಿಸರವನ್ನು ಸಂರಕ್ಷಿಸುವ ಮೂಲಕ ಮಳೆಯ ಅವಕಾಶಗಳನ್ನು ಹೆಚ್ಚಿಸಿಕೊಳ್ಳುವುದು.
- ಅಂತರ್ಜಲ ವೃದ್ಧಿಗೆ ಒತ್ತು.
- ನೀರಿನ ಪೋಲು ತಡೆಗಟ್ಟುವುದು.

ಚರ್ಚೆಯ ಅನುಕೂಲತೆಯ ದೃಷ್ಟಿಯಿಂದ ನದಿ ನೀರಿನ ಹಂಚಿಕೆಯ ಬಿಕ್ಕಟ್ಟಿಗೆ ಉತ್ತರವಾಗಬಲ್ಲ ಮೇಲಿನ ಸಾಧ್ಯತೆಗಳನ್ನು ಪ್ರತ್ಯೇಕವಾಗಿ ಚರ್ಚಿಸುವ ಬದಲು ಒಟ್ಟಿಗೇ ಚರ್ಚಿಸೋಣ.

ಮತ್ತೆ ಗಾಂಧಿ ನೆನಪಾಗುತ್ತಾರೆ. ಗಾಂಧಿ ಹೇಳಿಕೊಟ್ಟ 'ಸ್ವಾವಲಂಬನೆ'ಯ ಮಂತ್ರ ನೀರಿಗೂ ಅನ್ವಯಿಸುತ್ತದೆ. ನಾವು ನಮ್ಮ ಸ್ಥಳೀಯ ಜಲಮೂಲಗಳನ್ನು ಜೀವಂತ ಇರಿಸಿ ಕೊಂಡಲ್ಲಿ ನದಿಯ ನೀರಿನ ಹಂಗಿಗೆ ಒಳಪಡಬೇಕಾದ ಅಗತ್ಯವೇ ಇಲ್ಲವೆನ್ನಿಸುತ್ತೆ. ಸ್ಥಳೀಯ ಜಲಮೂಲಗಳನ್ನು ನಿರ್ಲಕ್ಷಿಸಿ ದೂರದ ಜಲ ಸಂಪನ್ಮೂಲಗಳನ್ನು ನಿರೀಕ್ಷಿಸು ವುದು ಬಹುತೇಕ ಸಂದರ್ಭಗಳಲ್ಲಿ ತ್ರಿಶಂಕು ಸ್ವರ್ಗದ ಬಯಕೆ. 'ನಮ್ಮ ಕಾಲದಾಗೆಲ್ಲ ಮಳೆಬೆಳೆ ಕಾಲಕ್ಕೆ ತಕ್ಕಂತೆ ಆಗ್ತಿತ್ತು. ಕಾಲ ಕೆಟ್ಟೋಯ್ತು. ಇವಾಗ ಮಳೆ ಪಂಚಾಂಗವೇ ಬದಲಾಗಿದೆ' ಎಂದು ಅಜ್ಜನೋ ಅಜ್ಜಿಯೋ ಗೊಣಗಿಕೊಳ್ಳುತ್ತಲೇ ಇರುತ್ತಾರೆ. ಅಜ್ಜನ ಕಾಲದಲ್ಲಿ ಲೆಕ್ಕ ತಪ್ಪದಿದ್ದ ಮಳೆಯ ಪಂಚಾಂಗವೀಗ ಯದ್ವಾತದ್ವಾ ಆಗಿರುವುದಾದರೂ ಏಕೆ ? ಉತ್ತರ ಸರಳ : ಅಜ್ಜನ ಕಾಲದಲ್ಲಿ ಹಸಿರು ಸಮೃದ್ಧವಾಗಿತ್ತು. ಬಾವಿ, ಹಳ್ಳಕೊಳ್ಳ, ಕೆರೆಕಟ್ಟೆಗಳು ಪ್ರತಿ ಊರಿನಲ್ಲೂ ಇದ್ದವು. ಈಗ ಕಾಡು ನಾಡಾಗಿದೆ. ಕೆರೆಯಿದ್ದ ಜಾಗದಲ್ಲಿ ಬಡಾವಣೆಯಿದೆ. ಕಾಡಿದ್ದ ಜಾಗದಲ್ಲಿ ಜಲಾಶಯವಿದೆ. ಪರಿಣಾಮವಾಗಿ ಮಳೆಯ ಬದಲು ಆಮ್ಲದ ಮಳೆ ಸುರಿಯುವ ಸಂದರ್ಭ ನಮ್ಮೆದುರುಗಿದೆ.




ಸ್ಥಳೀಯ ಜಲ ಮೂಲಗಳ ಪ್ರಾಮುಖ್ಯತೆಯನ್ನು ತುಮಕೂರು ಜಿಲ್ಲೆಯ ಶಿರಾ ಪಟ್ಟಣದ 'ಜಾಜಮ್ಮನ ಕಟ್ಟೆ'ಯ ಉದಾಹರಣೆಯಿಂದ ಹೆಚ್ಚು ಸ್ಪಷ್ಟಪಡಿಸಿಕೊಳ್ಳ ಬಹುದು. ಜಾಜಮ್ಮ ಎನ್ನುವ ಹೆಣ್ಣುಮಗಳು ಕಟ್ಟಿಸಿದ, 'ಜಾಜಿ ಕಟ್ಟೆ' ಎಂದು ಕರೆಸಿಕೊಳ್ಳುವ ಈ ಸಣ್ಣ ಕೆರೆಗೆ ನೀರಿನ ಮೂಲ ಎರಡು ಸಣ್ಣ ಹಳ್ಳಗಳು. ಮಳೆ ಬಿದ್ದಾಗ ಮಾತ್ರ ಜೀವಪಡೆಯುವ ಈ ಹಳ್ಳಗಳ ನೀರಿನಿಂದಲೇ ಜಾಜಿ ಕಟ್ಟೆ ನೀರು ಕಾಣಬೇಕು. ಕಟ್ಟೆಯಲ್ಲಿ ನೀರಿದ್ದಾಗ, ಕಟ್ಟೆಗೆ ಹೊಂದಿಕೊಂಡ ಬಡಾವಣೆಗಳಲ್ಲಿ ಅಂತರ್ಜಲ ಸಮೃದ್ಧ ವಾಗಿರುತ್ತದೆ. ಕೊಳವೆ ಬಾವಿಗಳಲ್ಲಿ ನೀರು ಕಾಣಿಸುತ್ತದೆ. ಬಟ್ಟೆ ತೊಳೆಯುವ ಹೆಣ್ಣುಮಕ್ಕಳಿಗೆ, ದನಕರುಗಳ ಮೈ ತೊಳೆಯುವ ಮಂದಿಗೆ, ವಾಹನಗಳ ಗಲೀಜು ತೊಳೆಯುವವರಿಗೆ, ಮೀನು ಹಿಡಿಯುವವರಿಗೆ, ಈಜುವವರಿಗೆ ಹೀಗೆ ಎಲ್ಲರಿಗೂ ಸೇರಿದಂತೆ ಹಲವು ಉದ್ದೇಶಗಳಿಗಾಗಿ ಕಟ್ಟೆಯ ನೀರು ಬಳಕೆಯಾಗುತ್ತದೆ. ಕಟ್ಟೆಯಲ್ಲಿ ನೀರು ಬತ್ತಿದಾಗ ಅಂತರ್ಜಲ ಕಡಿಮೆಯಾಗಿ ಕೊಳವೆ ಬಾವಿಗಳು ಬತ್ತುತ್ತವೆ. ಇದು ಜಾಜಮ್ಮನ ಕಟ್ಟೆಯ ನೀರಿನ ಪಂಚಾಂಗ. ಇವತ್ತು ಏನಾಗಿದೆಯೆಂದರೆ – ಕಟ್ಟೆಗೆ ನೀರು ಪೂರೈಸುತ್ತಿದ್ದ ಹಳ್ಳಗಳು ಎದ್ದು ನಿಲ್ಲುತ್ತಿರುವ ಆಧುನಿಕ ಬಡಾವಣೆಗಳಲ್ಲಿ ಮಾಯವಾಗುತ್ತಿವೆ. ಒಂದು ಹಳ್ಳ ಹೆಚ್ಚೂಕಮ್ಮಿ ನಾಶವಾಗಿದೆ. ಇನ್ನೊಂದು ಹಳ್ಳ ದಿನ ಎಣಿಸುತ್ತಿದೆ. ಪರಿಣಾಮವಾಗಿ ಕಟ್ಟೆಗೆ ನೀರಿನ ಹರಿವು ತಗ್ಗಿದೆ. ಉಳಿದಿರುವ ಹಳ್ಳ ಪೂರ್ತಿ ನಾಶವಾದಲ್ಲಿ ಕಟ್ಟೆಯೂ ನಾಶವಾಗುತ್ತದೆ. ಸ್ಥಳೀಯ ಜಾಜಿ ಕಟ್ಟೆಯನ್ನು ನಿರ್ಲಕ್ಷಿಸಿದ ಶಿರಾದ ಜನತೆ ನೀರಿಗಾಗಿ ಈಗ ದೂರದ ಹೇಮಾವತಿ ಹಾಗೂ ಗಾಯತ್ರಿ ನದಿಗಳತ್ತ ಕಣ್ಣು ಹರಿಸಿದ್ದಾರೆ. ಹೇಮಾವತಿ ಬಲು ದೂರ. ಗಾಯತ್ರಿ ಜಲಾಶಯದಿಂದ ಶಿರಾಕ್ಕೆ ನೀರು ಹರಿಸಲು ಗಾಯತ್ರಿ ಕೊಳ್ಳದ ಜನತೆ ಸುತಾರಾಂ ಒಪ್ಪುತ್ತಿಲ್ಲ. ಇದು ಶಿರಾ ಪಟ್ಟಣದ ಕತೆ ಮಾತ್ರವಲ್ಲ; ರಾಜ್ಯದ, ದೇಶದ ಬಹುತೇಕ ಪಟ್ಟಣ ಗ್ರಾಮಗಳು ಸ್ಥಳೀಯ ಜಲಮೂಲಗಳನ್ನು ನಾಶಮಾಡಿಕೊಂಡು, ದೂರದ ಜಲ ಸಂಪನ್ಮೂಲಗಳ ನಿರೀಕ್ಷೆಯಲ್ಲಿವೆ. ದೂರದ ನೀರು ಬಹು ಸಿಹಿ !

ಮಿತಿ ಮೀರಿ ಬಳಸಿದರೆ ಎಲ್ಲ ವಸ್ತುಗಳಂತೆ ನೀರೂ ಮುಗಿಯುತ್ತದೆ ಅನ್ನುವ ಪ್ರಾಥಮಿಕ ಅರಿವೇ ನಮ್ಮಲ್ಲಿ ಬಹುತೇಕ ಮಂದಿಗಿಲ್ಲ. ಆಧುನಿಕರಾಗುತ್ತಾ ಹೋದಂತೆ ನೀರಿನ ಅಪಬಳಕೆಯೂ ಹೆಚ್ಚುತ್ತಿದೆ. ಒಂದೆಡೆ ಕುಡಿಯುವ ನೀರಿಗಾಗಿ ಜನ ಮೈಲುಗಟ್ಟಲೆ ಕೊಡ ಹಿಡಿದು ದಣಿಯುತ್ತಿದ್ದರೆ, ಇನ್ನೊಂದೆಡೆ ಆಧುನಿಕ ಕಮೋಡ್‌ಗಳಲ್ಲಿ ಸಾಕಷ್ಟು ನೀರು ಚರಂಡಿ ಸೇರುತ್ತಿದೆ. ಇದರ ಜೊತೆಗೆ ಬೃಹತ್ ಕೈಗಾರಿಕೆಗಳು ನೀರನ್ನು ನುಂಗುವುದರೊಂದಿಗೆ, ನೀರಿನ ಮೂಲಗಳನ್ನೂ ವಿಷಯುಕ್ತಗೊಳಿಸುತ್ತಿವೆ. ನೀರಿನ ದುಂದು ತಡೆಗಟ್ಟಿದಲ್ಲಿ ನೀರಿನ ಸಮಸ್ಯೆ ಕಿಂಚಿತ್ತಾದರೂ ಕಡಿಮೆಯಾಗುತ್ತದೆ. ಭಾರತಕ್ಕಿಂತ ಜಲ ಸಂಪನ್ಮೂಲ ತೀರಾ ಕಡಿಮೆಯಿರುವ ಅನೇಕ ದೇಶಗಳಲ್ಲಿ ನೀರು ಒಂದು ಸಮಸ್ಯೆಯೇ ಅಲ್ಲ. ಇಸ್ರೇಲ್ ಅಂಥ ದೇಶಗಳ ಜನ ಆಧುನಿಕ ನೀರಾವರಿ ಪದ್ಧತಿಗಳನ್ನು ಅಳವಡಿಸಿಕೊಳ್ಳುವ ಮೂಲಕ ಸೀಮಿತ ಜಲ ಸಂಪನ್ಮೂಲಗಳನ್ನು ಅದ್ಭುತವಾಗಿ ದುಡಿಸಿಕೊಳ್ಳುತ್ತಿದ್ದಾರೆ.

ನೀರಿನ ಏಕೈಕ ಮೂಲ ಮಳೆ. ಆದರೆ ಮಳೆಯೇ ಕಡಿಮೆಯಾಗುತ್ತಿದೆಯಲ್ಲ! ಒಂದೆಡೆ ಜಲಾಶಯಗಳನ್ನು ನಿರ್ಮಿಸಲು ಕಾಡು ಕಡಿಯುತ್ತೇವೆ. ಜಲಾಶಯಗಳಿಂದ ನಿರ್ವಸಿತರಾದವರಿಗೆ ಪುನರ್ವಸತಿ ಕಲ್ಪಿಸಲು ಇನ್ನೊಂದೆಡೆ ಕಾಡು ಸವರುತ್ತೇವೆ. ಕೈಗಾರಿಕೆ, ನಗರೀಕರಣ ಕಾರಣಗಳಿಗಾಗಿಯೂ ಕಾಡು ಬಯಲಾಗುತ್ತದೆ. ಕಾಡೆಲ್ಲ ಬಯಲಾದಂತೆ ಮಳೆ ಮರೀಚಿಕೆಯಾಗುತ್ತದೆ. ಸಹ್ಯಾದ್ರಿಯಲ್ಲಿ ಹಸಿರು ಕಡಿಮೆಯಾಗುತ್ತಾ ಹೋದಂತೆ ಕರಾವಳಿಯಲ್ಲಿ ಮಳೆ ಕಡಿಮೆಯಾಗುತ್ತದೆ.

ನಮ್ಮ ಹಿರೀಕರ ಬದುಕನ್ನು ಗಮನಿಸಿ: ಮಳೆಯನ್ನೇ ನಂಬಿದ್ದ ರೈತರು ನೀರು ಸಂಗ್ರಹಕ್ಕಾಗಿ ಊರಿಗೊಂದು ಕೆರೆ ನಿರ್ಮಿಸಿದ್ದರು (ನದಿಗಳು ಇಲ್ಲದ ಪ್ರದೇಶಗಳಲ್ಲೇ ಕೆರೆಗಳು ಹೆಚ್ಚಾಗಿವೆ). ಪ್ರತಿ ಊರಿನ ಕೆರೆಯ ನಿರ್ವಹಣೆಗೂ ಸ್ಥಳೀಯವಾದ ವ್ಯವಸ್ಥೆಯಿತ್ತು. ನೀರಗಂಟಿ ಎನ್ನುವ ಅಧಿಕಾರಿ ಕೆರೆಯ ನೀರಿನ ನಿರ್ವಹಣೆ ಮಾಡುತ್ತಿದ್ದ. ಬುಲ್ಡೋಜರು, ಕ್ರೇನು, ಟ್ರಾಕ್ಟರು ಇವು ಯಾವುವೂ ಇಲ್ಲದ ದಿನಗಳಲ್ಲಿ ಕೇವಲ ಶ್ರಮ ಶಕ್ತಿಯನ್ನೇ ನಂಬಿಕೊಂಡಿದ್ದ ರೈತಾಪಿ ವರ್ಗ ಕೆರೆಗಳನ್ನು ನಿರ್ಮಿಸಿಕೊಂಡಿದ್ದರು. ಕೆರೆಗೆ ಅಪಾಯ ಉಂಟಾದಾಗ ಊರಿಗೆ ಊರೇ ಶ್ರಮದಾನಕ್ಕೆ ಮುಂದಾಗುತ್ತಿತ್ತು. ಇವತ್ತೇನಾಗಿದೆ ನೋಡಿ : ಪೂರ್ವಿಕರು ಕಟ್ಟಿದ ಬಹುತೇಕ ಕೆರೆಗಳು ಊರುಗಳಾಗಿವೆ. ಅಳಿದುಳಿದ ಕೆರೆಗಳು ಹೂಳು ತುಂಬಿಕೊಂಡು ಕಳೆಗಳ ತವರಾಗಿವೆ. ಹೊಸ ಕೆರೆ ಕಟ್ಟುವುದಿರಲಿ, ಇರುವ ಕೆರೆಯನ್ನು ಉಳಿಸಿ ಕೊಳ್ಳುವುದೂ ಸಾಧ್ಯವಾಗುತ್ತಿಲ್ಲ (ಬೆಂಗಳೂರಿನ ಕೆರೆಗಳ ಸಂಖ್ಯೆ ೮೬ ರಿಂದ ೯ಕ್ಕಿಳಿದಿದೆ). ಅಸಲಿಗೆ ಕೆರೆಯ ನೀರನ್ನು ಬಳಸುವ ನಾವು ಕೆರೆಯ ರಕ್ಷಣೆ ನಮಗೆ ಸಂಬಂಧಿಸಿದ್ದೇ ಅಲ್ಲ ಎಂದು ಭಾವಿಸುತ್ತೇವೆ. ಏಕೆಂದರೆ, ನಮ್ಮೆಲ್ಲರ ಪ್ರತಿನಿಧಿಯಾಗಿ ಸರ್ಕಾರವಿದೆ. ಸರ್ಕಾರಕ್ಕೆ ಸಾಲ ಕೊಡಲು ವಿಶ್ವಬ್ಯಾಂಕಿದೆ. ಹಾಗಾಗಿ ಹೂಳು ತೆಗೆಯುವ ಹಾಗೂ ನೆರೆ ರಾಜ್ಯದ ತಕರಾರಿನಿಂದಾಗಿ ಕಾಮಗಾರಿ ಅರ್ಧದಲ್ಲೇ ನಿಲ್ಲುವ

ನಾಟಕಗಳು ಇಲ್ಲಿ ನಿರಂತರವಾಗಿರುತ್ತವೆ.

* * *

ನೀರಿನ ಸಮಸ್ಯೆ ಭುಗಿಲೆದ್ದಾಗಲೆಲ್ಲ ಕುರ್ಚಿಯಲ್ಲಿ ಕೂತ ಪ್ರಭುಗಳು ದೂರದ ನದಿ ಸಂಪನ್ಮೂಲಗಳ ಕನಸನ್ನು ಜನರ ಕಣ್ಣಿಗೆ ತುಂಬುವ ಯಶಸ್ವಿ ನಾಟಕ ಆಡುತ್ತಲೇ ಬಂದಿದ್ದಾರೆ. ಆ ಯೋಜನೆ ಯಶಸ್ವಿಯಾಗುತ್ತದೆಯೇ ?

ಯೋಜನೆಗೆ ಅಗತ್ಯವಾದ ಸಂಪನ್ಮೂಲಗಳ ಸಂಗ್ರಹಣೆ ಸಾಧ್ಯವೇ ? ಉಹ್ಲುಂ, ಪ್ರಶ್ನೆಗಳನ್ನು ಕೇಳುವುದು ಯುಗಧರ್ಮವೇ ಅಲ್ಲ!

'ಗಂಗಾ-ಕಾವೇರಿ' ಜೋಡಣೆ ರಾಜಕಾರಣಿಗಳಿಗೆ ಸಿಕ್ಕಿರುವ ಹೊಸ ಮಳೆಬಿಲ್ಲು. ದಕ್ಷಿಣ ಭಾರತದಲ್ಲಿ ತಲೆದೋರಿರುವ ನೀರಿನ ಕೊರತೆ ಹಾಗೂ ಕಾವೇರಿ ವಿವಾದದಿಂದಾಗಿ ಗಂಗಾ-ಕಾವೇರಿ ಜೋಡಣೆ ಯೋಜನೆಗೆ ಚಾಲನೆ ಸಿಕ್ಕಿದೆ. ಸುಪ್ರಿಂ ಕೋರ್ಟ್ ಕೂಡ ಯೋಜನೆಯನ್ನು ತ್ವರಿತವಾಗಿ ಪೂರೈಸುವಂತೆ ಕೇಂದ್ರ ಸರ್ಕಾರಕ್ಕೆ ತಾಕೀತು ಮಾಡಿದೆ. ಯೋಜನೆ ಪೂರ್ಣಗೊಂಡಲ್ಲಿ ಇಡೀ ಭಾರತದ ಭೂಪಟದಿಂದಲೇ ನೀರಿನ ಸಮಸ್ಯೆ ಇಲ್ಲವಾಗುತ್ತದಂತೆ. ರೈತರ ಮೊಗದಲ್ಲಿನ ನಗು ಮಾಸುವುದೇ ಇಲ್ಲವಂತೆ. ಹೊಲಗಳಲ್ಲಿನ ಹಸುರು ಮಂಕಾಗುವುದೇ ಇಲ್ಲವಂತೆ. ಅಂಕಿ-ಅಂಶಗಳಲ್ಲಿ ಹೇಳುವುದಾದರೆ – ೧೮೫ ಕೋಟಿ ಎಕರೆ ಭೂಮಿ ಜಲಾನಯನ ವ್ಯಾಪ್ತಿಗೆ, ವಿವಿಧ ವಿದ್ಯುತ್ ಯೋಜನೆಗಳಿಂದ ಅಂದಾಜು ೨೦.೭೫ ಲಕ್ಷ ಮೆಗಾ ವ್ಯಾಟ್ ವಿದ್ಯುತ್ ಉತ್ಪಾದನೆ ನದಿಗಳ ಜೋಡಣೆಯಿಂದ ಸಾಧ್ಯವಾಗುತ್ತದೆ. ಅಂದಹಾಗೆ, ಈ ಯೋಜನೆಗೆ ಖರ್ಚಾಗುವುದು ೧ ಲಕ್ಷ ಕೋಟಿ ರೂಪಾಯಿಗಳು ಮಾತ್ರ! ದುಡ್ಡು ಸಂಗ್ರಹವಾಗಿ ಯೋಜನೆ ಪೂರ್ಣವಾಗುತ್ತದೆಂದೇ ಇಟ್ಟುಕೊಳ್ಳೋಣ. ಆದರೆ, ಈ ಯೋಜನೆ ಪೂರ್ಣಗೊಳ್ಳಬೇಕಾದರೆ ದೇಶದಲ್ಲಿ ಕಡಿಯಬೇಕಾದ ಕಾಡೆಷ್ಟು? ಪುನರ್ವಸತಿಗೊಳ್ಳಬೇಕಾದ ಜನರೆಷ್ಟು? ಯೋಜನೆಗೆ ಅಗತ್ಯವಾದ ಸಂಪನ್ಮೂಲ ಸಂಗ್ರಹಣೆ ಹೇಗೆ? ಜೋಡಣೆಯಿಂದ ಕುಪ್ಪಗಿಯ ರೈತನಿಗೂ ನೀರು ಸಿಗುತ್ತಾ? ಗಂಗೆಯಲ್ಲಿ ನೀರಿದೆಯಾ ? ಗಂಗೆಯನ್ನು ಕಾವೇರಿಗೆ ಕೂಡಿಸಿದರೆ ಉತ್ತರ ಭಾರತದ ನೀರಾವರಿ ಪಂಚಾಂಗದಲ್ಲಿ ವ್ಯತ್ಯಯ ಉಂಟಾಗುವುದಿಲ್ಲವಾ ? ತೀರಾ ಉತ್ತರ ದಕ್ಷಿಣ ಅನ್ನುವಷ್ಟು ಸಮುದ್ರ ಮಟ್ಟಗಳ ಎತ್ತರದ ವ್ಯತ್ಯಾಸದ ಭಿನ್ನತೆಯನ್ನು ಹೊಂದಿರುವ ಗಂಗೆ-ಕಾವೇರಿಯನ್ನು ಒಂದು ರೇಖೆಗೆ ತರುವುದಾದರೂ ಹೇಗೆ? ನದಿಗಳ ದಿಕ್ಕು ಪಲ್ಲಟಗೊಳಿಸುವುದನ್ನು ಪ್ರಕೃತಿ ಒಪ್ಪುತ್ತದೆಯೇ ? ಗಂಗೆಯ ಮಲಿನತೆ ಕಾವೇರಿಯನ್ನು ತಟ್ಟದೇ ? – ಪ್ರಶ್ನೆ ಪತ್ರಿಕೆಯನ್ನು ಬಿಡಿಸಲು ಹೊರಟರೆ ಗಂಗಾ-ಕಾವೇರಿ ಜೋಡಣೆಯ ಯೋಜನೆ ಮರೀಚಿಕೆಯಾಗಿ ಕಾಣುತ್ತದೆ. ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿಯುವ ಹುಂಬತನವಾಗಿ ಕಾಣುತ್ತದೆ.

ಇಷ್ಟಕ್ಕೂ ಗಂಗಾ-ಕಾವೇರಿಯನ್ನು ಕೂಡಿಸುವುದಾದರೂ ಯಾಕಾಗಿ ? ನಮ್ಮಲ್ಲಿನ ಜಲಮೂಲಗಳನ್ನು ಪುನಶ್ಚೇತನಗೊಳಿಸಿದರೆ ನೀರಿನ ಸಮಸ್ಯೆ ಪರಿಹಾರವಾಗದೆ? ಎನ್ನುವ ಪ್ರಶ್ನೆಗಳನ್ನೂ ನಾವು ಕೇಳಿಕೊಳ್ಳಬೇಕು. ಒಂದು ಅಂದಾಜಿನ ಪ್ರಕಾರ – ಕರ್ನಾಟಕ ವಾರ್ಷಿಕ ಜಲ ಸಂಪನ್ಮೂಲ ೩೪೦೦ ಟಿಎಂಸಿ. ಇದರಲ್ಲಿ ಅರ್ಧದಷ್ಟನ್ನೂ ಬಳಸಿಕೊಳ್ಳುತ್ತಿಲ್ಲ. ಪಶ್ಚಿಮವಾಹಿನಿ ನದಿಗಳ ಬಹುಪಾಲು ನೀರು ಸಮುದ್ರ ಸೇರುತ್ತಿದೆ. ರಾಜ್ಯದ ಕೆರೆಗಳ ಹೂಳು ಹಲವು ವರ್ಷಗಳಿಂದ ತೆಗೆದಿಲ್ಲ. ಜಲಾಶಯಗಳ ನಿರ್ವಹಣೆಯೂ ಸಮರ್ಪಕವಾಗಿಲ್ಲ. ಇದರ ಜೊತೆಗೆ ನೀರಾವರಿ ಯೋಜನೆಗಳೂ ಕುಂಟುತ್ತಿವೆ.

ನದಿಗಳ ಜೋಡಣೆಯಿಂದ ಎದುರಾಗುವ ಪುನರ್ವಸತಿಯ ಸಮಸ್ಯೆಯನ್ನು ಪರಿಹರಿಸುವುದು ಸುಲಭದ ಮಾತಲ್ಲ. ಒಂದೆಡೆ ಜನ ನೆಲೆ ಕಳೆದುಕೊಂಡರೆ, ಇನ್ನೊಂದೆಡೆ ಆ ನೆಲದ ಸಂಸ್ಕೃತಿ ನೀರುಪಾಲಾಗುತ್ತದೆ. ಜನಕ್ಕೆ ಪುನರ್ವಸತಿ ಕಲ್ಪಿಸಿದರೂ ಕಲ್ಪಿಸಬಹುದು; ಸಂಸ್ಕೃತಿಯ ಗತಿ ?

* * *

ಅಂತಿಮವಾಗಿ ಸ್ಥಳೀಯ ಜಲ ಸಂಪನ್ಮೂಲಗಳೇ ನಮ್ಮನ್ನು ಪೊರೆಯಬೇಕೆ ಹೊರತು ದೂರದ ನದಿಯಲ್ಲ! ನಮ್ಮ ಪರಿಸರದಲ್ಲೇ ಇರುವ ಕೆರೆ, ಕಟ್ಟೆ, ನದಿಗಳಿಂದಲೇ ನಮ್ಮ ಮೋಕ್ಷ ಸಾಧ್ಯವಾಗಬೇಕು. ಅದು ಸಾಧ್ಯವಾಗಬೇಕಾದರೆ ಪ್ರಕೃತಿಯನ್ನು ಪ್ರೀತಿಸುವ ಮನಸ್ಸು ನಮ್ಮದಾಗಬೇಕು.

**ರಘುನಾಥ ಚ. ಹ.**
ಶ್ರೀರಂಗ ನಿಲಯ, ಬೋವಿ ಕಾಲನಿ, ನಾಗಶೆಟ್ಟಿಹಳ್ಳಿ, ಬೆಂಗಳೂರು -೫೬೦ ೦೯೪

# ಈ ನಡುವೆ



ನಿವೇದಿತಾ,
ಈ ನಡುವೆ
ಕ್ಯಾಂಪಸ್ಸಿನ ತುಂಬ ಸುದ್ದಿಯೇ ಸುದ್ದಿ
''ಅಗಲಿದವು
ಪಾಪ್ಯುಲರ್ ಜೋಡಿ.''

ಕೇಳುತ್ತಿದ್ದಾರೆ
ಸ್ನೇಹಿತರು
ಕ್ರಿಕೆಟ್ ಸ್ಕೋರ್ ಕೇಳುವವರಂತೆ !
'ಏನಾತು, ಏನಾತು' ಎಂದು.
ಹೇಳಿ,
ಮನಸ್ಸು ಹಗುರು ಮಾಡಿಕೊಳ್ಳೋಣ
ವೆಂದರೆ
ಉಸಿರುಗಟ್ಟಿ ಹೋಗಿದೆ.

ಹೀಗೆ....
ಹೊರಟಿದ್ದೆ
ಒಂದು ದಿನ ನೆನಪುಗಳೊಂದಿಗೆ

ಧ್ವನಿವೊಂದು ಕೇಳಿಸಿತು
''ನಿವೇದಿತಾ ನಿಲ್ಲೆ.''
ತಿರುಗಿ ನೋಡಿದೆ
ಹಾವು ತುಳಿದಂತೆ
ಮೈಯೆಲ್ಲಾ ಬೆವರಿಳಿದಿತ್ತು !
ರೂಪ ಬೇರೆಯಿತ್ತು !!

ಅದೇ ದಿನ
ಮಧ್ಯರಾತ್ರಿ ಕನವರಿಸಿದೆನಂತೆ
ಬೆಳಿಗ್ಗೆ
ದೊಡ್ಡ ರಾದ್ಧಾಂತ
ಅವ್ವ ಸಮಜಾಯಿಸಿದಳು
ಸಮಾಲೋಚಿಸಿದಳು
'ಯಾರು ಆ ರೂಪವಂತೆ ?!'
ಎಲ್ಲವನ್ನು ಹೇಳಿದ್ದೇನೆ
ಆದರೆ
ಅಪ್ಪನ ಎದುರಿಗೆ ಅವ್ವ ಮೂಕಳು

ನಿವೇದಿತಾ ನಿವೇದಿಸಿಕೊಳ್ಳುತ್ತಿದ್ದೇನೆ
ಪರಂಪರೆಯ
ಮಂತ್ರ- ಗಿಂತ್ರ
ಪಾರಾಯಣ- ಗೀರಾಯಣ
ಹುಗಿದು ಬಾ ಹೊರಗೆ !
ಮೌಲ್ಯ ಪ್ರಾಪ್ತವಾಗಲಿ
ಮನಸ್ಸು- ಕನಸುಗಳಿಗೆ !!

**ಎಸ್ಸಾರ್. ರಾಮರಥ**
ಸಂಶೋಧಕ, ಮಲಪ್ರಭಾ ವಿದ್ಯಾರ್ಥಿ ವಸತಿನಿಲಯ
ಕೊಠಡಿ ಸಂಖ್ಯೆ : ೬೮, ಕವಿವಿ., ಧಾರವಾಡ.

# ಕಳ ಸಂಸ್ಕೃತಿ ಮಾಯವಾಗುತ್ತಿದೆಯೇ ?

ಅಂಜಲಿ

ರಾಗಿ, ಭತ್ತ ಮುಂತಾದ ಧಾನ್ಯಗಳ ಒಕ್ಕಣೆಗಾಗಿ ರೈತರು ಈಗ ಹಳ್ಳಿಗಳ ಆಸುಪಾಸಿನಲ್ಲಿ ಹಾದುಹೋಗುವ ಟಾರು ರಸ್ತೆಗಳನ್ನು ಬಳಸಿಕೊಳ್ಳುತ್ತಿದ್ದಾರೆ. ಒಳನಾಡಿನ ಮೋಟಾರು ರಸ್ತೆಗಳಲ್ಲಿ ಅನೇಕ ಕಡೆ ಇಂಥ ಕಳ(ಕಣ)ಗಳನ್ನು ಕಾಣಬಹುದು. ಈ ರಸ್ತೆ ಕಳ ರೈತರಿಗೆ ಹೊಳೆದಿರುವ ಸುಲಭವಾದ ಉಪಾಯ. ಹಿಂದಿನಂತೆ ಧಾನ್ಯ ಒಕ್ಕಣೆಗಾಗಿ ಕಳ ಮಾಡಲು ಶ್ರಮಪಡಬೇಕಾಗಿಲ್ಲ!

ರೈತರು ಕಳಕ್ಕಾಗಿ ಆಯ್ಕೆ ಮಾಡಿಕೊಳ್ಳುವ ರಸ್ತೆಯ ಭಾಗಗಳನ್ನು ಗುಡಿಸಿ ಸ್ವಚ್ಛಗೊಳಿಸುತ್ತಾರೆ. ಮೆದೆಗಳಿಂದ ರಾಗಿ ಅಥವಾ ಭತ್ತದ ಹುಲ್ಲು ಹೊರೆಗಳನ್ನು ತಂದು, ಧಾನ್ಯದ ತೆನೆಗಳು ರಸ್ತೆಯ ಮಧ್ಯಕ್ಕೆ ಬರುವಂತೆ ಜೋಡಿಸಿ, ಸುಮಾರು ಅರ್ಧ ಅಡಿಯಷ್ಟು ಎತ್ತರಕ್ಕೆ ಹರಡುತ್ತಾರೆ. ಇಂಥ ಪ್ರತಿಯೊಂದು ರಸ್ತೆ ಕಳದ ಬಳಿ ಒಕ್ಕಣೆ ಮಾಡುವ ಮೂರು ನಾಲ್ಕು ಜನರಾದರೂ ಇರುತ್ತಾರೆ.

ರಸ್ತೆಯ ಎರಡೂ ಕಡೆಯಿಂದ ಎತ್ತಿನಗಾಡಿ, ಟ್ರ್ಯಾಕ್ಟರ್, ಕಾರು, ಲಾರಿ, ಬಸ್ – ಹೀಗೆ ಎಲ್ಲ ಬಗೆಯ ವಾಹನಗಳು ಹಾಸಿರುವ ಹುಲ್ಲಿನ ಮೇಲೆ ಹಾದು ಹೋಗುತ್ತವೆ. ಒಂದು ವಾಹನ ಹುಲ್ಲಿನ ಮೇಲೆ ಹಾದುಹೋದ ನಂತರ, ಕೆಲಸಗಾರ ರಸ್ತೆಯಿಂದ ಚೆದುರಿಹೋಗಿರುವ ಹುಲ್ಲನ್ನು ಮತ್ತೆ ರಸ್ತೆ ಮಧ್ಯಕ್ಕೆ ಸರಿಸುತ್ತಾನೆ. ಮತ್ತೊಬ್ಬ ರಸ್ತೆಯ ಮಣ್ಣು ಧಾನ್ಯದೊಳಕ್ಕೆ ಸೇರದಂತೆ ಮುತುವರ್ಜಿ ವಹಿಸುತ್ತಾನೆ. ರಸ್ತೆಯ ಮೇಲೆ ಹುಲ್ಲು ನೋಡಿದಾಗ ಕೆಲವು ಚಾಲಕರು ವೇಗ ತಗ್ಗಿಸುತ್ತಾರೆ. ಮತ್ತೆ ಕೆಲವರು ವೇಗವಾಗಿಯೇ ಗಾಡಿ ಚಲಿಸುತ್ತಾರೆ. ಒಕ್ಕಣೆ ಮಾಡಲು ಬಂದವರು ಕೆಲವೊಮ್ಮೆ ವಾಹನಗಳು ಸಮೀಪಕ್ಕೆ ಬರುವವರೆಗೂ ತಮ್ಮ ಕೆಲಸದಲ್ಲಿ ನಿರತರಾಗಿದ್ದು ಚಾಲಕರನ್ನು ಪೇಚಿಗೆ ಬೀಳಿಸುವುದುಂಟು.



ಒಂದು ವಾಹನ ಹಾದುಹೋದ ನಂತರ ಹುಲ್ಲು ತಿರುವಿ ಹಾಕುವ, ಹುಲ್ಲು ಒದರಿ ಹರಡುವ ಕೆಲಸ ಮುಂದುವರಿಯುತ್ತದೆ.

ವಾಹನಗಳು ಬಂದು ಹೋಗುತ್ತಲೇ ಇರುತ್ತವೆ. ಒಕ್ಕಣೆಗೆ ಬಂದಿರುವವರಿಗೆ ಒಂದು ಕ್ಷಣವೂ ಬಿಡುವಿರುವುದಿಲ್ಲ. ಉದುರಿರುವ ಧಾನ್ಯವನ್ನು ಮೊರ ಗಳಲ್ಲಿ ತುಂಬಿಸಿ ಬೇರೊಂದು ಕಡೆ ರಾಶಿ ಹಾಕುತ್ತಾರೆ. ಹುಲ್ಲು ತಿರುವಿ ಹರಡುವ, ಮಣ್ಣು ಸೇರದಂತೆ ಎಚ್ಚರವಹಿಸುವ ಕೆಲಸ ಮುಂದುವರಿಯುತ್ತದೆ.

ಹೀಗೆ ಟಾರು ರಸ್ತೆಯನ್ನು ತಾತ್ಕಾಲಿಕ ಕಳವಾಗಿ ಬಳಸಿಕೊಳ್ಳುವುದರಿಂದ, ಕಳ ಮಾಡುವ ಶ್ರಮ ಉಳಿತಾಯವಾಗುವುದಲ್ಲದೆ, ಒಮ್ಮೆ ತಮಗೆ ಎಷ್ಟು ಬೇಕೋ ಅಷ್ಟನ್ನು ಮಾತ್ರವೇ ಒಕ್ಕಣೆ ಮಾಡಿಕೊಳ್ಳಬಹುದಾಗಿದೆ. ಕನಿಷ್ಠ ಮೂರು ತಿಂಗಳವರೆಗೆ ಕಳಕ್ಕೆ ಅಂಟಿಕೊಳ್ಳುವ ಜವಾಬ್ದಾರಿಕೆ, ಕಳ ಕಾಯುವ ರೇಜಿಗೆ ಇರುವುದಿಲ್ಲ.

ಕಾಲ ಬದಲಾದಂತೆ, ನಮ್ಮ ಹಿಂದಿನ ಕಳ ಸಂಸ್ಕೃತಿ ಹಳ್ಳಿಗಳಿಂದ ಮಾಯವಾಗುತ್ತಿದೆಯೆ ?

ಒಂದು ಕಳವನ್ನು ನಾಲ್ಕೈದು ಮಂದಿ ರೈತರು ಬಳಸಿಕೊಳ್ಳುತ್ತಿದ್ದರು. ಒಕ್ಕಣೆಯಲ್ಲಿ ಪರಸ್ಪರ ಮುಯ್ಯಾಳುಗಳಾಗಿ ಸಹಕರಿಸುತ್ತಿದ್ದರು. ಕಳ ಮಾಡುವ ದಿನದಿಂದ ಹಿಡಿದು ರಾಗಿ, ಭತ್ತ ಬಡಿಯುವಾಗ ಹತ್ತಾರು ಜನರು ಭಾಗವಹಿಸುತ್ತಿದ್ದ ಸಾಮೂಹಿಕ ಚಟುವಟಿಕೆಯ ಕೇಂದ್ರವಾಗಿರುತ್ತಿತ್ತು. ಕಳಗಳು ಸಾಮಾನ್ಯವಾಗಿ ಊರಿನ ಸಮೀಪದ ಹೊಲಗಳಲ್ಲಿದ್ದು ಅವು 'ಕಳದ ಹೊಲ' ಎಂಬ ಗೌರವಕ್ಕೆ ಪಾತ್ರವಾಗಿರುತ್ತಿದ್ದವು.

ಹಿಂದೆ ರೈತರು ತಮ್ಮ ಎಲ್ಲ ಕೃಷಿ ಕೆಲಸದಂತೆಯೇ ಕಳ ಮಾಡುವ ವಿಷಯದಲ್ಲಿ ಸಹ ಸಾಕಷ್ಟು ಶ್ರದ್ಧೆ ತೋರಿಸುತ್ತಿದ್ದರು. ಕಳಕ್ಕೆಂದು ಆಯ್ಕೆ ಮಾಡಿದ ಸ್ಥಳದಲ್ಲಿದ್ದ ಬೆಳೆಯನ್ನು ಕೊಯ್ಲು ಮಾಡಿದ ನಂತರ, ನೆಲವನ್ನು ಎಲೆ ಗುದ್ದಲಿಯಿಂದ ಕೆತ್ತಿ ಮಟ್ಟ ಮಾಡುತ್ತಿದ್ದರು. ಪೈರಿನ ಬೊಡ್ಡೆಗಳು, ಬೇರುಗಳು, ಸಣ್ಣಪುಟ್ಟ ಕಲ್ಲುಗಳನ್ನು ಆಯ್ದು ಎಸೆಯುತ್ತಿದ್ದರು. ನೆಲವನ್ನು ಗಟ್ಟಿಗೊಳಿಸಲು ಮೊದಲು ಕುರಿಗಳಿಂದ ತುಳಿಸುತ್ತಿದ್ದರು. ಕೆಲವರು ಧಿಂಸ ಹಾಕುತ್ತಿದ್ದಾರಾದರೆ ಮತ್ತೆ ಕೆಲವರು ರೋಣು ಹೊಡೆಸುತ್ತಿದ್ದರು. ಎರಡೇ ದಿನದಲ್ಲಿ ವಾಸದ ಮನೆಯ ನೆಲದಷ್ಟು ಮಟ್ಟಸವಾದ ಕಳ ಸಿದ್ಧವಾಗುತ್ತಿತ್ತು. ಕಳದ ಮಧ್ಯದಲ್ಲಿ ಒಂದು ಮೇಟಿ ಕಂಬ ನೆಟ್ಟಾಗ ಕಳಕ್ಕೊಂದು ಗಾಂಭೀರ್ಯ ಬರುತ್ತಿತ್ತು. ಇಡೀ ಕಳವನ್ನು ಸೆಗಣಿಯಿಂದ ಸಾರಿಸುತ್ತಿದ್ದರು. ಒಂದು ಹಿಡಿ ಗಾತ್ರದ ಸೆಗಣಿ ಉಂಡೆ ಮಾಡಿ, ಅದರ ತಲೆಯ ಮೇಲೆ ಎರಡು-ಮೂರು ಗರಿಕೆ ಎಸಳು ಸಿಕ್ಕಿಸಿ ಮೇಟಿಯ ಮೇಲಿಟ್ಟು ಕಳಕ್ಕೆ ಪೂಜೆ ಮಾಡುತ್ತಿದ್ದರು.

ಒಂದೊಂದೇ ಹೊಲವನ್ನು ಕೊಯ್ಲು ಮಾಡುತ್ತ ಹೋದಂತೆ ಕಳದ ಸುತ್ತಲೂ ಬೇರೆ ಬೇರೆ ಆಕಾರದ ಮೆದೆಗಳು ಮೂಡಿ ಬರುತ್ತಿದ್ದವು. ಭತ್ತ, ರಾಗಿ, ಜೋಳ, ಹುರುಳಿ, ಎಳ್ಳು, ಅವರೆ, ನೆಲಗಡಲೆ, ಸಾಮೆ, ಕಂಬು, ಹಾರಕ – ಮುಂತಾದ ಎಲ್ಲ ಧಾನ್ಯಗಳು, ಕಾಳುಗಳ ಒಕ್ಕಣೆ ಈ ಕಳಗಳಲ್ಲಿ ನಡೆಯುತ್ತಿತ್ತು. ರಾಗಿಯ ಹುಲ್ಲನ್ನು ಕೋಲುಗಳಿಂದ ಬಡಿಯುತ್ತಿದ್ದರಾದರೆ, ಜೋಳದ ತೆನೆಗಳನ್ನು ದನಗಳಿಂದ ತುಳಿಸುತ್ತಿದ್ದರು, ರೋಣು ಹೊಡೆಸುತ್ತಿದ್ದರು. ಹೊಟ್ಟು ಬೆರೆತ ಧಾನ್ಯವನ್ನು ಗಾಳಿಯಲ್ಲಿ ತೂರುವುದೊಂದು ನಿಪುಣ ಕೆಲಸ. ಧಾನ್ಯ ತೂರುವವರಿಗೆ ಅನೇಕ ಸಲ ಗಾಳಿ ಸಹಕರಿಸುತ್ತಿರಲಿಲ್ಲ. ಮೊರ ಎತ್ತಿ ಹಿಡಿದು ಕಾಯುತ್ತ ನಿಂತ ಅವರು 'ಹುಯಿಲ್ಗೋ ವಾಸ್ದೇವ' – ಎಂದು, ದೂರದಲ್ಲಿ ಸಂಚರಿಸುವ ಗಾಳಿಯನ್ನು ಪೂಸಿ ಮಾಡುತ್ತಿದ್ದರು. ಆಗ 'ಎಲ್ಲಾ ಊರ್ನೋರು ಒಂದೇ ದಿನ ತೂರ್ತಾ ನಿಂತ್ಕಡ್ರೆ, ಆ ವಾಸ್ದೇವ ತಾನೆ ಎಲ್ಲೆಲ್ಗೆ ಅಂತ ಓಡಾಡೀನು!' – ಎಂದು ಯಾರಾದರೂ ಹೇಳಿದರೆ ಕಳದಲ್ಲಿ ನಗೆಯ ಬುಗ್ಗೆ ಚಿಮ್ಮುತ್ತಿತ್ತು!

ಹೀಗೆ 'ವಾಸ್ದೇವ'ನನ್ನು ಸ್ಮರಿಸುತ್ತಿದ್ದ ಅಂದಿನ ರೈತನ ಕಲ್ಪನೆಗೆ ಈಗಿನ ಯಾಂತ್ರೀಕೃತ ಕೃಷಿ ಬಂದಿರಲು ಸಾಧ್ಯವಿಲ್ಲ. ಧಾನ್ಯ ತೂರಲು ಈಗ ವಾಸುದೇವನ ಕೃಪೆ ಬೇಕಾಗಿಲ್ಲ, ವಿದ್ಯುತ್ತಿನ ಕೃಪೆ ಬೇಕು!

ಸಾಮಾನ್ಯವಾಗಿ ಡಿಸೆಂಬರ್ ಕೊನೆಯ ವೇಳೆಗೆ ಕಳ ಮಾಡಿದರೆ, ಮುಂದಿನ ಮೂರು ತಿಂಗಳವರೆಗೆ ಕಳದಲ್ಲಿ ಏನಾದರೂ ಚಟುವಟಿಕೆ ಇದ್ದೇ ಇರುತ್ತಿತ್ತು. ಆಗ ಮನೆಯ ಹೆಂಗಸರಿಗೆ ಕಳದಲ್ಲಿ ಕೆಲಸ ಮಾಡುವವರಿಗೆ ಅಡಿಗೆ ಮಾಡಿ ಹೊತ್ತೊಯ್ಯುವ ಕೆಲಸ. ಸಂಜೆಯ ವೇಳೆ ಕಳ ಕಾಯುವ ಕೆಲಸ ಮಕ್ಕಳದು. ಶಾಲೆಯಿಂದ ಬಂದ ಕೂಡಲೇ ಕಳದ ಕಡೆಗೆ ದೌಡಾಯಿಸುವುದು ಮಕ್ಕಳಿಗೆ

ಬಹಳ ಪ್ರಿಯವಾದ ಕೆಲಸ. ಮಗ್ಗಿ, ಪದ್ಯ, ಗದ್ಯ ಬಾಯಿ ಪಾಠ ಮಾಡಲು ಕಳದಂಥ ಪ್ರಶಸ್ತವಾದ ಸ್ಥಳ ಬೇರೊಂದಿರಲಾರದು. ''ಸುಮ್ನೆ ಕುಣಿಬ್ಯಾಡ್ರಿ, ಪಾಟ ಓದ್ಕಳಿ...'' ಎಂದು ಹಿರಿಯರು ಎಚ್ಚರಿಸಿದರೂ ಕುಣಿದಾಟ ನಡೆದೇ ನಡೆಯುತ್ತಿತ್ತು! ರಾತ್ರಿ ಹುಲ್ಲು ಹಾಸಿಗೆಯಲ್ಲಿ ಮಲಗಿ ಹಿರಿಯರಿಂದ ಕತೆ, ಒಗಟು ಕೇಳಿಸಿಕೊಂಡದ್ದು ಆಕಾಶದ ನಕ್ಷತ್ರಗಳನ್ನು ಕುರಿದೊಡ್ಡಿ, ಮಂಚದ ಪಾದ – ಮುಂತಾಗಿ ಗುರುತಿಸಿದ್ದು ನಿಶಾಚರಿ ಕೀಟಗಳ, ಹಕ್ಕಿಗಳ ಸದ್ದು ಕೇಳಿಸಿಕೊಳ್ಳುತ್ತ, ನಿಸರ್ಗದೊಂದಿಗೆ ಸಂವಾದ ನಡೆಸಿದ್ದು ಕೆಲವರ ನೆನಪಿನಲ್ಲಾದರೂ ಉಳಿದಿರಲು ಸಾಕು! ಒಕ್ಕಣೆ ಮುಗಿಸಿ ಧಾನ್ಯವನ್ನು ಮನೆಗೆ ಸಾಗಿಸುವ ದಿನ ಸಹ ರೈತರ ಪಾಲಿಗೆ ಸಂಭ್ರಮದ ದಿನ! ಎಂದಿನ ಶ್ರದ್ಧೆ ಭಕ್ತಿಯಿಂದ ವಿಭೂತಿ-ಕುಂಕುಮ ಹಚ್ಚಿದ ಕೊಳಗಕ್ಕೆ ಧಾನ್ಯ ತುಂಬಿಸಿ ರಾಶಿಯ ಮೇಲಿಡುತ್ತಿದ್ದರು. ಪಕ್ಕದಲ್ಲಿ ಸೆಗಣಿ ಉಂಡೆಯಲ್ಲಿ ತಯಾರಿಸಿದ ಭೂತಪ್ಪ. ಇದನ್ನು ಕಡಗಾಳು ಭೂತ ಎನ್ನುತ್ತಿದ್ದರು. ರಾಶಿಗೆ ಪೂಜೆ ಮಾಡಿ ಕೈ ಮುಗಿದನಂತರ, ಧಾನ್ಯ ಅಳೆಯುವ ಕೆಲಸ. ಅಳತೆ ಮಾಡುವವ ಕೊಳಗವನ್ನು ಮುಟ್ಟಿ ಕಣ್ಣಿಗೊತ್ತಿಕೊಂಡು 'ಲಾಭ ಒಂದು' ಎಂದು ಪ್ರಾರಂಭಿಸಿ, ಚೀಲಗಳಿಗೆ ಧಾನ್ಯ ಸುರಿಯುತ್ತಿದ್ದ. ಆರು ಎಣಿಸಿದ ನಂತರ 'ಏಳು' – ಎನ್ನುವ ಬದಲು 'ಹೆಚ್ಚಲಿ'-ಎನ್ನುತ್ತಿದ್ದ! ಕಳದ ಕೆಲಸದಲ್ಲಿ ಭಾಗಿಯಾಗಿರುವವರ ಕಿವಿಗಳಿಗೆ ಆ ಎಣಿಕೆ ಮಂತ್ರದ ನುಡಿಗಳಂತೆ ಕೇಳಿಸುತ್ತಿತ್ತು. ಇಡೀ ರಾಶಿಯನ್ನು ಅಳೆದು ಮುಗಿಸುವಷ್ಟರಲ್ಲಿ ಆತನ ಟೊಂಕ ಬಿದ್ದುಹೋಗುತ್ತಿತ್ತು. ಈ ವರ್ಷ ಇಷ್ಟು ಖಂಡುಗ ಇಷ್ಟು ಪಲ್ಲ ಬೆಳೆದಿದ್ದೇವೆ



*ಈಗ ಧಾನ್ಯ ತೂರಲು ವಿದ್ಯುತ್ ಸಹಾಯ*

ಎಂದು ತೃಪ್ತಿಪಡುತ್ತಿದ್ದರು...

ಕಳದಲ್ಲಿ ಕೊನೆಯ ಧಾನ್ಯವನ್ನು ಮನೆಗೆ ಒಯ್ಯುವವರೆಗೂ ಮನೆಯ ಯಾರಾದರೊಬ್ಬರು ಅಲ್ಲಿರ ಬೇಕಾಗುತ್ತಿತ್ತು. ಒಂದು ಊರೆಂದರೆ ಕೆಲವರಾದರೂ ನಿರ್ಗತಿಕರಿರುತ್ತಿದ್ದರು. ಒಕ್ಕಣೆಯ ದಿನ ಕಂತೆ ಭಿಕ್ಷೆ ಎತ್ತುವವರಿದ್ದರು. ಹೀಗೆ ನಿರ್ಗತಿಕರಿಗೆ ನೀಡಲೆಂದೇ ಒಂದು ಸಣ್ಣ ರಾಶಿಯನ್ನು ಹಾಕಿರುತ್ತಿದ್ದರು. ದೊಡ್ಡ ರಾಶಿಯನ್ನು ಅಳೆದು ಚೀಲಗಳಿಗೆ ತುಂಬಿಸಿ ಮನೆಗೆ ಸಾಗಿಸುವಷ್ಟರಲ್ಲಿ ಸಣ್ಣ ರಾಶಿ ಖಾಲಿಯಾಗುತ್ತಿತ್ತು. ಅಲ್ಲದೆ ಬಡಗಿ, ಕುಂಬಾರ, ಅಗಸ, ಕ್ಷೌರಿಕ – ಇತ್ಯಾದಿ ಊರ ಸೇವೆ ಮಾಡುವವರಿಗಾಗಿ 'ಅಡದಿ' ಎಂದು ಒಂದು ನಿರ್ದಿಷ್ಟ ಪ್ರಮಾಣದ ಧಾನ್ಯ ನೀಡುತ್ತಿದ್ದರು.

ಇತ್ತೀಚೆಗೆ ಇಂಥ ರಸ್ತೆ ಕಳದಲ್ಲಿ ಕೆಲಸ ಮಾಡುತ್ತಿದ್ದವರೊಂದಿಗೆ ಮಾತನಾಡಲು ಅವಕಾಶ ಸಿಕ್ಕಿತ್ತು. ಇವರು ರಸ್ತೆಯನ್ನು ಕಳವಾಗಿ ಬಳಸಲು ಮುಖ್ಯ ಕಾರಣ, ನೀರಾವರಿಯಿಂದಾಗಿ ಹಿಂದಿನ ಬೆಳೆ ಪದ್ಧತಿ ಮಾಯವಾಗಿರುವುದು. ಕಬ್ಬು, ಹಿಪ್ಪುನೇರಳೆ, ನೆಲಗಡಲೆ ಮುಂತಾದ ನಗದು ಬೆಳೆಗಳಿಗೆ ಆದ್ಯತೆ ನೀಡುತ್ತಿರುವುದು. ಊರಿನ ಸಮೀಪದವರೆಗೂ ಗದ್ದೆಗಳಾಗಿದ್ದು ಕಳ ಆಗಬೇಕಾದ ಸಂದರ್ಭದಲ್ಲಿ ಆ ಭೂಮಿಯಲ್ಲಿ ನೀರು ತುಂಬಿದ್ದು ಇವರ ಸಹಾಯಕ್ಕೆ ಒದಗದಿರುವುದು. ಟಾರು ರಸ್ತೆ ಹಾದುಹೋಗುವ ಹಳ್ಳಿಗಳವರು ಮಾತ್ರ ಈ ಅವಕಾಶವನ್ನು ಬಳಸಿಕೊಳ್ಳುತ್ತಿದ್ದಾರಾದರೂ, ಹಿಂದಿನ ಕಳ ಸಂಸ್ಕೃತಿ ಹಳ್ಳಿಗಳಿಂದ ಮಾಯವಾಗಿದೆ ಎಂದು ಹೇಳಲಾಗದು. ಟಾರು ರಸ್ತೆಯ ಮಾತಿರಲಿ, ಈಗಲೂ ಸಾಧಾರಣ ರಸ್ತೆಗಳ ಸಂಪರ್ಕವೇ ಇಲ್ಲದ, ನೀರಾವರಿಯ ಸೌಕರ್ಯವಿಲ್ಲದ ಲಕ್ಷಾಂತರ ಹಳ್ಳಿಗಳಿವೆ. ಅವರು ಕಳ ಮಾಡುವ ಶ್ರಮದಿಂದ ತಪ್ಪಿಸಿಕೊಳ್ಳುವಂತಿಲ್ಲ.

**ಪರಂಜ್ಯೋತಿ**
ನಂ. ೧೬೭೮, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮

# ದಯೆಯೇ ಧರ್ಮದ ಮೂಲವಯ್ಯಾ !

ಅನೇಕರು ದಯೆಯ ಕುರಿತು ಅರಿವನ್ನುಂಟುಮಾಡಲು ಪ್ರಯತ್ನಿಸಿದ್ದಾರೆ. 'ದಯೆ' ಎಂಬುದು ಮನುಷ್ಯನಾಳದ ಭಾವನೆಗಳಲ್ಲಿ ದಟ್ಟವಾದ ಒಂದು ಭಾವನೆ. ಪ್ರೀತಿ, ಕರುಣೆ, ದಯೆ, ಇವೆಲ್ಲಾ ಮನುಷ್ಯನ ಸಂಗಾತಿಗಳು. ಇವಿಲ್ಲದ ಬದುಕು ಬದುಕಾಗುವುದಿಲ್ಲ, ಎಲ್ಲ ಧರ್ಮಗಳೂ ಇದನ್ನೇ ಹೇಳಿವೆ. ಬಸವಣ್ಣನವರು 'ದಯೆಯೇ ಧರ್ಮದ ಮೂಲವಯ್ಯಾ' ಎನ್ನುವಾಗ 'ದಯೆ' ಮಾನವಧರ್ಮದ ಮೂಲ, ಅದನ್ನು ಹಿಡಿದೇ ಬದುಕಿನ ದಾರಿ ಸಾಗಿಸಬೇಕೆಂದು ನುಡಿದಿದ್ದಾರೆ. ದಾಸಶ್ರೇಷ್ಠರು 'ಮಾನವಕುಲ ದೊಡ್ಡದು, ಅದ ಹಾನಿ ಮಾಡಬೇಡಿ' 'ಪ್ರೀತಿ, ವಿಶ್ವಾಸ, ದಯೆಯಿಂದ ಸಾರ್ಥಕ ಬಾಳನ್ನು ಬಾಳಿ', ಎಂದು ಆಶಿಸಿದ್ದಾರೆ. ಇನ್ನು, ದಯೆಯೇ ಮೂರ್ತಿವೆತ್ತಂತಿದ್ದ ಗಾಂಧೀಜಿಯವರು ಅಹಿಂಸೆಯನ್ನು ಬೋಧಿಸುವ ಮೂಲಕ ದಯಾಪರರಾಗಿರಿ ಎಂದು ಬಾಳಿ ತೋರಿಸಿದ್ದಾರೆ. ಒಟ್ಟಿನಲ್ಲಿ 'ದಯೆ' ಮಾನವನ ಅಂತರಂಗ ಆಗಬೇಕು. ಕಾಯಾ ವಾಚಾ ಮನಸಾ ದಯಾಪರ ಪ್ರವೃತ್ತಿ ಬೆಳೆಸಿಕೊಂಡು ಬಾಳಬೇಕೆಂಬುದು ಎಲ್ಲರ ನೀತಿವಾದ.

ಆದರೆ, ಈ ದಿನಗಳಲ್ಲಿ ಮಾನವ ಮಾನವನಾಗಿ ಉಳಿದಿಲ್ಲ, ರಾಕ್ಷಸ ಪ್ರವೃತ್ತಿಗಳನ್ನು ಬೆಳೆಸಿಕೊಂಡು, ಅಹಂಕಾರ, ಕ್ರೋಧ, ಮದ-ಮಾತ್ಸರ್ಯದಿಂದಾಗಿ ಹಿಂಸಾವೃತ್ತಿಗಳಲ್ಲಿ ತೊಡಗಿ 'ದಯೆ' ಎಂದರೇನೆಂಬುದನ್ನೇ ಪ್ರಶ್ನಿಸುವ ಸಾಲಿಗೆ ಬಂದು ನಿಂತಿದ್ದಾನೆ. ದಯೆಯನ್ನು ಮರೆತ ಮಾನವ ಹಿಂಸಾತ್ಮಕ ಕೃತ್ಯಗಳಲ್ಲಿ ತೊಡಗಿ ಜೀವನಾಶಕ ಪ್ರವೃತ್ತಿಗಳನ್ನು ಬೆಳೆಸಿಕೊಳ್ಳುತ್ತಿದ್ದಾನೆ. ಇದರ ಫಲವೇ ಯುದ್ಧ, ಭಯೋತ್ಪಾದಕತೆ, ಹಿಂಸಾಚಾರ.

ಮೊನ್ನೆ ಹೀಗಾಯಿತು. ಗೆಳತಿಯೊಬ್ಬಳ ಮನೆಯಲ್ಲಿ ಐದಾರು ಹಸುಗಳನ್ನು ಸಾಕಿದ್ದಾರೆ. ಒಂದು ಹಸು ಕರುವೊಂದಕ್ಕೆ ಜನ್ಮ ನೀಡಿತು. ಕರು ನೋಡಲು ತುಂಬಾ ಮುದ್ದಾಗಿದೆ. ಬಿಳಿ ಮೈಯ ಮೇಲೆಲ್ಲಾ ರಂಗೋಲಿ ಇಟ್ಟಂತೆ ಕಪ್ಪು ಚಿತ್ತಾರ ಅದಕ್ಕೊಂದು ಸೊಬಗನ್ನು ತಂದಿದೆ. ಹುಟ್ಟಿ ಒಂದು ದಿನ ಮಾತ್ರ ಆಗಿತ್ತು. ನಾನು ಅದನ್ನು ನೋಡಿದಾಗ ಅದರ ಮೂತಿ ಊದಿಕೊಂಡಂತೆ ದುಂಡಗೆ ಆಕರ್ಷಕವಾಗಿತ್ತು. ಆದರೆ, ಮೈಮೇಲೆಲ್ಲಾ ಸಗಣಿ, ಗಂಜಲದಿಂದ ಕೊಳಕಾಗಿ, ಸುಸ್ತಾದಂತಾಗಿ ಕಾಣುತ್ತಿತ್ತು. ಗೆಳತಿಯನ್ನು ವಿಚಾರಿಸಿದೆ. ''ಅದು ಹೋರಿ ಕರು, ಅಂದರೆ ಗಂಡುಕರು. ಹೆಣ್ಣು ಕರುವಾಗಿದ್ದರೆ ಪ್ರಯೋಜನವಿತ್ತು. ಬೆಳೆದು ಮುಂದೆ ಲೀಟರುಗಟ್ಟಲೆ ಹಾಲು ಕೊಡುತ್ತಿತ್ತು. ಇದನ್ನೇನು ಮಾಡುವುದು'' ಎಂದು, ಆಗತಾನೆ ತಾಯಿ ಹೊಟ್ಟೆಯೊಳಗಿಂದ ಕೆಳಕ್ಕೆ ಬಿದ್ದ ಕರುವನ್ನು ಕೊಟ್ಟಿಗೆಯಲ್ಲಿ ಗಂಜಲ, ಸಗಣಿಯ ಮೇಲೇ ಬಿಟ್ಟುಬಿಟ್ಟಿದ್ದರು. ಪಾಪ, ಅದು ಏಳಲಾರದೆ ಬೆಳಗ್ಗೆವರೆಗೂ ಅಲ್ಲೇ ಬಿದ್ದಿತ್ತು. ತಾಯಿ ಹಸು ಆಗಾಗ ಕರುವಿನ ಬಳಿ ಮೂತಿ ಮುಂದೆ ಮಾಡಿ ಮೂಸುತ್ತಿತ್ತಂತೆ.

ಈ ಘಟನೆ ಕೇಳಿದವರೆಲ್ಲರಿಗೂ 'ಪ್ರಾಣಿದಯೆ' ಎಷ್ಟೊಂದು ಮುಖ್ಯ ಅನ್ನಿಸದಿರದು. ಮಾನವ 'ಉಪಕಾರ' ದೃಷ್ಟಿಯಿಂದ, ಪ್ರತಿಫಲಾಪೇಕ್ಷೆಯಿಂದ 'ದಯೆ' ತೋರಿದರೆ, ಅದು 'ದಯೆ' ಎನ್ನಿಸುವುದಿಲ್ಲ. ಕೂಡಿ-ಕಳೆದು-ಭಾಗಿಸಿ ಸ್ವಾರ್ಥಿಯಾಗಿ ಬದುಕಿದ ಬದುಕಿಗೆ ಅರ್ಥವೇನಿದೆ ? ಯಾವುದೇ ಅಪೇಕ್ಷೆಯಿಲ್ಲದೆ ಪ್ರಾಣಿ, ಮನುಷ್ಯರು, ಗಿಡ-ಮರಗಳೆನ್ನದೆ ದಯೆ ತೋರುವ ಬದುಕೇ ಸಾರ್ಥಕ ಬದುಕು. ಹೀಗೆ ದಯೆಯಿಂದ ಬಾಳಿ, ಮುಂದಿನ ಜನಾಂಗಕ್ಕೂ 'ದಯೆ'ಯ ಪಾಠ ಕಲಿಸುವುದು ಇಂದಿನವರ ಕರ್ತವ್ಯವಲ್ಲವೇ ?

**ಸುಜಾತ**
ನಂ.೧೭೭೧, ೭ನೇ ಅಡ್ಡರಸ್ತೆ ಲಕ್ಷ್ಮೀಪುರ, ಬೆಂಗಳೂರು-೫೬೦ ೦೯೯

# ಬಿಸಿಲ ಮರದ ಗರುಡ ಪುರಾಣ

ಪ್ರೊ॥ ಜಿ. ಎಚ್. ಹನ್ನೆರಡುಮಠ



**ರೊ**ಟ್ಟಿಯ ಹಂಚಿನಂತೆ ಬಿಸಿಲು ಚುರುಗುಡುತ್ತಿತ್ತು!

ಕಣ್ಣು ಕೆಂಜಿಗೆ... ನಗೆ ಥಗೆ...

ಮುಗಿಲ ಬಾಣಿಗೆಯಲ್ಲಿ ಸೂರ್ಯನನ್ನು ಭಜಿ ಮಾಡಿ ಕರಿಯುತ್ತಿದ್ದರು. ಹಿರೇ ಹೆಬ್ಬಾವಿನಂತೆ ಡಾಂಬರಿನ ಕರೇದಾರಿ ಉದ್ದೋಕ ಬಿದ್ದಿತ್ತು. ದಾರಿಗುಂಟ... ಎಮ್ಮಿ ಉದ್ದೋಕ ಉಚ್ಚಿ ಹೋದಂಗ... ನಮ್ಮ ಬಸ್ಸು ನೀರಸವಾಗಿ ಓಡುತ್ತಿತ್ತು!

ಹೌದು... ಇದು ದಿಕ್ಕೇಡಿ ದ್ಯಾಮವ್ವನ ಬಸ್ಸು. ಯಾಕೆಂದರೆ ಡ್ರೈವರ-ಕಂಡಕ್ಟರರನ್ನು ಸೇರಿಸಿ ಎಣಿಸಿದರೂ ಬಸ್ಸಿನಲ್ಲಿ ಹತ್ತೇಹತ್ತು ಮಂದಿ. ಮಗ್ಗುಲಲ್ಲಿ ಮೈ ಒತ್ತುವವರಿಲ್ಲ. ಭುಜಕ್ಕೆ ಭುಜ ತಟ್ಟುವ ಲಲನೆಯರಿಲ್ಲ. ಶ್ವೇತ ಕೇಶಿಯರೂ ಇಲ್ಲ.

ಧೂಳು ದುಮ್ಮಸಾದ ಈ ಹೊಸಾ ಬಸ್‌ಸ್ಟ್ಯಾಂಡಿನಲ್ಲಿ ಬಸ್ಸು ಗಿರ್‌ಗಿಚ್ಚಂತ ಒಮ್ಮೆ ತಿರುಗಿದಾಗ ಧೂಳಿನ ದೆವ್ವಗಳು... ಉಧೋ ಎಲ್ಲವ್ವಾ... ಅಂತ ಎದ್ದವು. ಹುಳಿಮಜ್ಜಿಗೆ ಕಟಿದಂತೆ ನನ್ನ ನಿದ್ದೆ ಕಲ್ಲಾಬಿಲ್ಲಿ ಕೋತಂಬ್ರಿ ಆತು.

ನನ್ನ ತಲೆ ಕಾಗಿ ಕುಕ್ಕಿದಂತಾಯಿತು! ಘಾಬ್ರಾಯಿಸಿ ಕಣ್ಣು ತೆರೆದಾಗ... ನನ್ನ ಮುಂದೆ ಅಂತರ ಪಿಶಾಚಿಯೊಂದು ಕಣ್ಣು ಕಿಸಿದು ನಿಂತಿತ್ತು! ಅಸಡ್ಡಾಳ ತಲೆ. ಪುಂಡಿಪಲ್ಲೇದಂತಾ ಮಸಡಿ. ಕೊರಕೊಂಚಿಯ ಕೊರ್ರ ಕೊರ್ರ ಕಂಠ. ಕಣ್ಣು ಕಪಲೀಬಾವಿ. ಈ ಮಸಡಿ... ಈ ಹುರಬರಕು ಗಡ್ಡಾ... ಓ ಹೌದು... ನನ್ನ ಯಾವುದೋ ಕಾಲದ ಮರೆತುಹೋದ ಹಳೇ ವಿದ್ಯಾರ್ಥಿಯ ಮುಖವೇ ಸೈ! ಇಲ್ಲಿಗ್ಯಾಕೆ ಬಂತೋ ಈ ಭೂತಾ?

ಇಂಥವನ ಗುರು ನಾನಿರಬೇಕಾದರೆ ನಾನೆಂಥ ಬೂಳಸು ಹತ್ತಿದ ಮರಗದ ಚಟ್ನಿ? ನನಗೆ ನಾನೇ ಹೇಸಿಕೊಂಡೆ. ಆತ ನನ್ನನ್ನು ದೊಣ್ಣಕಾಟದಂತೆ ಡೊಗ್ಗಿ ನೋಡಿ... ನನ್ನ ಮಸಡೀ ಮೇಲೆ ಫಡಾರನೆ ಹೊಡೆದಂತೆ ಚೀರಿ ಹೇಳಿದ –

"ಸsರ್... ಸsರ್... ನಿಮ್ಮನ್ನು ಈ ಬಸ್ಸಿನ್ಯಾಗ ನೋಡೀದ್ರ... ನನಗೆ ಏನ ಅನಸತ್ತೈತಿ... ಖರೇ ಹೇಳ್ಲೇನ್ರೀ?"

ನನಗ ಖುಷಿಯಾಯಿತು. ಬಹುಶಃ ಈತ ನನ್ನನ್ನು... ದೇವರು... ಮಹಾತ್ಮ... ಗ್ರೇಟ್ ಸ್ಕಾಲರ್... ಅಂತ ಹೇಳುವದು ಗ್ಯಾರಂಟಿ ಆಯಿತು. ಆ ಖುಷಿಯಿಂದಲೇ ಕೇಳಿದೆ –

"ಏನು ಅನಿಸುತ್ತದೆ ನಿಮಗೆ ನನ್ನ ಬಗ್ಗೆ?... ಪರವಾಗಿಲ್ಲ... ಧೈರ್ಯವಾಗಿ ಹೇಳಿ..."

ಆತ ಡಬಗಳ್ಳಿ ಮುಳ್ಳು ತುಳಿದಂತೆ ಮುಖ ಗಿಂಡ್ರೀಸಿ ಹೇಳಿದ –

"ಸಾರಿ ಸsರ್... ನೀವು ಟೋಟಲ್ಲಾಗಿ ತಪ್ಪ ಹಾದಿ ಹಿಡಿದೀರಿ... ನೀವು ಟೋಟಲ್ಲಾಗಿ ಫೇಲ ಆಗೀರಿ. ನಾ ನಿಮ್ಮೊಳಗ ಏನ ಕನಸ ಕಂಡಿದ್ದೆ... ಅದು ಉಲ್ಟಾಪಲ್ಟಾ ಆಗಿ... ನೀವು ತಣ್ಣಗ ತಂಬೂಳಿ ಆಗಿಬಿಟ್ರಿ. ಆಯಿಸ್ ಕ್ರಿಂ ಆಗಿಬಿಟ್ರಿ. ನೀವು ಚೀರಬೇಕಾಗಿತ್ತು. ಕೂಗಬೇಕಾಗಿತ್ತು, ಹೊಟ್ಟಿ ಉರುದು ಉರಿಹತ್ತಿ ವದರಬೇಕಾಗಿತ್ತು..."

"ಅಂದ್ರ... ಏನು ನಿಮ್ಮ ವಿಚಾರಾ?"

"ಸsರ್... ನೀವು ಹಿಟ್ಲರ ಆಗಬೇಕಿತ್ತು. ಘೋಡಸೇ ಆಗಬೇಕಿತ್ತು. ಕ್ರಾಂತಿ ಕ್ರಾಂತಿ ಕ್ರಾಂತಿ ಮಾಡಬೇಕಿತ್ತು. ಸಾವಿರ ಮಂದಿ ತಲೀಮ್ಯಾಲೆ ಬಾಂಬ ಹಾಕಬೇಕಾಗಿತ್ತು. ಆದ್ರ ಇವತ್ತ ನೀವು ಸಪ್ಪಟ ಸಪ್ಪನಬ್ಯಾಳಿ ಆದದ್ದು ಕಂಡು ನನಗಂತೂ ಬ್ಹಾಳಾ ಬ್ಹಾಳಾ ಬ್ಹಾಳಾ ದುಃಖ ಆಗಿಬಿಟ್ಟೈತ್ರಿ..."

"ಅಂದ್ರ... ನಾನೇನಾಗಬೇಕಿತ್ತು?... ಬಿಡಿಸಿ ಹೇಳಿ..."

"ಸsರ್... ಈ ಪ್ರಶ್ನೇ ನೀವು ನನಗ ಇಪ್ಪತ್ತ ವರ್ಷದ ಹಿಂದ ಕೇಳಬೇಕಿತ್ತು. ದೇವ್ರು ದಿಂಡ್ರು ಯಾರಿಗೆ ಬೇಕಾಗೈತ್ರಿ? ಈ ಧರ್ಮಾಗಿರ್ಮಾ ಯಾರ ಕರ್ಮಾ? ಇದೆಲ್ಲಾ ಢೋಂಗಿ ಜಗತ್ತು... ಸsರ್... ಒಂದ ಹೆಣ್ಣೀನ ರೇಪ ಮಾಡೀದ್ರ ಅದು ಅಷ್ಟರ ಮಟ್ಟಿಗೆ ಪಾಪಾ. ಆದ್ರ... ನಿಮಗ ಗೊತ್ತೈತೋ ಇಲ್ಲೋ... ಈ ಧರ್ಮದ ಜನಾ... ಕದ್ದ ಕವನೆಳ್ಳಿನ್ಯಾಗ ಏನ ಮಾಡ್ತಾರು... ಏನ ಮಾಡಂಗಿಲ್ಲಾ... ಅವರ ಎದ್ಯಾಗ ಏನ ಐತಿ... ಏನಿಲ್ಲಾ... ಅದು ನಿಮಗ ಏನ ತಿಳೀತೈತ್ರೀ ಸsರ್...?"

ಓಹೋ... ಈತ ನಕ್ಸಲೈಟು! ಬಹುಶಃ ಈಗ ಈತ ನಕ್ಸಲೈಟ ಗುಂಪಿನ ಲೀಡರ ಆಗಿರಲೂಬಹುದು. ಇವನನ್ನು ನೋಡಿದರೆ ಇವನ 'ಹಿಟ್‌ಲಿಸ್ಟಿ'ನಲ್ಲಿ ನಾನೇ ಇದ್ದಂತಿದೆ.

ಬಹುಶಃ ಈ ಬಸ್ಸಿನಲ್ಲಿ ಈ ಜನಾ ಇಲ್ಲದಿದ್ದರೆ ಈತಾ ನನ್ನನ್ನು ಗುಂಡಿಟ್ಟು ಕೊಂದು ಕ್ಯಾಕಿ ಹೊಡೆಯುತ್ತಿದ್ದ ಅನ್ನಿಸಿತು. ಅವನ ಕೈಯಲ್ಲಿ ಹೊಲಸು ಕೈಚೀಲ ಬೇರೇ ಇದೆ. ಅದರಲ್ಲಿ ಪಿಸ್ತೂಲಾದ್ರೂ ಇದ್ದೀತು... ಚಾಕೂ ಆದ್ರೂ ಇದ್ದೀತು. ನಾನು ಅಂಜಿ ಅಳ್ಳಕಾದೆ. ನನ್ನ ಕೆಳತೊಡೆ ಒಂದಿಷ್ಟು ಹಸಿಯಾಯಿತು. ಆತ ಮತ್ತೆ ವದರಿದ –

''ಸರ್... ಈಗಿನ ಹೆಂಗೂಸ್ರು ಅಂದ್ರ ಹೆಂಥಾ ಹೆಂಗೂಸ್ರು ? ಗಂಡೂಸ್ರು ಅಂದ್ರ ಹೆಂಥಾ ಗಂಡೂಸ್ರು ? ಸರ್... ನಿಮಗ ಗೊತ್ತಿಲ್ಲಾ... ಒಳಗ ಹೊಕ್ಕ ಇಣಿಕಿ ಹಾಕಿ ಬರ್ರಿ... ಗಂಡಗ ಹೇಂತಿ ಮ್ಯಾಲೆ ಇಸ್ವಾಸಾ ಇಲ್ಲಾ... ಹೇಂತೀಗೆ ಗಂಡನಮ್ಯಾಲೆ ಇಸ್ವಾಸಾ ಇಲ್ಲಾ... ಅಪ್ಪಾ ಮಗನ್ನ ನಂಬಂಗಿಲ್ಲಾ... ಮಗಾ ಅಪ್ಪನ್ನ ನಂಬಂಗಿಲ್ಲಾ... ಮ್ಯಾಲೆ ಎಲ್ಲಾರೂ ಮಾತುಮ್ರು... ಉತ್ತಮ್ರು. ಅವರ ಮನಿಸಿನ್ಯಾಗ ಮಾತ್ರ ಜೋಕುಮಾರಗೋಳು...''

''ಹೌದಾ...? ಹೀಂಗಾ...?''

ಎಂದು ಹೊಸ ಕಥೆ ಕೇಳುವವರಂತೆ ಕೇಳಿದೆ. ಆತ ವದರಿದ –

''ಅಲ್ರಿ... ನಿಮ್ಮ ಬಗ್ಗೆ ಇದಕ್ಕs ನನಗ ಬ್ಹಾಳಾ ಬ್ಹಾಳಾ ಕೆಟ್ಟ ಅನಿಸಿದ್ದು. ನೀವು ಒಮ್ಮೆರ ಥಿಂಕ್ ಮಾಡೀರೇನ್ರಿ ? ಈ ಹೊಸಾ ಲೇಡೀಜು... ಗಂಡನ ಮನೀಗೆ ಬಂದ ತಕ್ಷಣ... ಇವ್ರೀಗೆ ಡೈನಿಂಗ್ ಟೇಬಲ್ ಬೇಕು... ಫ್ರಿಜ್ ಬೇಕು... ಕಲರ್ ಟಿವಿ ಬೇಕು. ಗಂಡಾ ಕೊಡಸಲಿಲ್ಲಾ ಅಂದ್ರ ಅವಾ ಗಂಡ ಅಲ್ಲಾ... ಗುಂಡಕಲ್ಲು. ಇವರಿಗೆ ಕೈಕಾಲೀಗೆ ಆಳಬೇಕು. ದುನಿಯಾದಾಗ ಇದ್ದದ್ದೆಲ್ಲಾ ಫ್ಯಾಶನ್ನು ಇವ್ರೀಗೆ ಬೇಕು. ಅಜೂಬಾಜೂ ಮನೀಯವ್ರು... ಮುಕುಳಿ ಹರೀ... ತಪ್ಪ ತಿಳೀಬ್ಯಾಡ್ರಿ... ದುಡುದು ದುಡುದು... ಕುಂಡ್ಯಾಗ ರಕ್ತಾ ಕಾರಿ ಸಾಯಿದ್ರ... ಇವ್ರೀಗೆ ನೋಡಾಕ ಪುರಸೊತ್ತಿಲ್ಲಾ. ಇವ್ರೀಗೆ ತಮ್ಮ ಗಂಡ್ರಾತು... ತಾವಾತು... ಇದರ ಅಚ್ಚೀಕ ಜಗತ್ತಿನ್ಯಾಗ ಏನೈತಿ ಏನಿಲ್ಲಾ ಯಾರಿಗೂ ಗೊತ್ತಿಲ್ಲಾ. ಇದs ನಮ್ಮ ದೇಶದ್ದ ಸ್ವಾತಂತ್ರ್ಯಾ. ಸರ್... ಈ ಮಾತ ಹೌದಿಲ್ಲೊ ಖರೇ ಹೇಳ್ರಿ...''

ಓಹೋ ತಿಳೀತು... ಈತ ತನ್ನ ಹೆಂಡತಿ ಹತ್ರ ಜಗಳಾ ಮಾಡಿರಬಹುದು... ಇಲ್ಲಾ... ಇವನ ಹೇಂತಿ ಇವನನ್ನು ಉಳ್ಳಾಗಡ್ಡಿ ಸೊಬರು ಮಾಡಿ ಕಸಾಗುಡಿಸಿರಬಹುದು. ಹೇಂತಿ ಮ್ಯಾಲಿನ ಸಿಟ್ಟು ಈತ ಈಗ ಈ ದುನಿಯಾದ್ದ ಹೆಂಗಸರ ಮೇಲೆ ತೀರಿಸಿಕೊಳ್ಳುತ್ತಿರಬಹುದೇ ? ನಿಜ ನಿಜ !

ಅಂತೂ ಈ ಪಿಶಾಚಿ ನನ್ನ ಸಕ್ಕರೆ ನಿದ್ರೆ ಮಣ್ಣು ಮಾಡುತ್ತಿದೆ !

ಬಸ್ಸು ಓಡುತ್ತಿತ್ತು. ಜೋಳದ ಹೊಲಗಳು ಕಾಲುಚಾಚಿ ಬಿದ್ದಿದ್ದವು. ಹುಂಚೀ ಮರಗಳು ಹಾರುತ್ತಿದ್ದವು. ಬಿಸಿಲು ಇಳಿಬಿಸಿಲಾಗಿತ್ತು. ನನ್ನ ನಿದ್ರೆ ಏರುನಿದ್ರೆಯಾಗಿತ್ತು. ಕಣ್ಣು ತಮಗೆ ತಾವೇ ಮುಚ್ಚುತ್ತಿದ್ದವು. ಈತ ನನ್ನ ಕಿವಿಯಲ್ಲಿ ಡಬ್ಬಣಾ ಅಳ್ಳಾಡಿಸಿದಂತೆ ಚುಚ್ಚಿಚುಚ್ಚಿ ಮಾತಾಡಿಸುತ್ತಿದ್ದ. ನಾನು ಸೋತು ಸುಣ್ಣವಾಗಿ ಕಣ್ಣು ಮುಚ್ಚುತ್ತಿದ್ದೆ. ಆತ ಮತ್ತೆ ಚೀರಿದ –

''ಸರ್... ಈ ಕಾವಿ ಕಂತ್ರಾಟ ಮಂದಿ... ಹರಿಜನ ಕೇರ್‍ಯಾಗ ತಮ್ಮ ಪವಿತ್ರ ಪಾದಾ ಹಾಕಿ ಅವರ ಉದ್ಧಾರಾ ಮಾಡ್ತಾರಂತ... ಮರದಿವ್ಸ ಪೇಪರಿನ್ಯಾಗ ತಮ್ಮ ಫೋಟೋ ಛಾಪಿಸ್ಯಾರೋ ಇಲ್ಲೋ ಅಂತ ಹುಳುಹುಳು ಹುಳ್ಳಾಡಿಸಿ ನೋಡ್ತಾರು. ಶೋಷಿತ ಬಂಧುಗಳ ಕಣ್ಣೀರ ಕಾರಂಜಿ ವರಸೂ ಇವರೀಗೆ... ಮ್ಯಾಲೆ ಕಾರ ಬೇಕು... ಲೇಟೆಸ್ಟ ಮಾಡೆಲ್ ಕಾರ ಬೇಕು... ಪೊಜಿಸೆನ್ ಬೇಕು... ಕಾರ ನಡಸಾಕ ಪುಗಸೆಟ್ಲೆ ಆಳಬೇಕು... ಆ ಕಾರೀಗೆ ಯಾರದೋ ಪುಗಸೆಟ್ಲೆ ಪೆಟ್ರೋಲ ಹಾಕಸಬೇಕು... ಬಂಗಲೆ ಬೇಕು. ಈ ಬೋಗಸ್ ಮಂದಿ ಏನ ಉಂತಾರು. ಏನಿಲ್ಲಾ ನಿಮಗ ಗೊತ್ತ ಐತಿ ?... ಯಾಕಂದ್ರ ನೀವೂ ಉಂಡೀರಿ... ಪಸಂದಾಗಿ ಉಂಡೀರಿ... ಹೌದಿಲ್ರಿ ? ಖರೇ ಹೇಳ್ರಿ ?''

ನಾನು ನಿದ್ದೆಯಲ್ಲೇ ತೂಕಡಿಸುತ್ತ ಹೇಳಿದೆ –

''ಹೌದು... ಹೌದು...''

ಯಾವುದಕ್ಕೆ ಹೌದು ಅಂದೆನೋ ನನಗೇ ತಿಳಿಯಲಿಲ್ಲ. ಆ ಖಗ್ರಾಸ ಗ್ರಹಣ ನನ್ನನ್ನು ತಳದಿಂದ ತುದಿತನಕ ಕಾದ ಕಡಚಗಿಯಿಂದ ಯಬ್ಬಿ ಹಬ್ಬಿ ಮಾತಾಡಿಸತೊಡಗಿದ –



ಇಲೆಕ್ಷನ್‌ಗೊಂದು ಹೊಸ ಅವತಾರ
ತಾಳುವ ನಿನ್ನ ಬದುಕು ನನ್ನ ದಶಾವ-
-ತಾರ ಏನೂ ಅಲ್ಲ... ಬಿಡಯ್ಯ!

''ಸರ್... ನಿಮಗ ಒಂದ ಪ್ರಶ್ನೆ ಕೇಳ್ತೇನಿ... ಯಾಕಂದ್ರ ಈ ಪ್ರಶ್ನೆ ನಿಮಗ ಕೇಳ್ದs ನಾ ಇನ್ಯಾರಿಗೆ ಕೇಳಬೇಕ್ರಿ ? ಈ ಟೀಚರ್ ಮಂದಿ... ಅಂದ್ರ ಶಿಕ್ಷಕ ಜನಾಂಗಾ... ಪಗಾರ ಪಗಾರ ಪಗಾರ ಅಂತ ಸ್ಟ್ರೈಕ ಮಾಡಿ ಹೆಣಾ ಹೊರಲಾರದಷ್ಟು ದುಡ್ಡು ಮಾಡಿಕೊಂಡಾರು. ಆದ್ರ... ನನ್ನ ಜೀವಮಾನದಾಗ ಒಂದ ದೃಶ್ಯಾ ಮಾತ್ರ ನಾ ಇವತ್ತಿಗೂ ಕಂಡಿಲ್ರಿ... ಇವತ್ತಿಗೂ ಕಂಡಿಲ್ಲಾ...''

''ಏನ ಕಂಡಿಲ್ಲಾ ?''

''ಕೇಳ್ರಿ... ಬೇಕಾದ್ರ ನೀವs ಹೋಗಿ ನೋಡ್ರಿ... ಈ ಟೀಚರ ಮಂದ್ಯಾಗ ಒಬ್ಬ ಮಾಸ್ತರ ಸೈತ ಇವತ್ತಿಗೂ ಒಬ್ಬ ಬಡವನಿಗೂ ಕೈಯೆತ್ತಿ ನಾಲ್ಕಾಣೆ ಕೊಟ್ಟದ್ದು ನಾ ಕಂಡಿಲ್ರಿ. ಇವ್ರು ಸರಕಾರದ ರೊಕ್ಕಾ ಸುಲಿಗೀ ಮಾಡವ್ರು; ದಾನಾ ಮಾಡೋರು ಅಲ್ಲಾ. ಯಾರಿಗಾದ್ರೂ ಇವ್ರು ದಾನಾ ಕೊಟ್ರೂ ಇನ್ನಟ ಜಕ್ಕೋಣಾಕs ಕೊಡತಾರು. ಸರ್... ಸರ್...''

''ಏನಪಾ ?''

''ಬೀಡಿ ಅಂಗಡಿ... ಓಸಿ ಅಂಗಡಿ.. ಸೆರೇದಂಗಡಿ... ಇಸ್ಪೇಟ ಅಡ್ಡೆ... ಹೆಂಗ್ಸರ ಮನಿ... ಅಲ್ಲೆ ಬೇಕಾದ್ರ ಹೋಗಿ ನೋಡ್ರಿ... ಆ ಗುಂಪಿನ್ಯಾಗ ಒಬ್ಬ ಟೀಚರ ಮನಿಸ್ಯಾ ಇದ್ದs ಇರ್ತಾನು... ಬೇಕಾದ್ರ ಹೋಗಿ ಬರ್ರಿ.''

''ಹೂಂನಪಾ... ಹೋಗಿ ಬರ್ತೇನಿ...''

''ಸರ್... ನೀವು ಇಷ್ಟೊಂದ ಸಂಭಾವೀತ್ರು ಆದ್ರ ಉಪಯೋಗಿಲ್ರಿ. ಒಳಗ ಒಂದ ಸ್ವಾರ್ಥಾ ಇಟಗೊಂಡೋರs ಹೀಂಗ ಹೊರಗ ಸಂಭಾವೀತ್ರ ಆಗಿ ಇರ್ತಾರಂತ. ನಾ ಅಂಥಾ ಬುದಿವಂತಾ ಅಲ್ಲಾ. ಆದ್ರ ತಿಳದದ್ದ ತಿಳದಂಗ ಹೇಳಾಕ ನಾ ಹಿಂದs ಮುಂದs ನೋಡಾವಾ ಅಲ್ಲಾ. ಆದ್ರೂ... ನೀವು ನನಗ ಹಿಂದ ಯಾವಾಗೋ ಒಮ್ಮೆ ನಾಕ ಅಕ್ಷರಾ ಕಲಿಸೀರೆಂದ ಮ್ಯಾಲೆ ಕೇಳ್ತೇನಿ...ಈ ಮಾಸ್ತರಗೋಳು ಅಂದ್ರ ಹ್ಯಾಂಗ ಇರಬೇಕು ಗೊತ್ತ್ಯಾ ನಿಮಗೆ ?''

''ಹ್ಯಾಂಗಿರಬೇಕಪಾ ?''

''ಕೇಳ್ರಿ... ಆ ಕುಂಬಾರ ಮಾಸ್ತರ ಇದ್ದಂಗಿರಬೇಕು.''

''ಯಾರಪಾ ಅವಾ ಕುಂಬಾರ ಮಾಸ್ತಾರಾ ?''

''ಸರ್... ಬ್ರಿಟೀಷರ ಕಾಲಾ... ಇನ್ನೂ ಸ್ವಾತಂತ್ರ್ಯಾ ಸಿಕ್ಕಿದ್ದಿಲ್ಲಾ. ಆವಾಗ ಈ ಊರಾಗ ಶಂಕ್ರಮ್ಮನ ಗುಡಿ ಪೌಳ್ಯಾಗ ಕುಂಬಾರ ಮಾಸ್ತಾರಾ ಸಾಲೀ ಹಾಕಿದ್ದಾ. ಅವಗ ಪಗಾರ-ಗಿಗಾರ ಇದ್ದಿಲ್ಲಾ. ಕಲಿಸೀದ್ರ ಕೂಳು... ಕಲಿಸದಿದ್ರ ಹೋಳು. ಅವನ ಕೈಯಾಗ ಕಲಿಯೂ ಹುಡುಗೂರು... ಹುಣ್ಣಿವೀಗೆ ಒಂದ ಸಲಾ... ಅಮಾಸೀಗೆ ಒಂದ ಸಲಾ... ಒಂದ ಬಗಸಿ ಜ್ವಾಳಾ... ಒಂದು ರಂಗೀನ ದುಡ್ಡು... ಅಂದ್ರ ತಾಂಬ್ರದ್ದ ಬಿಲ್ಲಿ... ಅವನ ಮುಂದ ಸುರಿವಿ ಬರ್ತಿದ್ರು. ಅದು ಅವನ ಪಗಾರಾ... ಆತು... ಬ್ರಿಟೀಸ್ರು ಅವಗ ವರ್ಷಕ್ಕ ಐವತ್ತ ರೂಪಾಯಿ ಗ್ರಾಂಟ ಕೊಡ್ತಿದ್ರು. ಆ ಕುಂಬಾರ ಮಾಸ್ತರು ಕಲಿಸಿದಷ್ಟು ಈಗ ಯಾ ಮಾಸ್ತರೂ ಕಲಸಂಗಿಲ್ಲಾ. ಖರೇವಂದ್ರ ...ಸರ್... ಒಂದ ಮಾತು ಬ್ಹಾಳಾ ಬ್ಹಾಳಾ ತಪ್ಪಾತು...''

''ಏನ ತಪ್ಪಾತಪಾ ?''

''ನಮಗ ಸ್ವಾತಂತ್ರ್ಯಾ ಸಿಕ್ಕು ಬ್ಹಾಳಾ ಬ್ಹಾಳಾ ತಪ್ಪಾತು. ಬ್ರಿಟೀಸ್ರು ಇನ್ನೂ ನಮ್ಮನ್ನ... ಬೂಟಗಾಲೀಲೆ ವದೀತಾ ಇದ್ರ ನಾವು ಚೆಚ್ಗ ಇರ್ತಿದ್ವಿ. ಎಲ್ಲಾ ಠಾಕ-ಠೀಕ ಇರ್ತಿತ್ತು. ಯಾವಾಗ ಬ್ರಿಟೀಸ್ರು ನಮ್ಮನ್ನ ಬಿಟ್ಹೋದ್ರೋ ಅವತ್ತ ನಮ್ಮ ದೇಶದ್ದ ಪುಣ್ಯಾ ಹೋತು...''

''ಏನು... ಇನ್ನೂ ನೀನು ಗುಲಾಮಗಿರಿಯನ್ನೇ ಅಪೇಕ್ಷಿಸುತ್ತೀಯಾ ?''

''ಸರ್... ಕೇಳ್ರಿ... ನಾವು ಗುಲಾಮಗಿರೀಗೇ ಲಾಯಕ್ಕು. ನಮಗ ಮ್ಯಾಲೆ ಒದೆವ್ರು ಬೇಕು. ತುಳೇವ್ರು ಬೇಕು. ಅಂದ್ರ ನಾವ ಚಂದ ಇರ್ತೇವಿ. ನೋಡ್ರಿ... ಈ ಸ್ವಾತಂತ್ರ್ಯಾ ಸಿಕ್ಕು ಏನ ಆಗಬಾರದ್ದೆಲ್ಲಾ ಪಂಚೇತಿ ಆತು. ತಳದಿಂದ ಹಿಡಕೊಂಡ ತುದೀತಂಕಾ ಎಲ್ಲಾ ಹೆಗ್ಗಣಗಳು. ಈ ಸರಕಾರಿ ನೌಕರದಾರ್ರು ಅಂದ್ರ... ಕೇಳ್ರಿ... ನಮ್ಮ ದೇಶದ

ಉತ್ಪನ್ನದ ಮೇಜರ ಪರ್ಸೆಂಟ ಇವರ ಪಗಾರಕ್ಕ... ಇವರ ಕಾರೋಬಾರಕ್ಕ ಖರ್ಚಾಗಿ ಹೋಗತೈತಿ. ಇನ್ನ ಉಳದದ್ದ ಮೈನರ್ ಪರ್ಸೆಂಟಿನ್ಯಾಗ ಈ ದೇಶದ್ದ ಎಲ್ಲಾ ಎಲ್ಲಾ ಉದ್ದಾರಾ ಆಗಬೇಕು. ಆ ಚೂರಚಾರ ಮೈನರ್ದ್ದಾಗ ಸೈತ ಮೈಯುಂಡ ಕಾಂಟ್ರ್ಯಾಕ್ಟದಾರ್ರು ರಾಜಕಾರಣಿಗೋಳು ಎಷ್ಟು ಬೇಕು ಲಿಸ್ಟು ಇಷ್ಟ ಬಂದಂಗ ಹರಕೋತಾರು. ಮುಂದ ಈ ದೇಶದ ಗತಿ ಏನ್ರೀ ಸsರ್ ?''

''ಅಲ್ಲಪಾ... ಈ ಬಸ್ಸಿನ್ಯಾಗ ನನ್ನ ನಿದ್ದೀ ಗತಿ ಏನು ?'' – ಎಂದು ಅವನಿಗೆ ಸಿಟ್ಟಿನಿಂದ ಕೇಳಬೇಕೆಂದು ಮಾಡಿದೆ. ಪುಣ್ಯಕ್ಕೆ ಕೇಳಲಿಲ್ಲ, ಒಳಗೊಳಗೇ ಹಲ್ಲು ಕಡಿದೆ. ಆತ ತನ್ನ ಗರುಡ ಪುರಾಣ ಬಿಸಿಲ ಮಠದಲ್ಲಿ ಬಿಚ್ಚತೊಡಗಿದ.

''ಕೇಳ್ರಿ ಸsರ್...''

''ಹೇಳು...ಕೇಳಾಕs ನಾ ಕುಂತೇನಿ...''

''ಸsರ್... ಹತ್ತೀ ಹೊಲದಾಗ... ಮುದಿಕ್ಯಾರು... ಮತ್ತ ಹರೇದ ಹುಡಿಗ್ಯಾರು... ಹತ್ತೀ ಬಿಡಸೂದು ನೀವು ನೋಡೀರೇನ್ರಿ ?''

''ಹೂಂ... ನೋಡಿದಂಗ ಐತಿ...''

''ಅಂದ್ರ... ಈ ಮಾತೀನ ಮ್ಯಾಲೆ ನೀವು ನೋಡಿಲ್ಲಾ ಅಂದಂಗಾತು. ಸsರ್... ಆ ಕೆಂಡದಂತಾ ಬಿಸಿಲು... ಉರೀ ಉರೀ ಬಿಸಿಲು... ಅಂಥಾದ್ರಾಗ ವಂದ ದಂಡೀಲಿಂದ ಇನ್ನೊಂದ ದಂಡೀತನಾ... ಬಗ್ಗೀದ ಟೊಂಕಾ ಬಗ್ಗೀದಂಗ... ಹತ್ತೀ ತೊಳಿ ಬಿಡಸ್ಬೇಕು. ಮ್ಯಾಲೆ ಬಿಸಿಲ ಬೆಂಕಿ. ಕೆಳಗ ನೆಲಾ ಬೆಂಕಿ. ಹೊಟ್ಯಾಗ ಕೂಳಿಲ್ಲಾ ಕಾಳಿಲ್ಲಾ. ಮದ್ಯಾಣಕ ಅವರು ಉಣ್ಣೊ ಊಟಾ ನೀವು ಒಮ್ಮೆ ಉಂಡ ನೋಡಬೇಕು. ಕಟಗ ರೊಟ್ಟಿ. ಅದರಾಗ ವಂದಿಸ್ಟು ಗುಗ್ಗರಿ. ಚೂರ ಮೆಣಸಿಂಡಿ. ಮೆಣಸಿಂಡ್ಯಾಗ ನೀರು. ಮ್ಯಾಲೆ ವಂದ ಉಳ್ಳಾಗಡ್ಡಿ. ಹೊಲದಾಗೀನ ಹಕ್ಕರಕಿ ತಪ್ಲಾ. ದನಾಸೈತ ತಿನ್ನಾಕ ಹಿಂದಮುಂದ ನೋಡ್ತಾವು. ಅದನ್ನ ತಿಂತಾವು. ಇವರ ಆರ್ಥಿಕ ಸ್ಥಿತಿಗತಿಯೊಳಗ ಒಂದ ಜಂಪರ ಪೀಸ ಹೆಚ್ಚಿಗಿ ಖರೀದಿ ಮಾಡೂವಸ್ಟು ಸಗತಿ ಬಂದಿಲ್ಲಾ. ಆದ್ರ ಈ ಕನ್ನಡ ಸಾಲಿ... ಇಂಗ್ಲೀಷ ಸಾಲಿ... ಕಾಲೇಜ ಕಲಸೂವವ್ರು... ಇವರಿಗೆ ವಂದಕಾಲಕ್ಕ ಏನ ಸಂಬ್ಳಿತ್ತು... ಇವತ್ತೇನ ಸಂಬ್ಳ ಐತಿ ನಿಮಗ ಗೊತ್ತು. ಇವರ ಪಗಾರ ಐವತ್ತ ಪಟ್ಟ.. ನೂರ ಪಟ್ಟ ಏರ್ಯಾವು. ಇನ್ನೂ ಇವ್ರೀಗೆ ಪಗಾರ ಸಾಲಂಗಿಲ್ಲಾ. ಯಾಕಂದ್ರ ಮನ್ಯಾಗ ಇವ್ರೀಗೆ ಏನೆಲ್ಲಾ ಬೇಕsಬೇಕು. ಡೈನಿಂಗ ಟೇಬಲ್ಲ ಬೇಕು... ಕಲರ ಟೀವಿ ಬೇಕು... ಫೋನ ಬೇಕು... ಸ್ಕೂಟರ ಬೇಕು... ಕಾರ ಬೇಕು... ಕಸಾ ಹೊಡಿಯೂ ಮಶೀನ್ ಬೇಕು. ಹೋಗ್ಲಿ... ಈ ಶಿಕ್ಷಕ ಮಂದಿ ಇಷ್ಟೆಲ್ಲಾ ಪಗಾರ ತೊಗೊಂಡು ತಮ್ಮ ಮನೀ ಆಳಗೋಳಿಗೆ ಏನ ಪಗಾರಾ ಕೊಡ್ತಾರು ಕೇಳಿ ಬರ್ರಿ. ತಂಗ್ಯಾಬಂಗ್ಯಾ ಹಾಕಿ... ಕಮ್ಮೀ ಕೂಲ್ಯಾಗ ಕಿವೀ ಹಿಡದ ಕತ್ತೀ ದುಡತಾ ದುಡಿಸ್ಕೊಂತಾರು. ಚಿಕ್ಕಪುಟ್ಟ ಪುರ್ಲಿ ಮಕ್ಕಳನ್ನ... ಜರ್ಲಿ ಹುಡಿಗ್ಯಾರನ್ನ.. ಹೊಗಬಿದ್ದ ಕೊಡ್ದಾ ಎಳಸ್ತಾರು. ಹೋಗ್ಲಿ... ಇವ್ರು ಕಲಸೂದಾದ್ರೂ ಏನ ಕಲಸ್ತಾರು ನೋಡಿ ಬರ್ರಿ. ಹಿಂದಿನ ಕಾಲಕ್ಕ ಕಲಸೂ ಮಗ್ಗೀ-ಬಳ್ಳಿ-ಗ್ರಾಮರು-ಸ್ಪೆಲಿಂಗು ಇವು ಈಗ ಈ ಮಾಸ್ತರಿಗೇ ಬರಂಗಿಲ್ಲಾ ಸsರ್... ನೀವು ಒಂದ ಮಾತ ಕೇಳೀರೊ ಇಲ್ಲೊ ?''

''ಏನಪಾ ?''

''ಆ ಕರೇ ಕುಂಟ ಮಾಸ್ತರ ನೋಡೀರೇನ್ರಿ ?''

''ನೋಡಿಲ್ಲಪಾ...''

''ಸsರ್... ನಾ ಹೇಳೀದ್ರ ನೀವು ಗಾಬ್ರ್ಯಾಗ್ತೀರಿ. ನಂಬಂಗಿಲ್ಲಾ. ಒಂದಸಲಾ ಏನಾತಂದ್ರ... ಆ ಕರೇ ಕುಂಟ ಮಾಸ್ತರನ ಪಗಾರದಾಗ ಒಂದು ಪೈಸೆ...ಒಂದೇ ಒಂದು ಪೈಸೆ... ಲೆಕ್ಕದಾಗ ತಪ್ಪಿ ಕಮ್ಮೀ ಬಂತಂತೆ. ಅದಕ್ಕ ಆತಾ ತನ್ನ ಪಗಾರದಾಗ ಒಂದ ಪೈಸೆ ಹ್ಯಾಂಗ ಕಮ್ಮೀ ಬಂತೂ ಅಂತ ಬೆಂಗಳೂರ ತಂಕಾ ಹೋಗಿ... ಹೋರಾಡಿ ಹೋರಾಡಿ... ಲೆಕ್ಕಾ ಸರಿಮಾಡಿಕೊಂಡ ಬಂದಾ. ವೀರಾಧಿವೀರಾ. ನೀವು ಬೇಕಾದ್ರ... ಈ ಮಾಸ್ತರು... ಆ ಸರಕಾರಿ ನೋಕರಸ್ತ್ರು.. ಸರಕಾರಿ ಹತ್ತೆಂಟ ಇಲಾಖ್ಯಾಗ ತಮ್ಮ ಗುಬ್ಬಚ್ಚಿ ಗೂಡು ಗಟ್ಯಾಗಿ ಕಟಗೊಂಡೋರು... ಯಾರ್ನ ಬೇಕಾದ್ರೂ ನೋಡ್ರಿ... ಅವರೆಲ್ಲಾ ಒಂದ ನಮೂನಿ ಕರೇ ಕುಂಟ ಮಾಸ್ತರ ಇದ್ದಂಗೆ. ಅವರ ಪಗಾರಾ ಎಂಟಾಣೆ

ಕಮ್ಮೀ ಮಾಡಿ ನೋಡ್ರಿ... ಏನಾಗತ್ತೈತಿ... ಏನಿಲ್ಲಾ? ಮುಗಲ ಹರದ ಬೀಳೂವಂಗ ಹಾರ್‍ಯಾಡತಾರು. ಆಕಾಶಕ್ಕ ಬೆಂಕಿ ಬಿದ್ದಂಗ ಚೀರಾಡತಾರು. ಆದ್ರ ಈ ನೌಕರಶಾಹಿ ಜನಾ... ನಮ್ಮ ದೇಶದಾಗ... ಯಾ ಬಡವರ್‍ನ ಉದ್ಧಾರಾ ಮಾಡ್ಯಾರು... ಯಾ ರೋಗಿಗೋಳ್ನ ಜ್ವಾಪಾನ ಮಾಡ್ಯಾರು... ಯಾ ಮಾನವ ಕಲ್ಯಾಣಾ ಮಾಡ್ಯಾರು ... ಎಲ್ಲೆ ಸಮರ್ಪಣಾ ಭಾವದಿಂದ ಬಿದ್ದವರನ್ನ ಎತ್ತಿಹಿಡಿದಾರು... ಒಂದು ಲೆಕ್ಕಾ ತೆಗೆದು ನೋಡ್ರಿ. ಯಾರರೆ ನಾಲ್ಕಾಣೆ ಮನಸಾ ದಾನ ಮಾಡಿದ್ರ ನಾ ಬೇಕಾದ್ರ ನನ್ನ ರುಂಡಾ ತಗದ ಇಡತೇನ್ರಿ...''

ನಾನು ದುಃಖದಿಂದ ಲೊಚಗುಟ್ಟಿದೆ. ಆತ ಬುಸುಗುಟ್ಟಿದ–

''ಸSರ್... ನಮ್ಮ ಓಣ್ಯಾಗ ಗೊರವಂಕ ಮಾಸ್ತರ ಅದಾನ್ರಿ. ಅವನ ಹೇಂತಿ ಆಕೀನೂ ಮಾಸ್ತರತಿ... ಗೊಡ್ಡೆಮ್ಮಿ. ಬೈಬ್ಯಾಡ್ರಿ... ಇವು ನಮ್ಮ ಓಣ್ಯಾಗ ಕೂಲಿ ಹೆಂಗ್ಸೂರು ಆಕೀಗೆ ಇಟ್ಟ ಹೆಸ್ರು. ಆ ಮಾಸ್ತರಾ-ಮಾಸ್ತರತಿ ದೂರ ಹಳ್ಯಾಗ... ಕುಗ್ರಾಮ ಹಳ್ಯಾಗ ಹೋಗಿ ಕಲಿಸಿ ಬರ್‍ತಾರು. ಹೋಗಾಕ ಯಾಡ್ಡ ತಾಸು ಬಸ್ಸು... ಬರಾಕ ಯಾಡ್ಡ ತಾಸು ಬಸ್ಸು. ದೂರಾ ಅಂದ್ರ ದೂರಾ. ಆದ್ರ ಇವ್ರು ಯಾವತ್ತೂ ಇಲ್ಲೇ ಮನ್ಯಾಗSಕಾಣ್ತಾರು. ಇವ್ರು ಹೋಕ್ಕಾರ ಹೆಂಗ... ಕಲಸ್ತಾರ ಹೆಂಗ... ಹೊಳ್ಳಿ ಬರ್‍ತಾರ ಹೆಂಗ... ನೀವS ಹೇಳ್ರಿ... ಸSರ್... ನಿದ್ದಿ ಬಂತೇನ್ರಿ ನಿಮಗ ?''

''ಹೂಂ... ಇಲ್ಲಾ... ಬಂದಿಲ್ಲಾ... ಹೇಳಪಾ...''

''ಸSರ್... ನನ್ನ ಲಂಗೋಟಿ ದೋಸ್ತಾ... ಮಣಮುಕ್ಯಾ... ಪಕ್ಯಾ... ಅವಾ ದೊಡ್ಡ ಇಂಗ್ಲೀಸ ಸಾಲಿ ಕಲಸ್ತಾನು. ಅವಾ ಎಂಥಾ ಪುಣ್ಯಾತ್ಮಾ ಅದಾನಂದ್ರ... ಟ್ರ್ಯಾಕ್ಟರ ಇಟ್ಟಾನು... ಟ್ರಕ್ಕ ಇಟ್ಟಾನು... ಹೆಂಡದಂಗಡಿ ಇಟ್ಟಾನು... ಹೊಲಾ ಮಾಡ್ತಾನು... ತ್ವಾಟಾ ಮಾಡ್ತಾನು... ಬಡ್ಡೀ ವ್ಯವಹಾರಾ ಬ್ಯಾರೇ ಮಾಡ್ತಾನು... ಮ್ಯಾಲೆ ದಿನಾ ಬೆಳಗಾದ್ರ ಮುಂಬೈ ಶೇರ ಬಿಝಿನೆಸ್ ಮಾಡ್ತಾನು. ಅವನ ಕೈಯಾಗ ಯಾವತ್ತೂ ಬಯಲ್ಕಡಿ ಫೋನು... ಮೊಬೈಲ್ ಅಂತಾರಲ್ರಿ... ಅದು ಇರತೈತಿ. ಈ ಪ್ರೊಫೆಸರಾ ಇಷ್ಟೆಲ್ಲಾ ಕೆಲಸಾ ಮಾಡಿದ ಮ್ಯಾಲೆ ಸಾಲ್ಯಾಗ ಏನ ಕಲಸ್ತಾನು... ಏನಿಲ್ಲಾ... ನೀವS ಲೆಕ್ಕಾ ಹಾಕ್ರಿ. ಇದು ನಮ್ಮ ಶಿಕ್ಷಣದ ಸಿಸ್ಟಂ... ನಮ್ಮ ದೇಶದ ಪವಿತ್ರ ಸರಸ್ವತಿ ದೇವಾಲಯದ ಸಿಸ್ಟಂ. ಏನಂತೀರಿ ?''

ನಾನು ಕರುಣಾ ಉಕ್ಕಿ... ಚುಚ್... ಚುಚ್... ಚುಚ್... ಹಲ್ಲಿಯಂತೆ ಚುಚುಗುಟ್ಟಿದೆ ! ಅವನ ಆ ಕ್ರೂರ ನಕ್ಸಲೈಟ ತರಹದ ಮುಖದಲ್ಲಿ ಯಾವ ಕಾರುಣ್ಯವೂ ಕಾಣಲಿಲ್ಲ. ಅವನ ಕಣ್ಣುಗಳು ಬರಗಾಲದ ಬೆಕ್ಕಿನಂತೆ ತೋರುತ್ತಿದ್ದವು. ನಂಬರ್ ಒನ್ ದರೋಡೆಕಾರನ ಸ್ಟೈಲ್ ಇದ್ದ ಅವನ ಮುಖದಲ್ಲಿ ನನಗೆ ಈ ದೇಶದ ಪ್ರಚಂಡ ಕ್ರಾಂತಿಕಾರಿಯೊಬ್ಬನ ಕೊಳೆತ ಹೆಣ ಕಾಣುತ್ತಿತ್ತು. ಆತ ತನ್ನ ಮಾತಿಗೆ ಇನ್ನೂ ಗಂಭೀರ ಚಿಂತನೆಯ ಚಿತೆ ಹಚ್ಚಿ... ಮೇಲೆ ಉರಿ ಹೊಚ್ಚಿ... ಮತ್ತೆ ವದರಿದ–

''ಸSರ್... ನಮ್ಮ ದೇಶಾ ಇವತ್ತ ದೇಶ ಆಗಿ ಉಳದಿಲ್ಲಾ... ಇದು ನೌಕರಶಾಹಿ ಸಾಮ್ರಾಜ್ಯ. ಈ ದೇಶಾನ್ನ ಇವತ್ತ ರಾಜಕಾರಣಿಗಳು ಆಳಾಕತ್ತಿಲ್ಲಾ... ಸ್ವಾಮಿಗೋಳು ಆಳಾಕತ್ತಿಲ್ಲಾ... ಶ್ರೀಮಂತ್ರು ಆಳಾಕತ್ತಿಲ್ಲಾ... ಈ ದೇಶಾ ಇವತ್ತ ಈ ನೌಕರಶಾಹಿ ಜನಾ ಆಳಾಕತ್ತಾರು. ಇದಕ್ಕ ಏನ ಐತ್ರಿ ಉತ್ರಾ ನಿಮ್ಮ ಹತ್ರ ? ಹೇಳ್ತೀರಾ ?''

''ಇಲ್ಲಪಾ... ಇಲ್ಲಾ...''

''ಸSರ್... ನಮ್ಮ ಓಣ್ಯಾಗ ಒಬ್ಬಾಕಿ ಮೇಡಂ ಅದಾಳು... ಕುಂಬಳಕಾಯಿ ಮೇಡಾಂ. ಬ್ಹಾಳ ಚಂದದಾಳ್ರಿ. ಆಕೀಗೆ ಬಿಸಿಲು ಆಗಂಗಿಲ್ಲಾ. ತಂಪು ಆಗಂಗಿಲ್ಲಾ. ಮಳಿ ಆಗಂಗಿಲ್ಲಾ. ಚಳಿ ಆಗಂಗಿಲ್ಲಾ. ಧೂಳಾ ಆಗಂಗಿಲ್ಲಾ. ನಾಜೂಕ ನಾರಿ. ಹತ್ತ ಹೆಜ್ಜಿ... ಕೇವಲ ಹತ್ತS ಹತ್ತು ಹೆಜ್ಜಿ... ನಡದ ಹೋಗಬೇಕಾದ್ರ ತನ್ನ ಬಣ್ಣದ ಚತ್ರೀ ಬಿಚ್ಚಿ ಗಿಣಿ ಹೋದಂಗ ಹೋಗ್ತಾಳ್ರಿ. ಆಕಿ ಠೇವೇನು... ಠೇಪೇನು... ನಿಂತ ನೋಡಬೇಕು. ಆದ್ರ ಆಕಿ ಕಲಸೂದು ಮಾತ್ರ ಪುಂಗಿ ! ಹೋಗಿ ಹುಡುಗೂರ್‍ನ ಕೇಳ್ರಿ. ಆಕೀ ಹೆಸರಮ್ಯಾಲೆ ಹುಡುಗೂರು ಲಬೋ ಲಬೋ ಹೋಕೊಂತಾವು ! ಸSರ್.. ಹೌದಂದ್ರ ಹೌದನ್ರಿ... ಅಲ್ಲಂದ್ರ ಅಲ್ಲನ್ರಿ... ಇದು ದುಡಿಯೋರ ದೇಶಲ್ಲಾ... ನೌಕರಶಾಹಿ ದೇಶಾ. ಇವತ್ತ ಈ ದೇಶದ್ದ ಅಧಿಕಾರಾ ಪ್ರೆಸಿಡೆಂಟ ಕೈಯಾಗಿಲ್ಲಾ... ಈ ದೇಶದ್ದ ಅಧಿಕಾರಾ ಮಿಲ್ಟ್ರಿ ಕೈಯಾಗಿಲ್ಲಾ... ಯಾರ ಕೈಯಾಗೂ ಇಲ್ಲಾ... ಎಲ್ಲಾ ಎಲ್ಲಾ ನೌಕರಶಾಹಿ ಕೈಯಾಗ ಐತಿ. ಇವರ ಅಸ್ತ್ರಾ-ಶಸ್ತ್ರಾ ಅಂದ್ರ... ಸ್ಟ್ರೈಕು... ಸ್ಟ್ರೈಕು... ಸ್ಟ್ರೈಕು ! ಮಾತೆತ್ತೀದ್ರ ಸ್ಟ್ರೈಕು. ಬ್ಯಾಂಕಿನೋರೂ ಸ್ಟ್ರೈಕು. ವಿಮಾನದೋರೂ ಸ್ಟ್ರೈಕು. ವಿಮಾ ಕಂಪನಿಯೋರೂ ಸ್ಟ್ರೈಕು. ಡಾಕ್ಟರೂ ಸ್ಟ್ರೈಕು. ಯಾ ಡಿಪಾರ್ಟಮೆಂಟಿನ್ಯಾಗ ನೋಡೀದ್ರೂ ಸ್ಟ್ರೈಕು... ಹರತಾಳಾ... ಸತ್ಯಾಗ್ರಹಾ... ಉಪವಾಸಾ... ವರ್ಕ್‌ಡೌನ ಸ್ಟ್ರೈಕು... ಪೆನ್‌ಡೌನ ಸ್ಟ್ರೈಕು... ಹಂಗರ್ ಸ್ಟ್ರೈಕು... ಯಾಕೆಂದರೆ ಇವರ ಹಂಗರ್ ಸ್ಟ್ರೈಕ್ ರಿಪೋರ್ಟ ಮಾಡಾಕ ಪೇಪರ ಅದಾವು... ರೇಡಿಯೊ ಅದಾವು... ಟಿವಿ ಅದಾವು... ಆದ್ರ ನಮ್ಮ ಲಕ್ಷಾಂತರ ಹಳ್ಳಿಗಳ ಕೋಟ್ಯಾಂತರ ಗಂಡ್ಸು-ಹೆಂಗ್ಸು-ಹುಡ್ರೂ-ಹುಡ್ಗೀ... ದಿನ್ನಾ ತಮ್ಮ ತಮ್ಮ ಮನ್ಯಾಗ ಕೂಳಿಲ್ಲದ ಕಾಳಿಲ್ಲದ ಹೊಟ್ಟೀಮ್ಯಾಲ ಖಾಲಿಡಬರಿ ಡಬ್ಬ ಹಾಕ್ಕೊಂಡು ಮಲಗತಾವು. ಇವರ ಸ್ಟ್ರೈಕು... ನಿರಂತರ ಸ್ಟ್ರೈಕು. ಇವರ ಸ್ಟ್ರೈಕು ರಿಪೋರ್ಟ ಆಗೂದು... ಪೇಪರಿನ್ಯಾಗ ಅಲ್ಲಾ... ಸುಡಗಾಡ ಗಟ್ಟ್ಯಾಗ. ಈ ನೋಕರಶಾಹಿ ಜನಾ ಅಂದ್ರ ಸಣ್ಣ ಹೆಂತಿ ಪಿರೂತಿ ಮಕ್ಳು. ಈ ಬುಡರಶಿಂಗಿ ಬಡಮಕ್ಳಂದ್ರ ಬಿಟ್ಟ ಹೇಂತಿ ಪರದೇಶಿ ಮಕ್ಳು. ಒಬ್ಬರ ಕೈಯಾಗ ಚಾಕಲೇಟು. ಇನ್ನೊಬ್ರ ಕೈಯಾಗ ಚಂಬು. ಇದು ಇವತ್ತಿನ ಈ ನೋಕರಶಾಹಿ ಆಳ್ಕಿ. ದಿನಾ ಬೆಳಗಾದ್ರ ಸರಕಾರಾ ಅಂಜಿಸೂದು. ಧಿಕ್ಕಾರಾ ಕೂಗೂದು. ಶೇಮ್... ಶೇಮ್... ಅಂದು ಶಾವಿಗೀ ಪಾಯ್ಸಾ ಕುಡಿಯೂದು. ಇನ್ನ ಮುಂದ ಹ್ಯಾಂಗ್ರೀ ಸSರ್ ? ಇದೇನು ಪ್ರಜಾಪ್ರಭುತ್ವ ಅಂತೀರೋ... ಅಥವಾ ಪ್ರಜಾರೋಗಾ ಅಂತೀರೋ ?''

''ಹೇಳಪಾ ಹೇಳು... ನೀನS ಹೇಳು... ಏನು ?''

''ನೀವು ನಿದ್ದೀ ಮಾಡ್ರಿ... ನಾ ಬ್ಯಾಡ ಅನ್ನಂಗಿಲ್ಲಾ. ನಿಮ್ಮದು ಸುಖದ ಜೀವಾ. ಪಡದ ಬಂದೀರಿ. ಆದ್ರ ಒಂದ ಮಾತ ದಯವಿಟ್ಟುಕೇಳ್ತೀರಾ ?

''ಏನಪಾ... ಹೇಳು...''

''ಹಿಂದಕ್ಕ... ಆ ಕುಂಬಾರ ಮಾಸ್ತರಿಗೆ ಈ ಊರಿನ ಹುಡುಗೂರು ವಾರಕ್ಕ ಒಂದ ಮುಟಿಗಿ ಜ್ವಾಳಾ... ಒಂದ ರಂಗೀನ ದುಡ್ಡು ಇಟ್ಟ ಬರತಿದ್ರು. ಅದು ಆ ಮಾಸ್ತರ ಪಗಾರಾ. ಇವತ್ತ ಸೈತೇ ಇದS ಸಿಸ್ಟಂ ಬರಬೇಕು. ಈ ನೌಕರಶಾಹಿಗೋಳ ಮ್ಯಾಲೆ ಹೊಸಾ ಆದಿಲ್‌ಶಾಹಿ ಬರಬೇಕು. ಪಗಾರಾ ನಿಲ್ಲಬೇಕು. ನೌಕರ ದಾರ್‍ರೀಗೆ ಅವರವರ ದುಡಿಮೀ ಪ್ರಕಾರ ಗುಣಾತ್ಮಕ ಕೂಲಿ ಜನರೇ ಕೊಡಬೇಕು. ಜನರಿಂದ ಜನರು ಬದುಕಬೇಕು. ಸರಕಾರದಿಂದಲ್ಲಾ. ಆಗ ನೋಡ್ರಿ ಎಲ್ಲಾ ಮಾಸ್ತರೂ... ಪ್ರೊಪೇಸರೂ... ಕಾಂಪೀಟೀಶನ್ ಮ್ಯಾಲೆ ಕಲಸ್ತಾರು. ಸಾಲ್ಯಾಗ ಪೋರ್ಶನ್ ಮುಗಸಲಾರ್ದ ಪುಕ್ಕಟ ಪಗಾರ ಹೊಡಕೊಂಬೂ ಮಾಸ್ತರಗೋಳು ಹೇಳ್ದS ಕೇಳ್ದS ಬಣ್ಣದ್ದ ಹಗ್ಗದ್ಲೆ ಉರಲ ಹಾಕ್ಕೊಂಡ ಸಾಯ್ತಾರು. ಏನಂತೀರಿ ಇದಕ್ಕ...?''

ನಾನು ವಕಾವಕಾ ಬಾಯಿಬಿಟ್ಟೆ! ನಾನೇ ಉರುಲು ಹಾಕಿಕೊಂಡು ಒದ್ದಾಡತೊಡಗಿದೆ. ಅಷ್ಟರಲ್ಲಿ ಊರು ಬಂತು. ನನ್ನ ಸ್ಟಾಪ ಬಂತು. ನಾನು ಅವಸರದಿಂದ ಆ ಕ್ರಾಸಿನಲ್ಲಿ ಇಳಿಯುವಾಗ ಆ ಹಳೇ ಪಿಶಾಚಿ ನನಗೆ ನನ್ನ ಬ್ಯಾಗ ಎತ್ತಿತಂದು ಇಳಿಯಲು ಹೆಲ್ಪ ಮಾಡಿದ. ನನ್ನ ಕ್ರಾಸಿನ ಸ್ಟಾಪಿಗೆ ಇಳಿದೆ. ಅವನಿಗೆ ಥ್ಯಾಂಕ್ಸ ಕೂಡಾ ನಾ ಹೇಳಲಿಲ್ಲ. ಇಳಿದುಬಿಟ್ಟೆ. ಬಸ್ಸು ಭರಗುಟ್ಟಿ ಹೋಗಿಬಿಟ್ಟಿತು.

ಈ ಕ್ರಾಸಿನಲ್ಲಿ ಪ್ರತಿಸಲ ನಾನು ಇಳಿದ ತಕ್ಷಣವೇ ಒಂದು ಭಾರೀ ಗಾತ್ರದ ಹಳೇ ಬೇವಿನಮರ ನನ್ನನ್ನು ಸ್ವಾಗತಿಸುತ್ತಿತ್ತು. ಆದರೆ ಆ ನನ್ನ ಗೆಳೆಯ... ಸುಂದರ ಮೈಕಟ್ಟಿನ ಬೇವಿನಮರ... ಇಂದು ಇರಲಿಲ್ಲ ! ಕುತೂಹಲದಿಂದ ಕಣ್ಣಾಡಿಸಿ ನೋಡಿದೆ...

ಅಯ್ಯೋ... ಆ ದೊಡ್ಡ ಗಿಡವನ್ನು ನೆಲಮಟ್ಟದವರೆಗೆ ಸಂಪೂರ್ಣ ಕಡಿದುಹಾಕಿದ್ದಾರೆ. ಆ ಮರ ಹೇಳಹೆಸರಿಲ್ಲದಂತೆ ನಾಪತ್ತೆ ಮಾಡಿದ್ದಾರೆ. ಆ ಮರದ ಬೇರು... ಬಡ್ಡೆ... ಆ ಭಯಂಕರ ಬಿಸಿಲಿಗೆ ಬಾಯಿಬಿಟ್ಟು ನಿಂತಿವೆ. ಕೊಡಲಿಯ ನೂರಾರು ಕಚ್ಚುಗಳು ಆ ಹಸಿರು ಮರದ ಬೊಡ್ಡೆ- ಬೇರುಗಳ ಟೊಂಕ ಕತ್ತರಿಸಿ ಚೆಲ್ಲಿವೆ.

ಆ ಹಸಿರು... ಆ ಬೇವಿನ ಹೂವು... ಆ ತೊಂಗಲು ತುಂಬಿದ ಕಾಯಿಗಳು... ಆ ಮರ ತುಂಬಿದ ಗಿಳಿಗಳು... ಗೊರವಂಕಗಳು... ಇಂದು ಹೇಳ ಹೆಸರಿಲ್ಲದಂತೆ ನಾಶವಾಗಿವೆ.

ಆ ಮರಕ್ಕೆ... ಓ ನನ್ನ ಪ್ರೀತಿಯ ಮರವೇ... ಎನ್ನುವ ಬದಲು ನಾನು ನನ್ನ ಮನಸಿನಲ್ಲಿ... ಅಯ್ಯೋ ನನ್ನ ದೇಶವೇ... ಎಂದು ಕ್ಷಣಕಾಲ ಮರುಗಿದೆ !

ಗಗನದಲ್ಲಿ ನಿಗಿನಿಗಿ ಸೂರ್ಯ ಉರಿಯುತ್ತಿದ್ದ... ಎಲ್ಲೋ ದೂರದಲ್ಲಿ ಚಂದ್ರ ನಗುವ ಮೋಡದ ಮರೆಯಲ್ಲಿ ಹೊಂಚು ಹಾಕಿದ್ದ...

**ಪ್ರೊ॥ ಜಿ. ಎಚ್. ಹನ್ನೆರಡುಮಠ**
ಯೋಗಭವನ: ಇಂದ್ರಪ್ರಸ್ಥ, ನ್ಯಾಶನಲ್ ಪಾರ್ಕ್ ರೋಡ್
ಗೊಟ್ಟಿಗೆರೆ ಅಂಚೆ, ಬೆಂಗಳೂರು - ೫೬೦ ೦೮೩



# ಮೊಯಿಲಿ ಮಹಾಕಾವ್ಯ ಆಪ್ತ ಚಿಂತನ

ವಾಲ್ಮೀಕಿಯ ಕಲ್ಪನಾದೃಷ್ಟಿಯೇ ಅದ್ಭುತ. ಸಾಕೇತಕ್ಕೆ ಅಯೋಧ್ಯೆ ಎಂಬ ಹೆಸರು ಸಂಕಲ್ಪಿಸಿಕೊಂಡು ರಾಮಾಯಣ ರಚಿಸಿಕೊಂಡರೆ ಜನಮಾನಸದಲ್ಲಿ ಅಯೋಧ್ಯೆಯೇ ಸಾಕೇತವಾಯಿತು! ಸಾಕೇತ ಹೆಸರು ಕುದುರಿ ಅಯೋಧ್ಯೆಯೇ ಇಂದಿಗೂ ಪ್ರಚಲಿತವಾಗಿದೆ.

ಆತ ಕಂಡು ಪ್ರೇರಣೆಗೊಂಡ ಕ್ರೌಂಚಪಕ್ಷಿಯ ಚಡಪಡಿಕೆಯೊಂದೇ ಮಹಾ ಕಾರಣವಾಯಿತು. ಈ ಕಾರಣದಿಂದಲೇ 'ರಾಮಾಯಣ' ಮಹಾಕಾವ್ಯ ಹುಟ್ಟಿಕೊಂಡಿತೆಂದು ಪುರಾಣ. ಇತಿಹಾಸದಿಂದಲೇ ಪ್ರತೀತಿ. ಅದುವೇ ರಾಮಾಯಣ ಕೃತಿಯ ಮೂಲ ಸೃಜನಸ್ಮೃತಿ. ಇಂದಿಗೂ ರಾಮಾಯಣದ ಮಾತು ಈ ಸ್ಮೃತಿಯಿಂದಲೇ ಸುರುವಾಗುತ್ತಿದೆ. ಈ ಕೃತಿಯ ಹಿಂದೆ ಡಾ|| ಕೆ. ಅನಂತರಾಮು ಅವರು ಈ ಕೃತಿಯ ಅವಲೋಕನಮಾಡುತ್ತ ಇದುವರೆಗೆ ಭಾರತೀಯ ಹಾಗೂ ವಿದೇಶಿಯ ಭಾಷೆಗಳಲ್ಲಿ ರಾಮಾಯಣ ಬೆಳೆದು ಬಂದ ಬಗೆಯನ್ನು ಅರ್ಥಪೂರ್ಣವಾಗಿ ರಸವತ್ತಾಗಿ ಬರೆದಿದ್ದಾರೆ. ಮತ್ತು ವಿಶೇಷವಾಗಿ ಕವಿಯ ವ್ಯಕ್ತಿತ್ವದ ಕುರಿತುಕೂಡ ಪರಮಗುಣಭಾವಗಳಿಂದ ಬರೆದಿದ್ದಾರೆ. ಹಿರಿಯ ಲೇಖಕರಾದ ಎನ್. ಕೆ. ಕುಲಕರ್ಣಿ ಅವರು ಕೂಡ ಈ ಕೃತಿಗೆ ಹೊನ್ನ ಕಲಶವಿಟ್ಟಿದ್ದಾರೆ. ಅಷ್ಟು ಸಾಕು. ಈ ಕೃತಿಯ ಕುರಿತ ಸಾರಸ್ವತ ಧ್ವನಿ ಅದರೊಳಗಡಗಿದೆ.

ಯಾವುದಾದರೂ ಒಂದು ವಿಷಯ ಸ್ಥಿತಿಯ ತುಡಿತ-ಮಿಡಿತಗಳಿಗೆ ಸಿಲುಕಿಕೊಂಡಾಗಲೇ ಬರೆಹಗಾರನು ಪ್ರಸವ ಸೃಜನನಾಗುತ್ತಾನೆ. ಸಂವೇದನೆಗಳ ಶಿಶು ಶಿಷ್ಯನಾಗುತ್ತಾನೆ. ಸ್ತಬ್ಧ ಸ್ಥಿತಿಯನ್ನು ಅನುಭವಿಸುತ್ತಾನೆ.ಹಾಗೆ ನೋಡಿದರೆ ಕನ್ನಡ ಸಾರಸ್ವತ ಸಾಹಿತ್ಯಕ ಸಂವೇದನೆಗಳು ಸ್ತಬ್ಧ ಸ್ಥಿತಿಯಲ್ಲಿಯೇ ಇಂದಿದೆ. ಅಂದರೆ ಇದು ನಿಷ್ಕ್ರಿಯತೆಯ ಲಕ್ಷಣವಲ್ಲ; ಒಂದು ಧ್ಯಾನ ಸ್ಥಿತಿ, ಇರಲಿ.

ಕಾವ್ಯ ಕೃಷಿ ಬುದುಕೆಂದು ತಿಳಿದು ಬದುಕುವುದರಿಂದ ಅಥವಾ ಪರಿವರ್ತನೆ ಪಶ್ಚಾತ್ತಾಪದ ಮೂಲಕ ಕಾವ್ಯ ರಚನಾ ಶಕ್ತಿ ಪಡೆದುಕೊಳ್ಳುವುದರ ಮೂಲಕ ಮಹಾಕಾವ್ಯ ರಚಿಸಲು ಸಾಧ್ಯ. ಅಂಥದು ಜನಮನ ತಟ್ಟಲು ಸಾಧ್ಯ. ಸ್ತ್ರೀ ಗೌರವ, ಸ್ತ್ರೀ ಕಳಕಳಿ, ಸ್ತ್ರೀ ಚಾರಿತ್ರ್ಯದ ಬಗ್ಗೆ ಆತ್ಮಗೌರವ-ವಿಶ್ವಾಸ, ಅಚಲ ನಂಬಿಗೆ ಹೊಂದಿದ ಕವಿ ಮಾತ್ರ ಮಹಾಕಾವ್ಯ ರಚಿಸಬಲ್ಲ. ವ್ಯಭಿಚಾರಿ ಮನೋಭಾವಿ ಕಪಿಯು ಮಹಾಕಾವ್ಯ ರಚನೆಯಲ್ಲಿ ತೊಡಗಿದ್ದಾದರೆ ಅದೊಂದು ಕಲಾಸೃಷ್ಟಿಯೇ ಹೊರತು ವಾಸ್ತವ ಸೃಷ್ಟಿ ಎನಿಸಲಾರದು. ಅದೊಂದು ಭ್ರಮಾತ್ಮಕ ಕೃತಿಯಾದೀತು.

ಮೊಯಿಲಿಯವರು ಈ ಮಾತಿನಿಂದ ವಿಚಲಿತರಾಗಲು ಸಾಧ್ಯವಿಲ್ಲ. ಸಾಮಾಜಿಕ, ಸಾಂಘಿಕ ಜೀವನದ ಒಳತಿರುಳನ್ನು ಅನೇಕ ಮೂಲಗಳಿಂದ ಅನುಭವಿಸಿದ ಜೀವಿಯವರು. ಜನಮಾನಸದ ತುಡಿತ-ಮಿಡಿತಗಳಿಗೆ ಸ್ಪಂದಿಸಿದ ಪ್ರಜಾಸೇವಕ ಅವರು. ಅಷ್ಟೇ ಅಲ್ಲ ಅಧಿಕಾರವು ನೆರಳೇ ವಿನಾ ನೆಲೆಯಲ್ಲ ಎಂದು ಮನಗಂಡವರು. ಓದು, ಅಧ್ಯಯನ, ಚಿಂತನ-ಮಂಥನ ಹಾಗೂ ಏಕಾಗ್ರತೆಗೆ ಅವರು ತಮ್ಮನ್ನು ಒಗ್ಗಿಸಿಕೊಂಡು ಸೂಕ್ಷ್ಮ ಸಂವೇದಿಯಾಗಿ ಕಾವ್ಯಮಗ್ನರಾಗುವುದೆಂದರೆ ಇದೊಂದು ಅಗಾಧ ಸಾಧನೆ ಎಂದೇ ಹೇಳಬೇಕು. ಮೌನಗಾಲದ ಬಂಧಿಯಾಗದೆ ಮನುಷ್ಯ ತನ್ನ ಜೀವನದಲ್ಲಿ ವಿಶ್ವಜೀವನದ ವೈಶಾಲ್ಯ ತಿಳಿಯಲು ಸಾಧ್ಯವಾಗದು. ನಾಗರಿಕತ್ವದ, ದೇವತ್ವದ ತಪಸ್ಸು ಮೌನಗಾಲದ ಬೆಳಗಿನಿಂದ ಮಾತ್ರ ಸಾಧ್ಯ.

ಕಾವ್ಯ ಕೃಷಿ ಕಲೆ ಎಂದುಕೊಂಡು ಮಹಾಕಾವ್ಯ ರಚಿಸುವವರು ಬೇರೆ ವಿಷಯದ ಮೇಲೆ ಬರೆದರೆ ಅದೊಂದು ಭ್ರಮಾತ್ಮಕ ಕಾವ್ಯವಾದೀತಷ್ಟೆ. ಬದುಕಾಗಲಾರದು.

**ಪ್ರಥಮ ಸೋಪಾನ : ಶ್ರೀ ರಾಮಾಯಣ ಅನ್ವೇಷಣಂ**

ಈ ಪ್ರಥಮ ಸೋಪಾನದ ನಲವತ್ತೈದು ಪ್ರಸ್ಥಾನಗಳ ಲಹರಿಯು ಮನೋಜ್ಞವಾದುದು. ಈ ರಚನಾ ಶೀರ್ಷಿಕೆಗಳ ಸೃಜನಸೃಷ್ಟಿಗಾಗಿ ಕವಿಯ ಮಥನಕ್ರಿಯೆ ಅವರ್ಣನೀಯ. ಚಿಂತನಶೀಲ ಜಿಜ್ಞಾಸೆಯ ಏರುಗಣ್ಣಿಗೆ ಗ್ರಾಸವಾಗಿದ್ದಾರೆ. ಕಥಾ ಲಹರಿಗಳಲ್ಲಿ ಶೀರ್ಷಿಕೆಗಳು ಬಂದುಹೋಗಿದ್ದರೂ, ಅವರ ಬದುಕಿನ ಅಂತರಾಳವನ್ನು ಕೊಚ್ಚಿಕೊಂಡು ಕನೆಗಟ್ಟಿವೆ. ಮತ್ತೆ ಅವುಗಳ ಸಾರ್ವತ್ರೀಕರಣದ ಮೆಟ್ಟಲೇರಿಸಿದ್ದಾರೆ. ಇದು ಮೊಯಿಲಿಯವರ ಭಾವನಾದದ ಕೊಡುಗೆಯೇ ಅನ್ನಬೇಕು.

> *ಹಿಂದೊಮ್ಮೆ, 1998ರಲ್ಲಿ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಶ್ರೀ ವೀರಪ್ಪ ಮೊಯಿಲಿ ಅವರನ್ನು ಭೇಟಿ ಆಗುವ ಸಂದರ್ಭ ಒದಗಿತ್ತು, ಮತ್ತೆ ಅವರನ್ನೀಗ ಮಹಾಕವಿಯಾಗಿ ಸಾರಸ್ವತ ಲೋಕದಲ್ಲಿ 'ಶ್ರೀ ರಾಮಾಯಣ ಮಹಾನ್ವೇಷಣಂ'ದ ಮೂಲಕ ಕಾಣುತ್ತಿರುವುದು, ಅಭಿಮಾನ ಪಡುತ್ತಿರುವುದು-ಬೆರಗುಗೊಳ್ಳುತ್ತಿರುವುದು. ಅವರೀಗ ಸಾರಸ್ವತ ಲೋಕದ ನಿರೀಕ್ಷೆ ಮೀರಿ ಬೆಳೆದಿದ್ದು ಹೆಮ್ಮೆಯ ಸಂಗತಿ. ಕ್ರಿಯಾಶೀಲನಿಗೆ ಯಾವ ಸಂಗತಿಗಳೂ ಎಂದೂ ಅಡ್ಡ ಬರಲಾರವು. ಬಂದರೆ ಅವು ಕೇವಲ ನೆಪಗಳು ಮಾತ್ರ. ಸಾವಿಲ್ಲದ ದಾರಿ ಕಾವ್ಯಾರಾಧನೆ. ಕವಿಗೆ ಅದುವೇ ಜೀವನ ಸನ್ಮಾರ್ಗ. ಇದನ್ನು ಕಂಡುಂಡ ಅನುಭವಿ ಮೊಯಿಲಿ.*

**ಅರ್ಜುನ ಶಾ. ಕೋರಟಕರ**

ಹೊಸ ಶತಮಾನದ ಹೊಸ್ತಿಲಲ್ಲಿರುವ ಹೊಸಪೀಳಿಗೆಗೆ ಹೊಸಗನ್ನಡ ಕಾವ್ಯಕ್ಷೇತ್ರದ ಹೆದ್ದಾರಿಯನ್ನೇ ಹಾಕಿಕೊಟ್ಟಿದ್ದಾರೆ. ಸಾವಿರ ಕಿರುದಾರಿ ಏಕೆ, ಹತ್ತಾರು ಕಿರುದಾರಿ ತುಳಿದವರೂ ಸಹಜವಾಗಿ ಈ ಹೆದ್ದಾರಿಗುಂಟ ಸಾಗಲು ತೀರ ಸರಳವೆಂಬುದನ್ನು ಈ ಮೂಲಕ ತೋರಿಸಿಕೊಟ್ಟಿದ್ದಾರೆ. ತುಂಬ ಸುಭಗ ಶೈಲಿ, ಪಳಗಿದ ಕೈ, ಪಳಗಿದ ಕಾವ್ಯಧ್ವನಿ ಲಾಲಿತ್ಯದಲ್ಲಿ ಹಾಸುಕೊಕ್ಕಾಗಿದೆ.

''...ಅಧಿಕಾರ ಕಾನೂನು ರಾಷ್ಟ್ರಶೀಲಗಳೆಲ್ಲ ಸತ್ಯ ಪೀಠದ ಮುಂದೆ ಕರಗಿ ಕುಳಿತಿರುವಾಗ ರಾಷ್ಟ್ರ ನೆವನದ ಮೇಲೆ ಸತ್ಯವನು ಬಲಿಕೊಡದೆ ಸಾಗಿಹುದು ಎನ್ನೀ ಕಾವ್ಯ(ದ) ಯಾತ್ರೆಯಿದು.'' (ಪ್ರ.೧-ಪು ೧೪-೨೮೦-೨೯೦)

''... ಸುಪ್ತ ಸಾಗರದಾಚೆಗಿಹ ಜ್ಞಾನದ ಚಕ್ಷು ದಿಕ್ಕುದೆಸೆಗಳು ಎನಗೆ ನಿಚ್ಚಳಮಾಗಿ ಪ್ರತ್ಯಕ್ಷವಾಗಿಹವು'' (ಪ್ರ.೧-೧೪-೨೭೦-೨೮೦)

ಎಂದು ಹಾಡುವಲ್ಲಿ ಆತ್ಮವಿಶ್ವಾಸದ ಮಾತು ಕಾವ್ಯಕ್ಕೆ ಶಕ್ತಿ ತಂದುಕೊಟ್ಟಿದ್ದನ್ನು ತಿಳಿಯಲು ಸಾಕು ಈ ಸಾಲುಗಳು.

ಒಂದು ಮಹಾಕಾವ್ಯವನ್ನು ಇಷ್ಟು ಸರಳ ಶೈಲಿಯಲ್ಲಿ ಬರೆದ ಶ್ರೇಯಸ್ಸು ಪ್ರಥಮತಃ ಇವರಿಗೇ ಸೇರಬೇಕು. ಇದೊಂದು ಓದುಗರ ಭಾಗ್ಯ. ದಂಡಕಾರಣ್ಯ ತಲುಪಿದಾಗ ವಿಶ್ವಾಮಿತ್ರ ರಾತ್ರಿ ಭವಿಷ್ಯದ ಕನಸು ಕಾಣುತ್ತಾನೆ. ಸ್ತಂಭೀಭೂತನಾದಾಗ ಲಕ್ಷ್ಮಣ ಹೇಳುತ್ತಾನೆ 'ಯಾಕೆ ನೀವು ಹೀಗೆ ಕೂತಿರಿ ? ನಾವು ಯುದ್ಧಕ್ಕೂ ತಯಾರಿದ್ದೀವಿ' ಎಂದು.

ವಾಸ್ತವಕೆ ಬಂದ ವಿಶ್ವಾಮಿತ್ರ 'ಬುದ್ಧಿಜೀವಿ-ಚಿಂತಕರು ಸೇರಿಕೊಂಡು ಯುದ್ಧ ಬೇಡವೆಂಬ ನಿಲುವಿನಲ್ಲಿ ಏನೋ ಆಲೋಚಿಸುತ್ತಿದ್ದಾರೆ, ಅವರ ನಿರ್ಣಯ ಹೊರಬರಲಿ, ಆ ವರೆಗೆ ಕಾಯೋಣ' ಎನ್ನುತ್ತಾನೆ.

*'ಬಿಲಗಳಿವೆ ಇಲಿಗಳಿಗೆ, ಗೂಡು ಹಾಡು ಹಕ್ಕಿಗಳಿಗೆ*
*ಮನುಜನಿಗಿಲ್ಲ ಮಲಗಿ ನಿದ್ರಿಸೆ ಗೇಣುಜಾಗ*
*ಹಾಯಾಗಿ ಸೂರ್ಯನ ಬೆಳಕಿನಲಿ ಬದುಕುವಾಸೆ'*

(ಪ್ರ.೯.೧೪೦-೧೫೦)

ಜೀವನದ ವಾಸ್ತವಿಕ ಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡು ಎಷ್ಟು ಪರಿಣಾಮಕಾರಿಯಾದ ಮಾತನಾಡುತ್ತಾರೆ! ಕವಿಯ ಕಳವಳ ಕಾವ್ಯಧ್ವನಿಯಾಗಿ ಹೊರಹೊಮ್ಮಿದ್ದು

ಹೃದಯ ಪ್ರಳಯದ ಸಂಗತಿ! ಮನುಷ್ಯ ಇಂದು ಕ್ಷುದ್ರ ಜೀವಿಯ ಬದುಕಿಗಿಂತಲೂ ಕ್ಷುದ್ರನಾಗಿದ್ದಾನೆಂದು ಆಲೋಚಿಸಿದ ಚಿಂತನೆಯನ್ನು ಕಾವ್ಯದಲ್ಲಿ ತಂದಿರುವುದು ರೋಮಾಂಚನವನ್ನುಂಟು ಮಾಡುತ್ತದೆ.

''ಕಮರಿ ಹೋಗಿದೆ ಸ್ವತಂತ್ರ ಚಿಂತನೆ, ಉಸುರು ಗಟ್ಟಿದೆ ನಲುಗಿದೆ ನ್ಯಾಯ ಸಂಸ್ಕೃತಿಯ ಭಾರತದ ಬದುಕು'' ಅನ್ನುವಂಥ ಮಾತಿನಲ್ಲಿ ಅಡಗಿದ ಹತಾಶೆ ತುಂಬ ಪರಿಣಾಮಕಾರಿಯಾಗಿದೆ. ಆಶಾಜೀವನದ ಅಂಕುರವನ್ನು ಎತ್ತಿಕೊಡುವ ಸೂಕ್ಷ್ಮವು ಪ್ರಸ್ತುತ ಭಾರತದ ಜೀವನವನ್ನು ಬಯಲಿಗೆಳೆಯುತ್ತಿದೆ. ಪರಿಪೂರ್ಣದತ್ತ ಸಾಗುವುದಕ್ಕೆ ಪ್ರೇರಣೆ ನೀಡುತ್ತಿದೆ. ಪಲಾಯನವಾದಿ ಮನೋವೃತ್ತಿಗೆ ಪಾಠ ಕಲಿಸುವಂತಿದೆ.

ಈ ಕಾಟಾಚಾರದ ವರ್ಣ ಜಾತಿಗಳಿಂದ ಮನುಷ್ಯ ಮುಕ್ತನಾಗಲಿ, ಮನುಷ್ಯ ದೇವಮಾನವನಾಗಲಿ ಎಂದು ಆಶಿಸುವುದು;

''ಪಶುಬಲದ ದಾರಿಯಲಿ ಪಾಳುಬಿದ್ದಿದೆ ದೇವರಿಲ್ಲದೆ ಸತ್ಯದ ಗುಡಿಗೋಪುರವು ದುಷ್ಟ ಶಾಸನದೆದುರು ನೀತಿ-ನೆಲೆ ಇಲ್ಲದೆಯೆ ನಿಂತಿಹುದು'' ಎನ್ನುವ ಧ್ವನಿಯು ಆಡಳಿತದ ವ್ಯವಸ್ಥೆ ಮತ್ತು ಕಾನೂನುಗಳ ಹೊಸ ಚಿಂತನೆಯಲ್ಲಿ ಪರಿಷ್ಕಾರದ ಅಗತ್ಯವನ್ನು, ತುಂಬ ಸೂಕ್ಷ್ಮ ಮನೋಭಿಲಾಷೆಯನ್ನು ಅರ್ಥಪೂರ್ಣವಾಗಿ ಬಿಚ್ಚಿಟ್ಟಿದ್ದಾರೆ. ಒಬ್ಬ ರಾಷ್ಟ್ರ ನಿರ್ಮಾತೃ ಕವಿಯಲ್ಲಿ ದೇಶದ ಜ್ವಲಂತ ಸ್ಥಿತಿ ಎಷ್ಟು ಕಾಡುತ್ತಿದೆ ಎನ್ನುವುದಕ್ಕೊಂದು ಉದಾಹರಣೆಯಿದೆ. (ಪ್ರ.೧೦)

ಅಂದಿನ ಯಜ್ಞಗಳು ಮತ್ತು ಅವುಗಳ ಕ್ರಿಯೆಗೆ ಭಂಗಮಾಡುವುದು ಪ್ರಜಾ-ಚಿಂತನೆಗಳಿಗೆ ಇಂದು ಗ್ರಾಸವಾಗುತ್ತಿದೆ. ಯಜ್ಞವನ್ನು ಭಂಗಮಾಡುವ ಉದ್ದೇಶವಾದರೂ ಏನು? ಈ ದ್ವಂದ್ವಗಳ ಕುರಿತು ಅಂತರಂಗದ ಅನ್ವೇಷಣ ಮಾಡುವ ವಿಶೇಷ ಸಾಹಿತ್ಯದ ರಚನೆ ಅಗತ್ಯವಿದೆಯೇ ಎಂದು ಕವಿ ತನಗೆ ತಾನೆ ಪ್ರಶ್ನೆ ಹಾಕಿಕೊಳ್ಳುತ್ತ ಯಜ್ಞ ಜಿಜ್ಞಾಸೆಯ ಹೊಳಹನ್ನು ಓದುಗರೆದುರು ಅಮೂರ್ತವಾಗಿಡುತ್ತಾನೆ.

ಅರಾಜಕತೆ ಎನ್ನುವುದು ಪ್ರಕೃತದತ್ತ ಸೃಷ್ಟಿಯೇನಲ್ಲ, ಅದನ್ನು ಸರಿಪಡಿಸಲು ವಿಶ್ವಾಮಿತ್ರ ಸೃಷ್ಟಿ ಚಿಂತನೆ ಪ್ರಸ್ತುತವಾಗಬೇಕು. ಇದರಲ್ಲಿ ಬದಲಾವಣೆಯೊಂದಿಗೆ ಪರಿವರ್ತನೆಯೂ ಅಡಗಿದೆ ಎನ್ನುವುದು ಕವಿಯ ತಹತಹವಾಗಿದೆ.

ವಿಶ್ವಾಮಿತ್ರನ ಯಜ್ಞವನ್ನು ಭಂಗಗೊಳಿಸುವ ದುಶ್ಶಕ್ತಿಯ ವಿರುದ್ಧ ಹೋರಾಡಲು ವಿಶ್ವಾಮಿತ್ರ ದಶರಥ (ರಾಮ, ಲಕ್ಷ್ಮಣ)ರನ್ನು ಮೊರೆಹೋಗುವ ಉದ್ದೇಶ : ವಿಶ್ವಾಮಿತ್ರ ಅಸಹಾಯಕನೆಂದಾಗಲಿ, ನಿಃಶಕ್ತನೆಂದಾಗಲಿ ಎಂಬರ್ಥವಲ್ಲ. ಆಡಳಿತದ ಅಧಿಕಾರ ಹೊಂದಿದವರು ಮಾಡಬೇಕಾದ ಕರ್ತವ್ಯದಲ್ಲಿ ಅಕ್ರಮ ದಾರಿ ತುಳಿಯುವುದು ನಾಗರಿಕ ಲಕ್ಷಣವಾಗಲಾರದು. ರಾಜ್ಯವಾಳುವ ರಾಜರ ಹತ್ತಿರವಿರಬೇಕಾದ ಅಸ್ತ್ರಗಳು ವಿಶ್ವಾಮಿತ್ರನಲ್ಲಿರುವುದರ ಉದ್ದೇಶವೇನು ಎನ್ನುವುದನ್ನು ಬಲ್ಲವರಿಂದ ತಿಳಿಯಬೇಕು. ಬಿಲ್ಲುವಿದ್ಯೆಯನ್ನು ಕೂಡ ಆಗ ಋಷಿಗಳೇ ಕಲಿಸಿಕೊಡುವುದರಿಂದ ಶಸ್ತ್ರಾಸ್ತ್ರಗಳು ಕಲಿಸುವ ಸಲಕರಣೆಗಳಂತಿರಬಹುದೆಂದು ನನ್ನ ತಿಳಿವಳಿಕೆ.

ಯಜ್ಞಭಂಗಕ್ಕೆ ಬಂದ ಮಾರೀಚನಿಗೆ ರಾಮ ಬಾಣ ಬಿಡುತ್ತಾನೆ. 'ಕೊಂದುಬಿಡು, ಅರೆಜೀವ ಮಾಡಿಬಿಡಬೇಡ' ಎಂದು ಲಕ್ಷ್ಮಣ ಹೇಳುತ್ತಾನೆ. 'ಬೇಡ, ದಾನವತೆ ಅಳಿಯಲಿಕ್ಕೆ ಕೊಲ್ಲುವುದೊಂದೇ ಮಾರ್ಗವಲ್ಲ, ಮಾನವತೆಯ ಸಿಂಚನ ಮಾಡೋಣ,' ಎನ್ನುತ್ತಾನೆ ರಾಮ.

ಇಲ್ಲಿ ಮೊಯಿಲಿಯವರ ಅನುಭವ ಹುತ್ತಗಟ್ಟಿದ್ದು ಅಂತರ್ಗತ ಅರ್ಥದ ಮಾತಾಗುತ್ತದೆ. ಕಾಲಮಾನಗಳ ವಾಸ್ತವಿಕ ಜೀವನವನ್ನು ಅವಲೋಕಿಸುವ ಸೂಕ್ಷ್ಮವು ಮಂಥನದಿಂದ ಮಾತ್ರ ತಿಳಿಯಲು ಸಾಧ್ಯವಾಗುತ್ತದೆ. ರಾಮಾಯಣ ಬರೆಯುವ ಕಾಲಕ್ಕೆ ವಾಲ್ಮೀಕಿಗೆ ಯುಗಕಲ್ಪನೆ ಮೀರಿ ಕಲಿಯುಗದ ಸಂಕಲ್ಪವೂ ಸಾಧ್ಯವಾಗಿರಲಿಕ್ಕಿಲ್ಲ! ಆದರೂ ಅವನದೇ ಆದ ಒಂದು ಕಾಲಮಾನದ ಸಂಕಲ್ಪ ಇರಬಹುದು; ಆದರೆ ಈ ಮೊಯಿಲಿ ಮಹಾಕವಿಗೆ ಕಾಲಮಾನಗಳ ಮಹಾಪೂರವೇ ಸಂಕಲ್ಪ ಸಾಧ್ಯವಾಗಿದೆ. ರಾಮಾಯಣದ ಕತೆಗೆ ಎಲ್ಲಿಯೂ ಧಕ್ಕೆ ತರದೆ, ಆಯಾ ಪಾತ್ರಗಳ ಮೂಲಕವೇ ಆಧುನಿಕ ಜಗತ್ತಿನ ತನ್ನ ಸ್ವತಂತ್ರ ಆಲೋಚನೆಗಳನ್ನು ತುಂಬ ಸೂಕ್ಷ್ಮವಾಗಿ ಸಾರ್ವಕಾಲಿಕ ಮನೆಮಾತಾಗುವಂತೆ ಕಾವ್ಯವನ್ನು ಕಟ್ಟಿದ್ದಾರೆ. ವೈವಿಧ್ಯವನ್ನು ತೋರಿದ್ದಾರೆ. ಅಲ್ಲಿಂದ ನಡೆದುಬಂದ ದಾರಿಗುಂಟ ಸಾಗುತ್ತ ಈತನಕ ಆಗಿರುವ ಬದಲಾವಣೆ ಪರಿವರ್ತನೆಗಳನ್ನು ಕಾವ್ಯದಲ್ಲಿ ಓತಪ್ರೋತವಾಗಿ ಹರಿಸಿದ್ದಾರೆ.

*ಕಣ್ ಮುಚ್ಚಿ ಓದಬಹುದು ನಾದಲಯ*
*ಮನತಣಿಸುವುದು*
*ಶಬ್ದಗೊಂದಲಮೀರಿ ತೀರ ತೀರ ಸಹಜವಾಗಿಹುದು*
*ಯಾವನೂ ಓದಬಹುದು ತಿಳಿದು ಹೇಳಬಹುದು*
*ಅದ್ಭುತವಾಗಿಹುದು ಶಬ್ದಲಾಲಿತ್ಯವು.*

ಆಕ್ರೋಶ ವಿವೇಕಹೀನವಾದುದೇನಲ್ಲ, ವಿವೇಕಕ್ಕೂ ಆಕ್ರೋಶವಿರುವುದನ್ನು ಅಭಿವ್ಯಕ್ತಿಸಿದ್ದಾರೆ. ಸ್ತ್ರೀಪರ ಹೋರಾಟಕ್ಕೆ ಸ್ತ್ರೀ ಸಿದ್ಧಳಾಗಲು ಆಡಳಿತದ ಆ ದೇಶದ ಬರೀ ಒಂದು ಮಾತು ಸಾಕು. ಶೋಷಿತರೂ ಸಂಘಟಿತರಾಗುವರು. ಕವಿಗೆ ಸ್ತ್ರೀ ಕಳಕಳಿಯಿದೆ.

ಈ ಮಹಾಕಾವ್ಯದ ಇಪ್ಪತ್ತನೇ ಪ್ರಸ್ಥಾನದ ಶೀರ್ಷಿಕೆ 'ಮೌನ ಕಾನನದೊಳಗೆ ಕೋಗಿಲೆಯು ಹಾಡಿತ್ತು.' ಇದು ಕವಿಯ ಅಂತರಾಳದ ಜಿಜ್ಞಾಸಾ ಸಂವೇದನೆ. ಕಾವ್ಯದ ವಿಶೇಷ ಚಿಂತನೆಗಳನ್ನು ಎಲ್ಲಾ ಪ್ರಸ್ಥಾನಗಳ ಶೀರ್ಷಿಕೆಯ ಹುಟ್ಟಿನಲ್ಲಡಗಿರುವುದು ಎದ್ದು ಬರುವಂಥದ್ದು. ಒಂದು ವಸ್ತುವನ್ನು ಅರಗಿಸಿಕೊಳ್ಳುವ ತಾಕತ್ತು ಮತ್ತು ಪಕ್ವಕಾಲ ಈಗ ಮೊಯಿಲಿ ಅವರಿಗಿರುವುದು ತಿಳಿದುಕೊಳ್ಳಬೇಕಾದ ಚಿಂತನಶೀಲ ಅಭಿವ್ಯಕ್ತಿ ಶಕ್ತಿ.

ಲೌಕಿಕ ಕಾಮನೆಗಳನ್ನು ಅದುಮಿಟ್ಟುಕೊಂಡವರ ಸ್ಥಿತಿ-ಗತಿಯ ಚಿತ್ರಣ ಈ ಪ್ರಸ್ಥಾನ. ಮನೋಭಿಲಾಷೆಗೆ ನಿಲುಕದ ಯಾವ ಸಾಧನೆಯೂ ಸಾರ್ಥಕವೆನಿಸಲಾರದೆಂಬ ತತ್ತ್ವ ಸಾರುವಂತಿದೆ ಇದು. ಕಾಮ ಅದೊಂದು ಪ್ರಾಕೃತಿಕ ಕ್ರಿಯೆ. ಇದೊಂದು ಮಿಲನ ಸಂಚಾರ - ಸಹಜ ಸಂಚಾರ.

ಗೌತಮ-ಅಹಲ್ಯೆ-ದೇವೇಂದ್ರ ಪ್ರಸಂಗ ಪ್ರಕರಣ ಈ ಪ್ರಸ್ಥಾನ. ಋಷಿಪತ್ನಿ ಅಹಲ್ಯೆಯನ್ನು ಪ್ರಥಮತಃ ಕಂಡಾಗಲೇ ಬೆಚ್ಚಿದವನು. ಮಧ್ಯರಾತ್ರಿಯಲೆದ್ದದ್ದು ದೇವೇಂದ್ರ ಪ್ರಬುದ್ಧನಾಗಲು ಅಲ್ಲ: ಕ್ರುದ್ಧನಾಗಲು; ಅಹಲ್ಯೆಯ ಸುಖ ವೈಭೋಗಕ್ಕೆ ಕುತಂತ್ರ ಹೂಡಲು. ಕಾಯುತಿಹ ಅಹಲ್ಯೆಯ ಚಾಂಚಲ್ಯ ಚಪಲಕ್ಕೆ ವಿಟನಾಗಲು.

ದೇವೇಂದ್ರ-ಅಹಲ್ಯೆಯ ಪ್ರಣಯ ಪ್ರಸಂಗವನ್ನು ಮೊಯಿಲಿಯವರು ಅತ್ಯಂತ ರಸವತ್ತಾಗಿ ಚಿತ್ರಿಸಿದ್ದಾರೆ. ಅರ್ಥಕ್ಕೇನೇ ಹೆಚ್ಚು ಒತ್ತುಕೊಟ್ಟು ಪರಕಾಯದ ಸ್ಥಿತಿಯನ್ನು ಅನುಭವಿಸಿದ್ದಾರೆ. ಅದೇ ಮಲಗಿ ಮಿಲನಬೇದ್ದ ಮುದುಕನು ಈ ಅಹಲ್ಯೆಯ ಪ್ರಸಂಗ ಓದಲು ತೊಡಗಿದರೆ ಮತ್ತೆ ಉದ್ರೇಕವಾಗುವಂತೆ ರಸವತ್ತ ಚಿಂತನೆಗೈದಿದ್ದಾನೆ ಕವಿ. ತುಂಬ ನಿರ್ಲಿಪ್ತನಾಗಿ, ನಿರ್ಮಲನಾಗಿ, ನಿರ್ಭಯನಾಗಿ ಕವಿ ಮೊಯಿಲಿ ಇಡೀ ಮಹಾಕಾವ್ಯ ರಚಿಸಿದ್ದಾರೆ.

ದೇವೇಂದ್ರ ಗೌತಮನ ಹೆಂಡತಿಯನ್ನು ಕೆಡಿಸಿದ. ಬಲಾತ್ಕರಿಸಲಿಲ್ಲ. ಅಹಲ್ಯೆ ಕೂಡ ಚಂಚಲೆಯಾಗಿರುವುದರಿಂದಲೇ ಇದು ಸಹಜ ಮಿಲನವಾದಂತೆಯೆ. ಸಚ್ಚಾರಿತ್ರ್ಯದ ಸ್ತ್ರೀ ತನ್ನನ್ನು ರಕ್ಷಿಸಿಕೊಳ್ಳುವ ಶಕ್ತಿಪಡೆದುಕೊಂಡಿರುತ್ತಾಳೆ. ಇಲ್ಲಿ ಕಾಮ ಎನ್ನುವುದು ಪ್ರಾಕೃತಿಕ ಕ್ರಿಯೆ ಮಾತ್ರ ಎನ್ನುವುದು ವಿಶಾಲ ದೃಷ್ಟಿಗೆ ಎಡೆಯಾಗುತ್ತದೆ. ಭಾರತೀಯ ಸಂಸ್ಕೃತಿ ಇದಕ್ಕೆ ಬಂಧನಕಾರಿಯೇ ಆಗಿದೆ. ಇರಲಿ...

'ಅಮರೇಂದ್ರಗರಿವಾಯ್ತು ಅಹಲ್ಯೆಯ ಶರಣ ಸ್ಥಿತಿಯು.' (ಪ್ರ.೨೦-೧೪೦-೧೫೦)

ಈ ಪದ್ಯದ ಅರ್ಥ ಈ ಕಾವ್ಯದಲ್ಲಿ ಕಠಿಣವೆನಿಸುತ್ತದೆ. ಯಾಕೆಂದರೆ ಕವಿ ಶರಣ ಎಂಬ ಪದವನ್ನು ವಿಶೇಷ ಚಿಂತನೆಯಿಂದ ಬಳಸಿಕೊಂಡಿದ್ದಾನೆ.

ಈ ಪ್ರಸ್ಥಾನದ ಪ್ರಾರಂಭದಲ್ಲಿ 'ದೇವರಾಜನು ನಾನು, ಶರಣಾಗಿ ಬಂದಿಹೆನು ನಿನ್ನ ರತಿ ಸೌಂದರ್ಯಕ್ಕೆ ದಾಸಾನುದಾಸನಾ...' ಎಂದು ಅಹಲ್ಯೆಗೆ ಹೇಳುವನು. ಅನಂತರದಲ್ಲಿ ಅಹಲ್ಯೆ ದೇವೇಂದ್ರನೊಂದಿಗೆ ಕೂಡಿದ ಮೇಲೆ ಅಥವಾ ದೇವೇಂದ್ರನೇ ಅಹಲ್ಯೆಯೊಂದಿಗೆ ಸೇರಿದಮೇಲೆ - ಮೌನ ಕಾನನದೊಳಗೆ ಕೋಗಿಲೆಯು ಹಾಡಿದ ಮೇಲೆ... 'ಪರಲೋಕದಂಜಿಕೆಯು ಸಿಕ್ಕು ತೊಡಕಾಗಿರಲು ಶರಣಾದಳಹಲ್ಯೆ ಪುನಃ ಅಮರೇಂದ್ರನಿಗೆ ಒರಗಿದಳು ಭುಜತಲ್ಪ ಸುವಿಶಾಲ ವಕ್ಷದಲಿ ಮಹೇಂದ್ರಾದ್ಭುತ ಕಾಮ ಕಲಾ ಕೌಶಲತೆಗೆ ಬೆರಗಾಗಿ...'

ಇಲ್ಲಿ ಶರಣ ಎನ್ನುವ ಪದವು ಬಿಡಿಸಲಾರದ ಅರ್ಥ ಪಡೆದುಕೊಳ್ಳುತ್ತದೆ. ಶರಣ ಎನ್ನುವುದು ಪ್ರಕೃತಿಗೆ ಬೆರಗಾಗುವುದು ಮತ್ತು ಸೋಲುವುದು ಎಂಬ ಅರ್ಥಕ್ಕೆ ಹತ್ತಿರವಾಗುತ್ತದೆ. ಅದು ವಿರಕ್ತಿಯ ಸಂಸ್ಕೃತಿಯಿಂದ ಅನುರಕ್ತಿ ಹೊಂದುತ್ತದೆ. ವಿರಕ್ತಿಯೊಳಗೇ ಅನುರಕ್ತಿ ಹೊಂದುವುದು ಸ್ವರಕ್ತಿಯಿಂದ ಭಿನ್ನವಾಗುತ್ತದೆ. ಗೌತಮನಲ್ಲಿ ಕಾಣಬೇಕಾದ ಸ್ವರಕ್ತಿ ಅಹಲ್ಯೆಗೆ ನೀತಿಯಾದರೆ - ದೇವೇಂದ್ರನೊಂದಿಗೆ ಬೆರೆಯುವುದು ಸಾಮಾಜಿಕವಾಗಿ ಅನಾಚಾರವಾಗುತ್ತದೆ.

ಒಂದು ಮಹಾಕಾವ್ಯವನ್ನು ಕಟ್ಟುವಾಗ ಮೊಟ್ಟ ಮೊದಲನೇ ಆಲೋಚನೆ ಎಂದರೆ ಛಂದಸ್ಸು. ಯಾವುದನ್ನೇ ಅನುಸರಿಸಲಿ ಅಥವಾ ಯಾವುದನ್ನೇ ಕವಿಯೇ ಹುಟ್ಟುಹಾಕಲಿ ಮೊದಲಿಂದ ಕೊನೆವರೆಗೂ ಅದೇ ಛಂದೋಬದ್ಧದಲ್ಲಿ ಸಾಗುವುದೇ ಸೂಕ್ತ. ಏಕನಾದ ಜೀವನ ಚಿಂತನೆಗೆ - ಕಾವ್ಯ ಚಿಂತನೆಗೆ ವ್ಯಷ್ಟಿ-ಸಮಷ್ಟಿಯ ವಾಸ್ತವವೇ ಮುಖ್ಯ. ಅದೇ ತೆರನಾದ ಒಂದೇ ಓಘದ ಛಂದಸ್ಸನ್ನು ಕವಿ ಬಳಸಿದ್ದಾನೆ. ಇಲ್ಲಿ, ಮೊಯಿಲಿ ಅವರಲ್ಲಿ ಗಮನಿಸಬೇಕಾದ ಸಂಗತಿ ಎಂದರೆ ಈ ಕಾವ್ಯ ರಚನೆಯ ಛಂದೋ ರಚನೆಗಾಗಿ ತಡಕಾಡಿದನೆಂದು ಅನಿಸುವುದೇ ಇಲ್ಲ. ಅಷ್ಟು ಸುಭಗ ಲಹರಿ ಹರಿದುಹೋಗಿದೆ. ಕವಿಗೆ ಛಂದೋ ಚಿಂತನೆಯ ತೊಡಕಾಗಿದ್ದರೆ ಒಂದೇ 'ಸೋಪಾನ'ಕ್ಕೆ ಕವಿ ಸೋತುಹೋಗುತ್ತಿದ್ದ. ಕಾವ್ಯ

ರಚನೆಯಲ್ಲಿ ತೊಡಗಿದಂತೆ ಛಂದೋ ಕೃಷಿಯಲ್ಲಿ - ಚಿಂತನೆಯಲ್ಲಿ ತನ್ಮಯನಾಗಿ ಕವಿ ಪಳಗುತ್ತಲೇ ಪಕ್ವವಾಗುತ್ತಲೇ ಸಾಗಿದ್ದಾನೆ. ಈ ಸಾಧನಾ ಚಿಂತನೆಯಿಂದ ಸೃಜನಶೀಲತೆ ಒರತೆಯಾಗಿ ಹುಟ್ಟಿದ್ದು ಪೂರವಾಗಿ ಮಹಾಪೂರವಾಗಿ ಇನ್ನಿಷ್ಟು ಇನ್ನಿಷ್ಟು ಉಕ್ಕುತ್ತಲೇ ಸಾಗಿದೆ. ಇದರಿಂದಾಗಿ ಬರೆದು ಬರೆದಂತೆ ಉಲ್ಲಾಸ ಇಮ್ಮಡಿಸುತ್ತಲೇ ಸಾಗಿದೆ. ಕಾವ್ಯ ಛಂದಸ್ಸು ಬಿಟ್ಟಿಲ್ಲ. ಛಂದಸ್ಸು ಕಾವ್ಯಕ್ಕೆ ಎಲ್ಲಿಯೂ ಬಂಧನವಾಗಿಲ್ಲ. ಕೃತಕವೆನಿಸಿಲ್ಲ. ಕಾವ್ಯದೊಳಗೇ ಛಂದಸ್ಸು ಸಹಜ ಬೆಳೆಯುವಂತೆ ಹುಟ್ಟಿಕೊಂಡು ಬೆಳೆದಿದೆ. ಇಡೀ ಕಾವ್ಯ ಛಂದಸ್ಸಿನ ಇತಿಮೀರಿ ಶ್ರುತಿ ಹರಿದಿದೆ. ಈ ಶ್ರುತಿ ಕವಿಯ ಕಾವ್ಯಭಾಗ್ಯದ ಶ್ರೇಷ್ಠತೆಯಾಗಿದೆ.

ಈ ಮಹಾಕಾವ್ಯದ ಎಲ್ಲ ಉಪಶೀರ್ಷಿಕೆಗಳು ಆಯಾ ಪ್ರಸ್ಥಾನಕ್ಕೆ ಆಳ ಚಿಂತನೆಯ, ದೀರ್ಘ ಚಿಂತನೆಯ ತಪಸ್ಸಿನ ಫಲ.

*'ಆರಿಸ್ಯೆ ಹಿಂಸೆಯ ಕೆನ್ನಾಲಿಗೆಯನ್ನು' (ಪ್ರ.೨೭)*
*ಪ್ರಕೃತಿಯ ವಿಕೋಪದಲ್ಲಿ ಪರಶುರಾಮನ ಪ್ರವೇಶ.*
*ಶಿವಧನುವನೇಕೆ ಮುರಿದೆ ಎಂಬ ಪ್ರಶ್ನೆ ಶ್ರೀರಾಮನಿಗೆ.*

ಇಲ್ಲಿ ಪ್ರಜಾಪ್ರಭುತ್ವದ ನಿಜವಾದ ಹೋರಾಟದ ಲಕ್ಷಣವಿದೆ. ಮಹಾಕವಿಯ ಮನಸ್ಸು ತುಂಬ ಸೂಕ್ಷ್ಮವಾಗಿ ತುಡಿದಿದೆ.

ಹಿಂದಿನ ಪ್ರಸ್ಥಾನದಲ್ಲಿ ಶ್ರೀರಾಮನು ಧನುಸ್ಸು ಮುರಿದಿದ್ದರ ಕುರಿತು ಪ್ರಜಾಚಿಂತಕರಲ್ಲಿ ಪ್ರಶ್ನೆ ಹುಟ್ಟುತ್ತದೆ. ಆದಕ್ಕೆ ಕವಿ ಇಲ್ಲಿ ಪರಿಹಾರ ಕೊಟ್ಟಿದ್ದಾನೆ. ಈ ಸನ್ನಿವೇಶ ಮೊಯಿಲಿ ಅವರ ಕಾವ್ಯಕ್ಕೆ ವಿಶೇಷ ಶಕ್ತಿಯನ್ನು ತಂದುಕೊಡುತ್ತದೆ. ಮೊಯಿಲಿಯವರಿಗೆ ಸಂದುವ ಬಿರುದು, ಮಾನ-ಸನ್ಮಾನ, ಪ್ರಶಸ್ತಿಗಳು ಲಭಿಸುವ ಸಾಧ್ಯತೆಗೆ ಈ ಪ್ರಸ್ಥಾನದ ಶ್ರೇಯಸ್ಸು ಹೆಚ್ಚುಗಾರಿಕೆಯಾಗಿ ನಿಲ್ಲುತ್ತದೆ.

ಕುವೆಂಪು ಅವರ ಮಹಾಕಾವ್ಯ ಇಪ್ಪತ್ತನೇ ಶತಮಾನದ ಶ್ರೇಷ್ಠ ಕನ್ನಡ ಕಾವ್ಯ. ಅಂದಿನ ದಿನಮಾನಕ್ಕೆ ಸರಿದೂಗುವುದಾದರೂ ಇಂದಿನ ದಿನಮಾನಕ್ಕೆ, ಮುಂಬರುವ ಹೊಸಪೀಳಿಗೆಗೆ - ಜನಸಾಮಾನ್ಯರಿಗೆ ಸಹಜ ತಟ್ಟುವುದರಲ್ಲಿ ಸಂದೇಹವಿಲ್ಲ. ಕುವೆಂಪು ಅವರ ಕಾವ್ಯ ದೇಶದೇಶದ ಮಾತಾಯಿತು. ಆದರೆ, ಇದು ದೇಶದ ಮನೆಮನೆ ಮಾತಾಗುವುದರಲ್ಲಿ ಎರಡು ಮಾತಿಲ್ಲ!

ದೇಶ ದೇಶದ ಮಾತು - ದೇಶದ ಮನೆಮನೆಯ ಮಾತು; ಈ ಎರಡೂ ಮಾತುಗಳ ಅಂತರ ತಿಳಿಯುವುದೇ ಸೂಕ್ಷ್ಮ ಜೀವನ.

ಮುಂದೆ, ದಶರಥ ಮಹಾರಾಜ ರಾಮನಿಗೆ ಪಟ್ಟಾಭಿಷೇಕ ಮಾಡಬೇಕೆಂದು ದಿಢೀರನೇ ಸ್ವಯಂ ನಿರ್ಧಾರಕ್ಕೆ ಬರುತ್ತಾನೆ. ಕಾರಣ ತನ್ನ ಜೀವನಾನುಭವದಲ್ಲಿ ಏನಾದರೂ ಹೊಸದನ್ನು ದೇಶಕ್ಕೆ ನೀಡಬೇಕೆಂಬ ಹಂಬಲ. ಪಟ್ಟಾಭಿಷೇಕಕ್ಕೆ ಸಿದ್ಧನಾಗಲು ತಿಳಿಸುತ್ತಾನೆ. ರಾಮ ಕೂಡ ಆ ಗದ್ದುಗೆಗಾಗಿ ಆಸೆಪಟ್ಟಿರಲಾರ. ಪಟ್ಟಾಭಿಷೇಕದ ಮೂಲ ವಿಧಾನ ಹಾಗೂ ನಿಯಮಗಳ ಕುರಿತು ತಂದೆಗೆ ರಾಮ ನಿವೇದಿಸುತ್ತಾನೆ. ತನ್ನ ಅಚಲ ನಿರ್ಧಾರಕ್ಕೆ ದಶರಥ ಬದ್ಧನಾಗಿರುತ್ತಾನೆ. ಆ ಸ್ಥಾನಮಾನದ ರೀತಿ, ಧರ್ಮ ನಡವಳಿಕೆಗಳನ್ನು ಹೇಳುತ್ತಾನೆ.

''ಮನವ ಹಿಡಿದಿಟ್ಟಾಗ ಜಗವ ಹಿಡಿದಿಡಬಹುದು
ಮನವನಾಳಿದರಾಗ ಜಗವನಾಳಲುಬಹುದು
ಅರಿತೊಡೆ ಇದುವೆ ಬದುಕಿಂಗೆ ಮೇಣ್ ರಾಜ್ಯಭಾರಕೆ
ದಿವ್ಯತಮ ಸೂತ್ರಮಾಗಿಹುದು''

ಎಂಬ ಮಾತು ಶ್ರೀರಾಮನಿಗೆ ಮಾರ್ಮಿಕವಾದುದು. ಅನುಭವವನ್ನು ಸೃಜನ ಕಲೆಯಲ್ಲಿ ಹಿಡಿದಿಟ್ಟ ರೀತಿ ಕಾಲಮಾನಕ್ಕೆ ಹೆಚ್ಚು ಅರ್ಥ ತಂದುಕೊಡುತ್ತದೆ.

ಈ ಕಾವ್ಯಾನ್ವೇಷಣೆಯ ಓದು ನಾಡಿನ ಕಾವ್ಯಾಸಕ್ತರ ನಾಡಿಯಿಂದ ನಾಡಿ ಮಿಡಿದಂತೆ ನುಡಿದಂತೆ ಜನಜೀವನದ ಜನಮನದ ಕಣ್ ಸೆಳೆದು ತಟ್ಟುತ್ತ ಸಾಮಾನ್ಯನೂ ಆಕರ್ಷಿತನಾಗುವುದು ಸಾಧ್ಯವಿದೆ.

'ಭರತ ರಾಜ್ಯವಾಳೆ ರಾಮಂಗೇಕೆ ವನವಾಸ' (ಪ್ರ.೩೩)

''ತಮಾಲಶಾಖೆಯ ಪೋಲ್ವ ತೋಳುಗಳ ಚಾಚಿದನು. ಲಕ್ಷ್ಮಣನ ಅಪ್ಪಿದನು.

ವಿಶ್ವವನೆ ಹೃದಯದಲಿ ಅಡಗಿಸಿದಂತೆ ತಾದಾತ್ಮ್ಯದಲಿ; ಕ್ಷಮಾವೃಕ್ಷ ಶ್ರೀರಾಮ.''

''ಕ್ಷಮಾವೃಕ್ಷ ಶ್ರೀರಾಮ'' ಎಂಥ ಅದ್ಭುತ ಕಲ್ಪನೆ!

ಸಾಕೇತದ ಪ್ರಜೆಗಳು ಮತ್ತು ರಘುವಂಶಜರು ರಾಮ-ಲಕ್ಷ್ಮಣರ ವನವಾಸಕ್ಕೆ ಕಳುಹಿಸುವ ಸಂದರ್ಭದಲ್ಲಿ ಮನಮಿಡಿವಂತೆ ಚಿತ್ರಿಸಿದ್ದಾರೆ.

''ಪ್ರಜೆಗಳೆಲ್ಲರೂ ಬಿಡದೆ ಕಣ್ಣೀರ ಮಿಡಿಯುತ್ತ ಅಲ್ಲಿಗಲ್ಲಿಗೆ ತೊಯ್ದಿಹರು ರಾಜಪಥ ದಿಕ್ಕೆಲವ,'' ಅನ್ನುವ ಮಾತಂತು ಆಲೋಚನೆಗೆ ಮೀರಿದ್ದೆಂದು ಉದ್ಗರಿಸಬೇಕೆನಿಸುತ್ತದೆ. ಮತ್ತು 'ನಿಂದವು ಕುದುರೆಗಳು ಮುಂಗಾಲುಗಳ ಮೇಲೆತ್ತಿ' ಅನ್ನುವ ಮಾತು ಮನುಷ್ಯ ತನ್ನನ್ನು ತಾನು ಹಿಂದುಮುಂದು ನೋಡಿಕೊಂಡು ತನ್ನೊಳಗೆ ತನ್ನನ್ನು ಹುಡುಕಿಕೊಳ್ಳಲಿಚ್ಛಿಸುತ್ತಾನೆ. ಈ ಸನ್ನಿವೇಶ ಓದುವಾಗ ಕರುಳ ಮಿಡಿದ ನನ್ನ ಕಂಬನಿಯಿಂದ ನನ್ನ ಚಾಳೀಸು ತೊಳೆಯಿತು! ಶ್ರೀರಾಮನು ಮಾನವತೆಯ ಮಹಾ ಸಾಕಾರಮೂರ್ತಿ ಎನ್ನುವುದನ್ನು ಎಲ್ಲಿಯೂ ಹೇಳದೆ ತಿಳಿದುಕೊಳ್ಳುವಂತೆ ಕಾವ್ಯ ರಚಿಸಿದ್ದಾರೆ. ಇದು ಕಾವ್ಯ ಶಕ್ತಿ!

ಕೈಕೇಯಿಯು ಭರತನಿಗೆ ದಶರಥ ತೀರಿಕೊಂಡ ಸುದ್ದಿ ತಿಳಿಸುತ್ತಾಳೆ.

ಆಗ ಭರತನಿಗೆ ತಂದೆ ತೀರಿದ ಬಗ್ಗೆ ದುಃಖ ಬರಲಿಲ್ಲ. ಜನ್ಮ ಕೊಟ್ಟ ತಾಯಿ ಕೈಕೇಯಿಯ ಮೇಲೆ ಕೋಪ ಬಂತು. ಆಗ ಆತ ಬೈದಿದ್ದು - ಪಿತೃ ವಾತ್ಸಲ್ಯದ ಅಪ್ರತಿಮ ಮಾತುಗಳು, ತಾಯಿಯೇ ದೇವರೆಂಬ ಸಂಕಲ್ಪ ಮೀರಿ ಆಡಿದ ಮಾತುಗಳು ಜನಜೀವನದ ಮೇಲೆ ಮಾಡುವ ಪರಿಣಾಮ ಅದ್ಭುತವಾದುದು. ಕಂಠಬಿಗಿದು ಓದುಗನ ದುಃಖ ಉಮ್ಮಳಿಸುತ್ತದೆ. ಮಾನವೀಯತೆಯ ಹಿನ್ನೆಲೆಯಲ್ಲಿ ನಾಯಿಗಿಂತಲೂ ತಾಯಿಯನ್ನು ಕಡೆಗಣಿಸಿರುವುದು ದುಷ್ಟ ಪ್ರವೃತ್ತಿಯ ತಾಯಂದಿರು ಸತ್ತರೂ ಸೂತಕ ಆಚರಿಸಬಾರದೆನ್ನುವ ರೀತಿಯಲ್ಲಿ ಇಂದಿನ ಜನಜೀವನಕ್ಕೂ ಅನ್ವಯಿಸುವಂತೆ ಭರತ ನೀತಿ ಸಾರಿಹನು. ಜನ್ಮಕೊಟ್ಟ ತಾಯಿಗಿಂತಲೂ ಮಾತೃಭೂಮಿಯೇ ಶ್ರೇಷ್ಠ ಎನ್ನುವಂಥ ಮಾತು ರೋಮಾಂಚನವಾದುದು.

'ತ್ಯಾಗ ಗರಗಸದಿಂದ ಭರತ ತುಂಡರಿಸಿದನು ಕುರುಡ ಮೋಹದ ವೃಕ್ಷ ಉರುಳಿತ್ತು; ಚಿಗುರಿತ್ತು ವಿವೇಕತರ ಕೈಕೇಯಿ ಹೃದಯದಲಿ.' ಕೈಕೇಯಿ ಪರಿವರ್ತನೆಯನ್ನು ಮಗ ಭರತ ತಂದೆ ದಶರಥನ ಹೆಣ ಕಾಣುವ ಮೊದಲೇ ಮಾಡಿ ತೋರಿಸುವನು.

'ಸೋದರರು ಇದ್ದೊಡೆ ಭರತನಂತಿರಬೇಕು' (೪೦ ಪ್ರ)

ಮೊಯಿಲಿಯವರ ಒಂದು ವಿಶೇಷ ಚಾತುರ್ಯವೆಂದರೆ, ಶ್ರೀರಾಮನು ವನವಾಸದಲ್ಲಿರುವಾಗ, ದಶರಥ ತೀರಿದ ನಂತರ ಭರತ ರಾಮನನ್ನು ಅರಸುತ್ತ ಹೋಗುವುದು ಮತ್ತು ವನವಾಸದ ಪೂರ್ವದಲ್ಲಿ ಪಟ್ಟಕ್ಕೇರುವುದನ್ನು ಶ್ರೀರಾಮ ನಿರಾಕರಿಸಿದಾಗ ರಾಮನ ಪಾದುಕೆಗಳನ್ನು ಕೇಳಿತಂದು ಪಟ್ಟಾಭಿಷೇಕ ಮಾಡುವುದು ವಾಸ್ತವಿಕತೆಗೆ ತೀರ ಹತ್ತಿರವಾಗುತ್ತದೆ - ಆಪ್ತವಾಗುತ್ತದೆ. ಭಾವನಾತ್ಮಕ ಮೌಢ್ಯಕ್ಕಿಂತಲೂ ಭಾವನಾತ್ಮಕ ವಾಸ್ತವಿಕತೆ ಇಲ್ಲಿ ಮುಖ್ಯವಾಗುವುದು ಕವಿಯ ಚಾಣಾಕ್ಷತೆ. ಭಾವನಾತ್ಮಕತೆಯು ವೈಚಾರಿಕತೆಯಲ್ಲಿಯೂ - ಮಾನವೀಯತೆಯಲ್ಲಿಯೂ ಇದ್ದುದೇ. ಭಾವನ್ಮಾತಕ ವೈಶಾಲ್ಯತೆಯನ್ನು ಬದುಕುವವರೆಗೆ ಇವೆಲ್ಲವೂ ತಿಳಿಯಲಾರವು ಎಂಬ ಸತ್ಯವನ್ನು ಕವಿಯ ಚಿಂತನೆಯ ಮೂಲಕ ತಿಳಿಯಲು ಸಾಧ್ಯವಾಗುತ್ತದೆ. ಮೌಢ್ಯಕ ಭಾವನಾತ್ಮಕತೆಯನ್ನು ದೂರೀಕರಿಸಿಕೊಂಡು ಮುಕ್ತನಾಗುವ ವಿಚಾರವು ಮೊಯಿಲಿಯವರಲ್ಲಿ ಹುಟ್ಟಿಕೊಂಡಿದ್ದು ನಮ್ಮ ತಿಳಿವಳಿಕೆಗೆ ಹೊಸ ಸೃಷ್ಟಿಯನ್ನು ಒದಗಿಸುತ್ತದೆ.

ಆನಂತರ ಜಾಬಾಲಿ ಮಹರ್ಷಿಯು ಶ್ರೀರಾಮನಿಗೆ ಉಪದೇಶ ನೀಡುತ್ತಾನೆ. ಗೊಡ್ಡು ಪುರಾಣಗಳ ತಲೆ ತುಂಬಿಕೊಂಡು ಕಷ್ಟಪಡಬೇಡ. ಬರುವ ಸುಖವನ್ನು ಅನುಭವಿಸಬೇಕೆಂದು ಹೇಳುವ ಕವಿಯ ಸ್ಪಷ್ಟ ಮಾತು ಅತ್ಯಮೂಲ್ಯವಾದದ್ದು.

**ಅರ್ಜುನ ತಾ. ಕೋರಟಕರ**
ವಿಜಾಪುರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು
ಜಮಖಂಡಿ - ೫೮೭ ೩೦೧

## ಅರಿತೆ



ಕನಸಿನ ಲೋಕದಲಿ
ಮೈಮರೆತೆ,
ಎಚ್ಚರವಾದಾಗ
ಕಳ್ಳತನವಾದುದ
ಅರಿತೆ,
ಸುಖ ನಿದ್ರೆಯು
ಅಪಾಯವೆಂಬುದು
ತಿಳಿಯಿತೆ ?

**ಆಶಾ ಹೆಗಡೆ ಲಿಂಗದಕೋಣ**
'ಸಿಂಧೂರ ನಿಲಯ', ಲಿಂಗದಕೋಣ, ನೀಲೆಕಣಿ
ಶಿರಸಿ - ೫೮೧ ೪೦೩, ಉ. ಕ.



# ಕರ್ನಾಟಕ ಮುಂಗಡ ಪತ್ರ ೨೦೦೩-೦೪ — ಒಂದು ವಿಮರ್ಶೆ

ಡಾ॥ ಆರ್. ಎಸ್. ದೇಶಪಾಂಡೆ    ಡಾ॥ ಡಿ. ವಿ. ಗೋಪಾಲಪ್ಪ

**ಯಾ**ವುದೇ ಮುಂಗಡ ಪತ್ರವನ್ನು ಸಾಧಾರಣ ಜನರಿರಲಿ, ಅರ್ಥಶಾಸ್ತ್ರಜ್ಞರೂ ಅಪಾರ್ಥಮಾಡಿಕೊಳ್ಳುವುದೇ ವಾಡಿಕೆ. ಆರ್ಥಿಕ ವ್ಯವಸ್ಥೆಯ ಮೇಲೆ ಮುಂಗಡ ಪತ್ರದ ಪ್ರಭಾವ ವಿಪರೀತವೆಂಬ ಭಾವನೆ ಇದೆ. ಆದರೆ ಅಷ್ಟೇ ಅಥವಾ ಅದಕ್ಕಿಂತಲೂ ಹೆಚ್ಚು ಪ್ರಭಾವ ಬೀರುವ ಮಾರುಕಟ್ಟೆಯ ಶಕ್ತಿಗಳೂ, ಇತರ ಅಂಶಗಳೂ ವಾಸ್ತವದಲ್ಲಿ ಉಂಟು ಎಂದು ತಿಳಿಯುವುದು ಬಹುಮುಖ್ಯ. ಆರ್ಥಿಕ ಬೆಳವಣಿಗೆಯ ನಿಟ್ಟನ್ನು ನಿರ್ಧರಿಸುವ ರೀತಿ ನೀತಿಗಳು, ಕಾಯಿದೆ ಕಟ್ಟಳೆಗಳು ಈಗಾಗಲೇ ರಚಿತವಾಗಿದ್ದು ಮುಂಗಡ ಪತ್ರ ಈ ನೀತಿಗಳ ಅನುಸರಣೆಯನ್ನು ಹೇಗೆ ಅಳವಡಿಸಿಕೊಳ್ಳುತ್ತದೆ ಎಂದು ಗಮನಿಸುವುದು ಅತ್ಯವಶ್ಯಕ. ಅರ್ಥಶಾಸ್ತ್ರೀಯವಾಗಿ ಮುಂಗಡಪತ್ರದ ನಾಲ್ಕು ಉದ್ದೇಶಗಳನ್ನು ಇಲ್ಲಿ ಗುರುತಿಸಬಹುದು. ಲಭ್ಯವಿರುವ ಹಣದ ರಾಶಿಯನ್ನು ವಿವಿಧ ಖಾತೆಗಳ ಆದ್ಯತೆಯನ್ನು ಗಮನಿಸಿ ಹೇಗೆ ಹಂಚಲಾಗಿದೆ ಎಂಬುದು ಒಂದು. ಹಿಂದಿನ ವರ್ಷದ ಮುಂಗಡ ಪತ್ರದ ಸಾಧನೆ-ವೈಫಲ್ಯಗಳನ್ನು ಗುರುತಿಸಿ ಈ ಮುಂಗಡ ಪತ್ರದಲ್ಲಿ ಸೂಕ್ತ ಬದಲಾವಣೆಗಳನ್ನು ಮಾಡಲಾಗಿದೆಯೇ ಎಂಬುದು ಮತ್ತೊಂದು. ಒಟ್ಟಾರೆ, ಅರ್ಥನೀತಿಯನ್ನು ಈ ಬಜೆಟ್ ಎಷ್ಟರ ಮಟ್ಟಿಗೆ ಗಮನದಲ್ಲಿಟ್ಟುಕೊಂಡಿದೆ ಎಂಬುದು ಮೂರನೆಯ ಅಂಶ. ಅಂತಿಮವಾಗಿ ಆಡಳಿತ ಪಕ್ಷದ ರಾಜಕೀಯ ಚಿಂತನೆ ಮತ್ತು ಅಭಿವೃದ್ಧಿ ಕುರಿತ ನೀತಿಯನ್ನು ಮುಂಗಡ ಪತ್ರ ಎಷ್ಟು ಫಲಕಾರಿಯಾಗಿ ಪ್ರತಿಬಿಂಬಿಸುತ್ತದೆ ಎಂಬುದು ಮುಖ್ಯವಾಗುತ್ತದೆ. ಈ ನಾಲ್ಕೂ ನಿಟ್ಟಿನಿಂದ ಮುಂಗಡಪತ್ರದ ವಿಮರ್ಶೆ ನಡೆದರೆ ಅದು ಸಮರ್ಥವೆನಿಸುತ್ತದೆ.

ಮುಖ್ಯಮಂತ್ರಿಯವರು ತಾವು ಹಣಕಾಸುಮಂತ್ರಿಯೂ ಆಗಿ ಈಗ ನಾಲ್ಕನೇ ಬಾರಿ ಬಜೆಟ್ ಮಂಡಿಸಿದ್ದಾರೆ. ಪ್ರಥಮ ಬಜೆಟ್ ಕಾಲಕ್ಕೆ ರಾಜ್ಯದ ಏಳಿಗೆಗಾಗಿ ಸಮರ್ಪಕ ಆರ್ಥಿಕ ಕ್ಷೇತ್ರ ನಿರ್ವಹಣೆ ತಮ್ಮ ಉದ್ದೇಶವೆಂದು ಅವರು ಸಾರಿದ್ದರು. ಆದರೂ ಕೃಷ್ಣ ಅವರು ಕೇವಲ ಐಟಿ ಮಂತ್ರಿ (ಮಾಹಿತಿ ತಂತ್ರಜ್ಞಾನ) ಎಂಬ ನಿಂದೆಗೂ ಒಳಗಾಗಿದ್ದಾರೆ. ಈ ನಿಂದೆ ಅಷ್ಟೇನೂ ಸರಿಯಾದುದಲ್ಲ. ಅವರು ಒಟ್ಟಾರೆ ಈ ಖಾತೆಯನ್ನು ಸಮರ್ಪಕವಾಗಿ ನಿರ್ವಹಿಸಿದ್ದಾರೆಂದೇ ಹೇಳಬಹುದು. ಹಾಗಿದ್ದೂ ಅವರ ಮಹತ್ವಾಕಾಂಕ್ಷೆಗಳನ್ನು ಎಷ್ಟರ ಮಟ್ಟಿಗೆ ಸಾಧಿಸಿದ್ದಾರೆ ಎನ್ನುವುದು ಮುಖ್ಯ ಪ್ರಶ್ನೆಯಾಗುತ್ತದೆ. ತೆರಿಗೆ ಪದ್ಧತಿಯ ವೈವಿಧ್ಯತೆಯ ತೊಡಕುಗಳನ್ನು ನಿವಾರಿಸಿ, ಸಂಘಟಿತ ಸುಧಾರಣೆ ತರುವುದು, ಕೃಷಿಯನ್ನೇ ಒಟ್ಟಾರೆ ಆರ್ಥಿಕತೆಯ ಬೆಳವಣಿಗೆಯನ್ನು ಪ್ರಚೋದಿಸುವ ಮುಖ್ಯ ಆಧಾರವೆಂಬ ರೀತಿ ಆ ಕ್ಷೇತ್ರದ ಪರಿವರ್ತನೆ, ಮಾಹಿತಿ ತಂತ್ರಜ್ಞಾನವನ್ನು ಅಳವಡಿಸಿಕೊಂಡು ಸರಳೀಕೃತವೂ ಸಮರ್ಥವೂ ಆದ ಆರ್ಥಿಕ ವ್ಯವಸ್ಥೆಯ ಆಡಳಿತವನ್ನು ನೆಲೆಗೊಳಿಸುವುದು, ಇವು ಅವರ ಮುಖ್ಯವಾದ ಮಹತ್ವಾಕಾಂಕ್ಷೆಗಳೆನ್ನಬಹುದು. ನೆರೆ ರಾಜ್ಯದ ಮುಖ್ಯಮಂತ್ರಿ ಚಂದ್ರಬಾಬು ನಾಯ್ಡುರವರೊಡನೆ ಸ್ಪರ್ಧೆಗೆ ಇಳಿದಂತೆ ಎಷ್ಟೋ ಬಾರಿ ಅನಿಸಬಹುದಾದರೂ, ನಮ್ಮ ಮುಖ್ಯಮಂತ್ರಿಗಳು ಅವರು ಅನುಸರಿಸಿದ ಮಾರ್ಗಗಳನ್ನು ಅತಿ ಎನಿಸದೆ, ಎಷ್ಟು ಬೇಕೋ ಅಷ್ಟೇ ಅಳವಡಿಸಿಕೊಂಡು ಮುಂದುವರಿಯುತ್ತಿದ್ದಾರೆ ಎನ್ನಬಹುದು. ಬಹುಶಃ ಈ ಸ್ಪರ್ಧೆ ಬೆಳವಣಿಗೆಯ ದೃಷ್ಟಿಯಿಂದ ಸ್ವಾಗತಾರ್ಹವೇ.

೨೦೦೩-೦೪ರ ನಮ್ಮ ರಾಜ್ಯ ಮುಂಗಡ ಪತ್ರ ಬೆಳವಣಿಗೆಯ ಅಂಶಗಳ ಜತೆಗೇ ಜನಪ್ರಿಯ ಅಂಶಗಳನ್ನೂ ಒಳಗೊಂಡಿದೆ. ರಾಜಕೀಯವಾಗಿ ಚುನಾವಣೆಯ ಅಂಶವನ್ನು ಒಂದಿಷ್ಟು ಗಮನದಲ್ಲಿಡುವುದು ಅನಿವಾರ್ಯವೆಂದು ಮುಖ್ಯಮಂತ್ರಿಗಳು ಹೇಳಿಕೊಂಡಿದ್ದಾರೆ. ಅವರು ಮುಖ್ಯಮಂತ್ರಿಯಾಗಿ, ಅರ್ಥಮಂತ್ರಿಯಾಗಿ ಅಧಿಕಾರ ವಹಿಸಿಕೊಂಡಾಗಿನ ಅರ್ಥವ್ಯವಸ್ಥೆಯ ಅನೇಕ ದೌರ್ಬಲ್ಯಗಳು ಅವರ ಹಲವು ಮುಂಗಡ ಪತ್ರಗಳ ಸತತ ಪ್ರಯತ್ನದಿಂದ ಬಹುಮಟ್ಟಿಗೆ ಸುಧಾರಿಸಿವೆ ಎನ್ನಬಹುದು. ಈಗಲೂ ಅರ್ಥವ್ಯವಸ್ಥೆಯಲ್ಲಿ ಹಲವಾರು ಸಮಸ್ಯೆಗಳಿದ್ದಾಗ್ಯೂ, ಅವು ಪರಿಹಾರವಾದೀತೆಂಬ ಆಶಯವನ್ನು ನಾವು ವ್ಯಕ್ತಪಡಿಸಲು ಸಕಾರಣಗಳಿವೆ.

## ರಾಜ್ಯದ ಆರ್ಥಿಕ ಅಭಿವೃದ್ಧಿ

ಕಳೆದ ವರ್ಷ ಮಳೆಯ ಕೊರತೆಯಿಂದ ತೊಂದರೆಯಾಗಿದ್ದರೂ, ಅಲ್ಲಲ್ಲಿ ಜರುಗಿರುವ ಅಭಿವೃದ್ಧಿಯನ್ನು ಗುರುತಿಸಬಹುದು. ಕೈಗಾರಿಕಾ ಕ್ಷೇತ್ರ ಶೇ. ೮.೯ ಮತ್ತು ಸೇವಾ ಕ್ಷೇತ್ರ ಶೇ. ೩೫ ರಷ್ಟು ಪ್ರಗತಿ ಸಾಧಿಸಿ, ಕೃಷಿ ಕ್ಷೇತ್ರದಲ್ಲಿ ಶೇ. ೩.೬ರಷ್ಟು ಕುಸಿತವಿದ್ದರೂ, ಒಟ್ಟಾರೆ ಪ್ರಗತಿ ಸಾಧಿಸಲು ಇವು ಸಹಕಾರಿಯಾಗಿವೆ. ಬರುವ ಹಣಕಾಸು ವರ್ಷದಲ್ಲಿ ಒಟ್ಟಾರೆ ಅಭಿವೃದ್ಧಿಯನ್ನು ಶೇ. ೮ರಷ್ಟಾಗಬಹುದೆಂದು ಬಜೆಟ್ ನಿರೀಕ್ಷಿಸುತ್ತದೆ. ಆದರೆ ಇದಕ್ಕೆ ಬೇಕಾದ ಸಂಪನ್ಮೂಲ ಹೇಗೆ ದೊರಕುತ್ತದೆಂಬ ಸ್ಪಷ್ಟ ಸೂಚನೆಯೇನೂ ಇಲ್ಲ. ಇದಕ್ಕೆ ಅಗತ್ಯವಾದ ತೆರಿಗೆ ವಸೂಲಿ ಕ್ರಮವೇನೋ ಸ್ವಲ್ಪಮಟ್ಟಿಗೆ ಇಂಗಿತವಾಗಿದೆ. ಕಳೆದ ಸಾಲಿನ ಮುಂಗಡಪತ್ರದಲ್ಲಿ ಹಣದ ಕೊರತೆ ರೂ. ೫೮೩೯ ಕೋಟಿ ಎಂದು ಅಂದಾಜು ಮಾಡಿದ್ದು ಇದು ಈಗ ೫೬೩.೭ ಕೋಟಿಯೆಂದು ಪರಿಷ್ಕಾರವಾಗಿದೆ. ಇದೇನೋ ಸ್ವಾಗತಾರ್ಹ. ಆದರೆ ಈ ವರ್ಷದ ಕೊರತೆಯನ್ನು ರೂ. ೬೦೩೨.೭೯ ಕೋಟಿಯೆಂದು ಅಂದಾಜು ಮಾಡಿರುವುದು ಒಂದು ಗಂಭೀರ ವಿಷಯವಾಗಿದೆ. ಈ ಕೊರತೆಯನ್ನು ತುಂಬಿಕೊಳ್ಳುವುದು ಹೇಗೆ ಎಂದು ಅರ್ಥಮಂತ್ರಿಯವರು ಸೂಕ್ತವಾದ ಮಾರ್ಗೋಪಾಯವನ್ನು ಹುಡುಕಬೇಕಾಗುತ್ತದೆ. ಇದು ಒಂದು ರೀತಿ ತೆರಿಗೆ ಪದ್ಧತಿಯ ದೋಷವಾಗಿದ್ದು, ಮಹಾರಾಷ್ಟ್ರ ಮತ್ತು ಆಂಧ್ರಪ್ರದೇಶಗಳಂತೆ ನಾವೂ ತೆರಿಗೆ ಸಂಗ್ರಹಣೆಯಲ್ಲಿ ವಿಫಲರಾಗಬೇಕಾಗುತ್ತದೆ.

## ರಾಜಸ್ವ ಸಂಗ್ರಹಣೆಯಲ್ಲಿ ಬೆಳವಣಿಗೆಯ ಅಂಶಗಳು

ಕಳೆದ ವರ್ಷ ರಾಜಸ್ವ ಸಂಗ್ರಹಣೆಯಲ್ಲಿ ಶೇ. ೫.೫ರಷ್ಟು ಹೆಚ್ಚಳವಾಗಿದೆ. ಈ ವರ್ಷ ಇದು ಕಳೆದ ಸಾಲಿನ ಶೇ. ೬.೮೮ರಷ್ಟು ಹೆಚ್ಚುವುದೆಂದು ನಿರೀಕ್ಷಿಸಲಾಗಿದೆ. ರಾಜಸ್ವ ವೆಚ್ಚದಲ್ಲೂ ಶೇ. ೨.೭ರಷ್ಟು ಹೆಚ್ಚಳದ ಇಂಗಿತವಿದೆ. ಇದು ಕಳೆದ ಸಾಲಿನ ಪರಿಷ್ಕೃತ ರಾಜಸ್ವ ವೆಚ್ಚದ ಅಂದಾಜಿಗಿಂತ ಶೇ. ೭.೮೩ರಷ್ಟು ಆಗಬಹುದೆಂಬ ಅನುಮಾನವಿದ್ದು, ವಾಸ್ತವದಲ್ಲಿ ಇದು ಒಂದು ಆತಂಕಕಾರಿಯಾದ ಬೆಳವಣಿಗೆ. ಕಳೆದ ವರ್ಷವೂ ಮೊದಲ ಅಂದಾಜಿಗಿಂತ ಈ ಬಾಬಿನ ಹಣದ ಕೊರತೆ ೨೬೦೫.೧೯ ಕೋಟಿ ರೂಗಳಿಂದ, ಪರಿಷ್ಕೃತವಾಗಿ ೩೪೦೫.೪೭ ಕೋಟಿ ರೂಪಾಯಿಗಳಷ್ಟು ಏರಿದೆ. ಹೀಗೆ ರಾಜಸ್ವ ಆದಾಯಕ್ಕಿಂತ ವೆಚ್ಚ ಹೆಚ್ಚಾಗಿದ್ದು, ಇದು ಈಗ ಏರುವ ದರ ಶೇ. ೩೦.೭೨ರಷ್ಟಿದೆ. ಈ ಗಂಭೀರ ಸಮಸ್ಯೆಯ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನದ ಅಗತ್ಯವಿದೆ.

ಮುಂಗಡ ಪತ್ರದಲ್ಲಿನ ಆದಾಯ, ವೆಚ್ಚ ಮತ್ತು ಕೊರತೆಗಳನ್ನು ಸೂಚಿಸುವ ಈ ಕೋಷ್ಟಕ ಇಂಥ ಅಧ್ಯಯನಕ್ಕೆ ಸಹಾಯವಾಗಬಹುದು (ರೂ. ಕೋಟಿಗಳಲ್ಲಿ)

| ವಿವರಗಳು | ಮುಂಗಡ ಪತ್ರದ ಅಂದಾಜುಗಳು | ಪರಿಷ್ಕೃತ ಅಂದಾಜು | ಮುಂಗಡ ಪತ್ರದ ಅಂದಾಜುಗಳು |
|---|---|---|---|
| | ೨೦೦೨-೦೩ | ೨೦೦೨-೦೩ | ೨೦೦೩-೦೪ |
| ಆದಾಯ | ೧೮೭೦೮.೪೫ | ೧೬೯೭೯.೩೪ | ೧೯೮೪೫.೧೭ |
| ವೆಚ್ಚ | ೨೧೪೦೩.೬೪ | ೨೦೩೮೪.೮೧ | ೨೧೯೮೦.೪೯ |
| ಕೊರತೆ | -೨೬೦೫.೧೯ | -೩೪೦೫.೪೭ | -೨೧೩೫.೩೨ |

ಆದಾಯವನ್ನು ಪ್ರಥಮದಲ್ಲಿ ಹೆಚ್ಚಾಗಿ ನಿರೀಕ್ಷಿಸುವುದು, ವರ್ಷಾಂತ್ಯದಲ್ಲಿ ಪರಿಷ್ಕೃತವಾದಾಗ ಅದು ಅದಕ್ಕಿಂತ ಕಡಿಮೆಯಾಗುವುದು, ಹಾಗೆಯೇ ವೆಚ್ಚವನ್ನು ಹೆಚ್ಚಾಗಿ ಪ್ರಥಮದಲ್ಲಿ ತೋರಿಸುವುದು, ಪರಿಷ್ಕೃತವಾದಾಗ ಅವು ಕೆಲವೊಮ್ಮೆ ಹೆಚ್ಚಾಗುತ್ತಿದ್ದದ್ದು, ಈಗ ಅದಕ್ಕಿಂತ ಕಡಿಮೆಯಾಗಿ ಕಾಣುವುದು. ಹಾಗಿದ್ದೂ, ಒಟ್ಟಾರೆ ಕೊರತೆ ಹೆಚ್ಚುತ್ತಲೇ

ಇರುವ ಈ ಪ್ರವೃತ್ತಿಯನ್ನು ಹತ್ತಿಕ್ಕಲು ಸಾಧ್ಯವಾಗಿಲ್ಲ.

ರೈತರಿಗೆ ಮತ್ತು ಅಭಿವೃದ್ಧಿ ಹೊಂದಿರುವ ಪ್ರದೇಶಗಳಿಗೆ ಈ ಪ್ರಕ್ರಿಯೆ ಮತ್ತಷ್ಟು ನೆರವು ತರುತ್ತದೆ ಎಂದು ಹೇಳಬಹುದು. ಆರೋಗ್ಯ ಜೀವ ವಿಮೆ (ಯಶಸ್ವಿನಿ ಯೋಜನೆಯ ಅಡಿಯಲ್ಲಿ) ಒದಗಿಸುವುದು ರಾಜ್ಯದ ೧೦ ಲಕ್ಷ ರೈತರಿಗೆ ಸಹಾಯಕ ಸಂಘಗಳಲ್ಲಿ ಇರುವವರಿಗೆ ಮಾತ್ರ ಅನ್ವಯವಾಗುತ್ತದೆ. ಆದರೆ ಬಡ ರೈತರಿಗೆ ಅನ್ವಯವಾಗುವುದಿಲ್ಲ. ಪ್ರೊ|| ವೀರೇಶ್ ನೇತೃತ್ವದಲ್ಲಿ ಒಂದು ಕಮಿಟಿ ನಿಯೋಜಿಸಲಾಗಿತ್ತು. ಇವರು ರಾಜ್ಯದ ಕಾರ್ಮಿಕರ ಜೀವ ವಿಮೆ ಮಾದರಿಯ ಕೆಲವೊಂದು ಅಂಶಗಳನ್ನು ರೈತರಿಗೆ ಅನ್ವಯ ಮಾಡುವಂತೆ ಸರ್ಕಾರಕ್ಕೆ ತಿಳಿಸಿದ್ದರು. ಆದರೆ ಈ ಅಂಶಗಳನ್ನು ಕಾರ್ಯಗತಗೊಳಿಸುವಲ್ಲಿ ಸರ್ಕಾರ ವಿಫಲವಾಗಿದೆ. ಅದೇ ರೀತಿಯಲ್ಲಿ ಈ ಆರೋಗ್ಯ ವಿಮೆ ಕೂಡ ವಿಫಲಗೊಳ್ಳುತ್ತದೆ ಎಂದು ಹೇಳಬಹುದು. ಒಟ್ಟಿನಲ್ಲಿ ಹೇಳಬೇಕೆಂದರೆ ಮುಂಗಡ ಪತ್ರದಲ್ಲಿ ಅಭಿವೃದ್ಧಿ ಹೊಂದಿರುವ ರೈತರಿಗೆ ಬಡ ರೈತರಿಗಿಂತ ಅನುಕೂಲವಾಗುವುದರಲ್ಲಿ ಸಂದೇಹವಿಲ್ಲ. ಹಾಗಾಗಿ ಬಡ ರೈತರು ಅದೇ ಮಟ್ಟದಲ್ಲಿ ಉಳಿಯುತ್ತಾರೆಂಬ ತೀರ್ಮಾನಕ್ಕೆ ಬರಬಹುದಾಗಿದೆ.

ವಿದ್ಯುತ್ತಿನ ಸಮಸ್ಯೆ ನಮಗೆ ಒಂದು ಬಗೆಹರಿಯಲಾಗದ ಸಮಸ್ಯೆಯಾಗಿ ಪರಿಣಮಿಸಿದೆ. ಹೆಚ್ಚು ಕಡಿಮೆ ಬಜೆಟ್‌ನ ಕೊರತೆಯ ಮೊತ್ತವೂ ವಿದ್ಯುತ್ ಕ್ಷೇತ್ರದ ಕೊರತೆಯೂ ಸಮವಾಗುತ್ತದೆ. ವಿದ್ಯುತ್ ಕ್ಷೇತ್ರದ ಹಣಕಾಸಿನ ಕೊರತೆಗಳಲ್ಲಿ ಅದರದೇ ಆದ ಕಾರಣಗಳಿವೆ. ಆದರೂ ಅದರ ಎಲ್ಲ ಸಮಸ್ಯೆಗಳಿಗೂ ರೈತನಿಗೆ ಒದಗಿಸುವ ವಿದ್ಯುತ್ ಪ್ರಮಾಣವೇ ಕಾರಣವೆಂದು ಬಣ್ಣಿಸುತ್ತಾರೆ. ವಿದ್ಯುತ್ ವಲಯದ ನಿರ್ವಹಣೆಯಲ್ಲಿರುವ ಏರುಪೇರುಗಳನ್ನು ಸರಿಪಡಿಸುವ ಉದ್ದೇಶದಿಂದ ಮಂತ್ರಿಗಳು ಬಜೆಟ್‌ನಲ್ಲಿ ಕೆಲವು ಯೋಜನೆಗಳನ್ನು ಮುಂದಿಟ್ಟಿದ್ದಾರೆ. ಅವುಗಳೆಂದರೆ ವಿದ್ಯುತ್ ಶುಲ್ಕಗಳನ್ನು ಪರಿಣಾಮಕಾರಿಯಾಗಿ ವಸೂಲು ಮಾಡುವುದು, ತಾಂತ್ರಿಕ ಕಾರಣಗಳಿಂದ ಪ್ರಸಾರದ ಹಾದಿಯಲ್ಲೇ ಸೋರಿಹೋಗುವುದನ್ನು ತಡೆದು ಉತ್ತಮಪಡಿಸಲು ತಾಂತ್ರಿಕ ಪರಿಹಾರಗಳನ್ನು ಕಾರ್ಯಗತಗೊಳಿಸುವುದು, ವಾಣಿಜ್ಯವಲಯದಲ್ಲಿನ ಆದಾಯ ಸೋರಿಕೆಗಳನ್ನು ತಡೆಗಟ್ಟುವುದು, ವಿದ್ಯುತ್ ಮೀಟರುಗಳನ್ನು ಎಲ್ಲ ಗ್ರಾಹಕರಿಗೂ ಅಳವಡಿಸುವುದು, ಹಾಗೂ ಖಾಸಗೀಕರಣವನ್ನು ಪ್ರೋತ್ಸಾಹಿಸುವುದು. ಮತ್ತೊಂದು ಆಸಕ್ತಿ ಹುಟ್ಟಿಸುವ ಪ್ರಯತ್ನವೆಂದರೆ ಹಣವಸೂಲಿಯಲ್ಲಿನ ಸಮರ್ಥತೆಯನ್ನು ಗಮನಿಸಿ ಅದಕ್ಕನುಗುಣವಾಗಿ ಅನುದಾನವನ್ನು ತಾಳೆಹಾಕುವುದು. ಈ ಎಲ್ಲಾ ಸುಧಾರಣೆಗಳಿಂದ ಸಾಕಷ್ಟು ಅಪೇಕ್ಷಣೀಯ ಪರಿಣಾಮಗಳನ್ನು ನಿರೀಕ್ಷಿಸಲಾಗಿದೆ. ಇವುಗಳನ್ನು ಎಷ್ಟು ಸಮರ್ಥವಾಗಿ ಕಾರ್ಯಗತಗೊಳಿಸಲಾಗುವುದೆಂದು ಈಗಲೇ ಹೇಳುವಂತಿಲ್ಲ. ಮುಖ್ಯಮಂತ್ರಿಯವರು ''ಕೊಳ್ಳುವವ-ಕೊಡುವವ'' ಮಾದರಿಯ ಅನುಷ್ಠಾನದಿಂದ ನಷ್ಟ ಕಮ್ಮಿಯಾಗುತ್ತದೆಂದು ಹೇಳುತ್ತಾರಾದರೂ ಈ ಮಾದರಿಯ ಸ್ವರೂಪವೇನೆಂದು ಇನ್ನೂ ಎಲ್ಲೂ ಸ್ಪಷ್ಟಪಡಿಸದೆ ಈ ಹೇಳಿಕೆ ಗೊಂದಲಕ್ಕೆ ಎಡೆಮಾಡಿಕೊಟ್ಟಿದೆ. ಇದಾವುದೋ ವಿಶ್ವಬ್ಯಾಂಕಿನವರ ಪದಪ್ರಯೋಗವಿದ್ದಂತಿದೆ. ಖಾಸಗೀಕರಣ ಮುಖ್ಯಮಂತ್ರಿಯವರ ಕನಸು. ಆದರೆ ರೈತರಿಗೆ ಇದು ಸಿಂಹಸ್ವಪ್ನ. ಇದರ ನಡುವಿನ ರಾಜಕೀಯದ ಸಮಸ್ಯೆ ಅಷ್ಟು ಸುಲಭದಲ್ಲಿ ಬಗೆಹರಿಯುವುದಿಲ್ಲ. ಒಂದು ಸ್ವಾರಸ್ಯವಾದ ಯೋಜನೆಯೆಂದರೆ ಯಾವ ರೈತರು ವಿದ್ಯುತ್‌ಶುಲ್ಕವನ್ನು ಸಂಪೂರ್ಣವಾಗಿ ಪಾವತಿ ಮಾಡುತ್ತಾರೋ ಅಂಥವರಿಗೆ ಬಡ್ಡಿ ರಿಯಾಯ್ತಿಯನ್ನು ಘೋಷಿಸಿದ್ದಾರೆ. ಇದರಿಂದ ರೈತರಿಗೆ ಸುಮಾರು ೨೮೫ ಕೋಟಿ ರೂ.ಗಳು ದಕ್ಕುವುದೆಂದು ಇಂಗಿತವಾಗಿದೆ. ಈ ಎಲ್ಲಾ ಸುಧಾರಣೆಗಳೂ ವಿದ್ಯುತ್ ವಲಯದ ಮೇಲೆ ಆರೋಗ್ಯಕರ ಪರಿಣಾಮ ಬೀರಬಹುದು. ಆದರೆ ಮುಖ್ಯವಾದ ಸಮಸ್ಯೆ ಎಂದರೆ ದಿನೇ ದಿನೇ ಹೆಚ್ಚುತ್ತಿರುವ ಉತ್ಪಾದನಾ ವೆಚ್ಚವನ್ನು ಹೇಗೆ ತಾಂತ್ರಿಕವಾಗಿ ಕಡಿಮೆ ಮಾಡಬೇಕು ಎಂಬುದು. ಜೊತೆಗೆ ಸಾಮಾಜಿಕ ಒತ್ತಡಗಳಿಂದ ಆಗುವ ನಷ್ಟವನ್ನು ಉತ್ಪಾದನಾ ವೆಚ್ಚವೆಂದು ಪರಿಗಣಿಸುವ ತೀರ್ಮಾನವನ್ನು ತೆಗೆದುಕೊಳ್ಳಬೇಕಾಗುತ್ತದೆ.

**ಪ್ರಾಂತೀಯ ಅಸಮತೋಲನ**

ನಮ್ಮೆಲ್ಲರಿಗೂ ತಿಳಿದಿರುವಂತೆ ಡಾ|| ಡಿ. ಎಂ. ನಂಜುಂಡಪ್ಪನವರ ನೇತೃತ್ವದಲ್ಲಿ ಹೈ ಪವರ್ ಕಮಿಟಿಯನ್ನು ನೇಮಕ ಮಾಡಲಾಗಿತ್ತು. ಸಮಿತಿಯು ತನ್ನ ವರದಿಯನ್ನು ಸರ್ಕಾರಕ್ಕೆ ಒದಗಿಸಿದೆ. ಇದರ ಪ್ರಕಾರ ಉತ್ತರ ಕರ್ನಾಟಕದಲ್ಲಿ ಪ್ರಾಂತೀಯ ಅಸಮತೋಲನ ತುಂಬಾ ಹೆಚ್ಚಾಗಿದೆ. ಆದ್ದರಿಂದ ಮುಂಗಡ ಪತ್ರದಲ್ಲಿ ಈ ಸಮಸ್ಯೆಗೆ ಒತ್ತು ಕೊಡುತ್ತಾರೆಂದು ಭಾವಿಸಲಾಗಿತ್ತು. ಎಷ್ಟೇ ಸೂಕ್ಷ್ಮವಾಗಿ ಹಾಗೂ ಕೂಲಂಕುಶವಾಗಿ ಮುಂಗಡ ಪತ್ರವನ್ನು ಅಭ್ಯಸಿಸಿದರೂ ಕಂಡುಬರುವುದು ಅಷ್ಟು ಪ್ರಾಮುಖ್ಯವಲ್ಲದ ಕೆಲವು ಸುಧಾರಣೆಗಳನ್ನು ಮಾತ್ರ ಈ ನಿಟ್ಟಿನಲ್ಲಿ ಅಳವಡಿಸಲಾಗಿದೆ ಎಂದು. ಮುಖ್ಯ ಸುಧಾರಣೆಗಳೆಂದರೆ, ಬೀದರ್‌ನಲ್ಲಿ ಪಶುವೈದ್ಯಕೀಯ ವಿದ್ಯಾ ಸಂಸ್ಥೆಯನ್ನು ಸ್ಥಾಪಿಸುವುದು, ಬಿಜಾಪುರದಲ್ಲಿ ಮಹಿಳಾ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸುವುದು, ಹುಬ್ಬಳ್ಳಿಯಲ್ಲಿ ಪ್ರತ್ಯೇಕವಾದ ಸಾರ್ವಜನಿಕ ಶಿಕ್ಷಣದ ಆಯುಕ್ತರವರ ಕಛೇರಿ ಸ್ಥಾಪಿಸುವುದು ಮತ್ತು ಉತ್ತರ ಕರ್ನಾಟಕಕ್ಕೆ ನೀರು ಸರಬರಾಜು ಮಂಡಳಿಯನ್ನು ನೀಡುವುದು. ಇವು ಕೆಲವೊಂದು ಆಡಳಿತಾತ್ಮಕ ಸುಧಾರಣೆಗಳಾಗಿವೆಯೇ ಹೊರತು ಉತ್ಪಾದನೆ ಮಾಡಿ ಅಸಮತೋಲನವನ್ನು ಸರಿಪಡಿಸುವ, ಹಣ ಹೂಡುವ ಪ್ರಯತ್ನಗಳಲ್ಲವೆಂದು ಹೇಳಬಹುದು. ಪ್ರಾಂತೀಯ ಅಸಮ ತೋಲನ ಒಂದು ಟೈಂ ಬಾಂಬ್ ಇದ್ದ ಹಾಗೆ. ಅದು ಯಾವಾಗ ಸ್ಫೋಟಿಸುವುದು ಎಂದು ಹೇಳಲಿಕ್ಕೆ ಬರುವುದಿಲ್ಲ. ಆದ್ದರಿಂದ ಸರ್ಕಾರವು ಇದಕ್ಕೆ ಸೂಕ್ತ ಗಮನ ನೀಡಬೇಕು ಮತ್ತು ಡಾ|| ನಂಜುಂಡಪ್ಪನವರ ವರದಿಯನ್ನು ಎತ್ತಿ ಹಿಡಿಯಬೇಕು ಎಂಬುದು ಮುಖ್ಯವಾದ ಅಂಶ.

ಮುಖ್ಯಮಂತ್ರಿಯವರು ತಮಗೆ ಪ್ರಿಯವಾದ ಐಟಿ ವಲಯವನ್ನು ಈ ಮುಂಗಡ ಪತ್ರದಲ್ಲಿ ಅಲಕ್ಷಿಸಿದ್ದಾರೆ. ಈ ವಲಯಗಳಲ್ಲಿ ಬಂಡವಾಳ ಹೂಡಿರುವ ವಾಣಿಜ್ಯೋದ್ಯಮಿಗಳಿಗೆ ಯಾವುದೇ ರೀತಿಯ ಹೊಸ ಸಹಾಯವನ್ನು ಘೋಷಿಸಿಲ್ಲ. ಸಣ್ಣ ಮತ್ತು ಅತಿ ಸಣ್ಣ ಕೈಗಾರಿಕೆಗಳಿಗೆ ಮುಖ್ಯ ಮಂತ್ರಿಯವರು ಹೆಚ್ಚಿನ ಗಮನ ಕೊಟ್ಟ ಹಾಗೆ ಕಾಣಿಸುವುದಿಲ್ಲ. ಹಳ್ಳಿ ಮತ್ತು ಪಟ್ಟಣಗಳಲ್ಲಿ ಈ ಕೈಗಾರಿಕೆಗಳು ಸ್ಥಾಪನೆಯಾಗಿದ್ದು ಸಹಾಯಧನ ಮತ್ತು ಬೆಂಬಲ ಪಡೆಯದೆ ಇವು ಸೊರಗಿ ನಿರುದ್ಯೋಗ ಸಮಸ್ಯೆ ಮತ್ತೂ ಉಲ್ಬಣಗೊಳ್ಳುತ್ತದೆ. ಈ ವರ್ಷ ರೈತರ ಹಿತಾಸಕ್ತಿಗಳಿಗೆ ಒತ್ತು ಕೊಟ್ಟು ಕೈಗಾರಿಕೀಕರಣವನ್ನು ಅಲಕ್ಷಿಸಿದ್ದಾರೆಂದು ಹೇಳಬಹುದು.

ಮುಖ್ಯಮಂತ್ರಿಯವರು ತುಂಬಾ ಶ್ರಮಿಸಿ ಈಗಿರುವ ಬರಗಾಲ, ಕೃಷಿ ಬೆಳವಣಿಗೆ ಕುಂಠಿತವಾಗಿರುವುದು, ಆದಾಯ ಕಡಿಮೆಯಾಗಿರುವ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ತಮ್ಮ ಮುಂಗಡ ಪತ್ರವನ್ನು ಮಂಡಿಸಿದ್ದಾರೆ. ಆದ್ದರಿಂದ ಈ ಮುಂಗಡ ಪತ್ರ ಪ್ರಸಕ್ತ ಸಾಲಿನ ವಿಶಿಷ್ಟ ಸನ್ನಿವೇಶದಲ್ಲಿ ಸಮಂಜಸವಾಗಿದೆ ಎಂದು ಹೇಳಬಹುದು. ೨೦೦೩-೦೪ನೇ ಸಾಲಿನ ಮುಂಗಡ ಪತ್ರವು ಕೆಲವೊಂದು ಅಭಿವೃದ್ಧಿ ಪ್ರಚೋದಕ ಉದ್ದೇಶಗಳನ್ನು ಒಳಗೊಂಡಿದೆ. ಅವುಗಳೆಂದರೆ ಕೃಷಿ ಮತ್ತು ತೆರಿಗೆ ಸುಧಾರಣೆಗಳು: ಒಂದು ಹಂತದಲ್ಲಿ ಈ ಸುಧಾರಣೆಗಳೂ ಒಳ್ಳೆಯ ಫಲಿತಾಂಶವನ್ನು ಕೊಡುತ್ತವೆ ಎಂದು ಭಾವಿಸಬಹುದು. ಕೊನೆಯದಾಗಿ ಹೇಳುವುದಾದರೆ ಮುಖ್ಯ ಮಂತ್ರಿಯವರು ರೈತರ, ಬಡ ಜನರ, ಹೆಂಗಸರ ಮತ್ತು ಮಕ್ಕಳ ಹಾಗೂ ಹರಿಜನ ಮತ್ತು ಗಿರಿಜನರನ್ನು ಗಮನದಲ್ಲಿಟ್ಟುಕೊಂಡು ಈ ಮುಂಗಡ ಪತ್ರವನ್ನು ಮಂಡಿಸಿದ್ದಾರೆ. ಹಿಂದುಳಿದ ವರ್ಗದ ಹರಿಜನ ಗಿರಿಜನರ ಮತ್ತು ಮಹಿಳೆಯರ ಪ್ರಾಬಲ್ಯ ರಾಜಕೀಯವಾಗಿ ಹೆಚ್ಚಾಗುತ್ತಿರುವುದರಿಂದ ಹಣಕಾಸಿನ ಸಚಿವರು ಈ ವರ್ಗದವರಿಗೆ ತಮ್ಮ ಆಯವ್ಯಯ ಪತ್ರದಲ್ಲಿ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಿರುತ್ತಾರೆ. ಒಟ್ಟಾರೆ, ಆರ್ಥಿಕ ಪ್ರಗತಿಯನ್ನು ಗಮನದಲ್ಲಿಟ್ಟುಕೊಂಡು ಅದೇ ಸಂದರ್ಭದಲ್ಲಿ ಪ್ರಜಾಪ್ರಭುತ್ವವನ್ನು ನಿಭಾಯಿಸಬೇಕಾದ ಸರ್ಕಾರದ ಮುಂಗಡ ಪತ್ರವು ಶೇ. ೫೦ರಷ್ಟು ವಿಫಲವಾಗಿದ್ದರೆ ಮಿಕ್ಕ ೫೦ರಷ್ಟು ಯಶಸ್ವಿಯಾಗಿದೆ ಎಂದು ಹೇಳಬಹುದು.

■ ಆರ್. ಎಸ್. ದೇಶಪಾಂಡೆ ಮತ್ತು ಡಾ|| ಡಿ. ವಿ. ಗೋಪಾಲಪ್ಪ
ಎಡಿಆರ್‌ಟಿ ವಿಭಾಗ, ಇನ್‌ಸ್ಟಿಟ್ಯೂಟ್ ಫಾರ್ ಸೋಷಿಯಲ್ ಅಂಡ್ ಎಕನಾಮಿಕ್ ಚೇಂಜ್, ಬೆಂಗಳೂರು - ೭೨

# ಇರಾಕ್ ಯುದ್ಧ
## ಭಾರತೀಯ ಮಾಧ್ಯಮಗಳಲ್ಲೂ ಅಮೆರಿಕಾ ದೃಷ್ಟಿಕೋನ !

ಡಾ॥ ಡಿ. ಎಸ್. ಪೂರ್ಣಾನಂದ

**ಭಾ**ರತೀಯ ಮಾಧ್ಯಮಗಳು ನೀಡಿದ ಇರಾಕ್ ಯುದ್ಧವರದಿಗಳನ್ನು ಗಮನಿಸಿದರೆ ಭಾರತೀಯ ದೃಷ್ಟಿಕೋನವೇ ಇಲ್ಲದಿರುವುದು ಸ್ಪಷ್ಟವಾಗಿ ಕಾಣುತ್ತದೆ. ಅಮೆರಿಕಾ ಮತ್ತು ಬ್ರಿಟನ್ ಮೂಲಗಳನ್ನೇ ಹೆಚ್ಚಾಗಿ ಅವಲಂಬಿಸಿರುವ ಮಾಧ್ಯಮಗಳು ಇರಾಕ್‌ನಲ್ಲಿ ನಡೆದ ನರಮೇಧವನ್ನು ಸ್ವತಂತ್ರವಾಗಿ ನೋಡುವ ಪ್ರಯತ್ನ ಮಾಡದಿದ್ದುದು ಹೊಣೆಗಾರಿಕೆಯ ನಿರ್ಲಕ್ಷ್ಯವೆಂದೇ ಹೇಳಬೇಕು. ಯುದ್ಧದ ಬಹುತೇಕ ವರದಿಗಳು ಬಂದದ್ದು ಅಮೆರಿಕಾದ ಅಸೋಸಿಯೇಟೆಡ್ ಪ್ರೆಸ್ ಮತ್ತು ಬ್ರಿಟನ್‌ನ ರಾಯಿಟರ್ಸ್ ಸುದ್ದಿ ಸಂಸ್ಥೆಗಳಿಂದ. ಬೆರಳೆಣಿಕೆಯಷ್ಟಿರುವ ಭಾರತೀಯ ಬಾತ್ಮೀದಾರರಿಗೆ ಈ ಸಂಸ್ಥೆಗಳ ವರದಿಗಾರಿಕೆಯೇ ಮಾದರಿ !

ಆಕ್ರಮಣಕಾರರು ನೀಡುವ ಮಾಹಿತಿಯನ್ನು 'ಸತ್ಯ' ವೆಂದೂ ಆಕ್ರಮಣಕ್ಕೊಳಗಾದವರು ನೀಡುವ ಮಾಹಿತಿಯನ್ನು 'ಖಚಿತಪಡಿಸಿಕೊಳ್ಳಲಾಗದ ಹೇಳಿಕೆ'ಯೆಂದೂ ವರದಿಗಳು ಹೇಳುತ್ತಿದ್ದುದು ಭಾರತೀಯ ಮಾಧ್ಯಮಗಳು ಪಾಶ್ಚಿಮಾತ್ಯ ಸುದ್ದಿ ಮೂಲಗಳಲ್ಲಿಟ್ಟಿರುವ ಅಪರಿಮಿತ ನಂಬಿಕೆಗೆ ಸಾಕ್ಷಿ. ಇದೊಂದು ನಾಚಿಕೆಗೇಡಿನ ಪ್ರಸಂಗ. ಮೊದಲು ಅಫ್ಘಾನಿಸ್ತಾನದಲ್ಲಿ ಮತ್ತು ಈಗ ಇರಾಕಿನಲ್ಲಿ ಸಾಮೂಹಿಕ ಹತ್ಯೆಯಲ್ಲಿ ತೊಡಗಿರುವ ಬುಷ್ ನಾಗರಿಕ ಮನುಷ್ಯನಂತೆ ಕಂಡರೆ ಸದ್ದಾಂ ಹುಸೇನ್ ಮಾತ್ರ ಕ್ರೂರಿಯಾಗಿ ಬಿಂಬಿತವಾಗಿರುವುದು ಕಾಣುತ್ತದೆ. ಬುಷ್ ನಿಜಕ್ಕೂ 'ಬುಷ್‌ಮನ್'. ಆತನೇನಾದರೂ ನಾಗರಿಕ ಮಾನವ ಸಮುದಾಯಕ್ಕೆ ಸೇರಿದರೆ ಆ ಸಮುದಾಯಕ್ಕೇ ಕಳಂಕ ತಟ್ಟುತ್ತದೆ.

ಯುದ್ಧೋಪಕರಣಗಳೂ ಸೇರಿದಂತೆ ಅನೇಕ ಕೊರತೆಗಳ ನಡುವೆಯೂ ಆಕ್ರಮಣಕಾರರ ವಿರುದ್ಧ ಸಾಧ್ಯವಾದಷ್ಟು ಪ್ರತಿದಾಳಿ ನಡೆಸಿದ ಇರಾಕಿ ಸೈನಿಕರನ್ನು ಕೇವಲ 'ಸದ್ದಾಂ ನಿಷ್ಠ ಪಡೆ', 'ಸದ್ದಾಂ ಭಂಟರು' ಎಂದು ಬಣ್ಣಿಸಲಾಯಿತು. ಅಂದರೆ, ಅವರಿಗೆ ತಮ್ಮ ದೇಶದ ಬಗ್ಗೆ ಕಾಳಜಿ ಇಲ್ಲ, ಎಂದರ್ಥ. ಜನರ ಪ್ರತಿಕ್ರಿಯೆ ಅದಕ್ಕೆ ವಿರುದ್ಧವಾಗಿತ್ತು. ಸದ್ದಾಂ ಹೋಗಲಿ, ಆದರೆ ಬುಷ್ ತೊಲಗಲಿ ಎಂಬುದು ಅವರ ಅಭಿಪ್ರಾಯ. ಇರಾಕಿಗಳ ಕಗ್ಗೊಲೆಯನ್ನು 'ಮುನ್ನಡೆ', 'ಸಾಧನೆ' ಎಂದು ಕರೆಯಲಾಗುತ್ತಿತ್ತು. ಅಮೆರಿಕಾ ಮತ್ತು ಬ್ರಿಟನ್‌ನ ಸುದ್ದಿಸಂಸ್ಥೆಗಳ ಭಾಷೆಯನ್ನೇ ಯಥಾವತ್ತಾಗಿ ಬಳಸುತ್ತಿದ್ದುದು ಬೌದ್ಧಿಕ ದಾಸ್ಯದ ಸಂಕೇತ. ಎಲ್ಲ ಅಂತರರಾಷ್ಟ್ರೀಯ ಕಾನೂನನ್ನು ಧಿಕ್ಕರಿಸಿ ಇರಾಕನ್ನು ಆಕ್ರಮಿಸಿ ಮಧ್ಯಯುಗದ ಬರ್ಬರತೆಯನ್ನು ಮೀರಿದ ಅಮೆರಿಕಾ - ಬ್ರಿಟನ್ ಪಡೆಗಳನ್ನು 'ಮಿತ್ರ' ಪಡೆಗಳೆಂದೂ, ತಮ್ಮ ದೇಶರಕ್ಷಣೆಗೆ ಅಸಾಧ್ಯ ಹೋರಾಟ ನಡೆಸಿದ ಇರಾಕಿನ ಸೈನ್ಯವನ್ನು 'ಶತ್ರು' ಪಡೆಯೆಂದೂ ವರ್ಣಿಸಲಾಗುತ್ತಿತ್ತು. ಯಾರು 'ಮಿತ್ರ' ಯಾರು 'ಶತ್ರು' ಎಂಬುದನ್ನು ಅಮೆರಿಕಾ ನಿರ್ಧರಿಸಿದರೆ ಆ ಭಾಷೆಯನ್ನೇ ಭಾರತೀಯ ಮಾಧ್ಯಮಗಳು ಬಳಸಿ ಆಲೋಚನಾರಹಿತ ವರದಿಗಾರಿಕೆಯನ್ನು ತೋರಿಸಿವೆ, ಇರಾಕಿನ ಸೈನಿಕರನ್ನು ಅವರ ದೇಶದಲ್ಲಿಯೇ 'ಶತ್ರು'ಗಳನ್ನಾಗಿಸಿವೆ. ಹುರಿಯತ್‌ನವರು ಭಾರತದ ಸೈನ್ಯವನ್ನು ಕಾಶ್ಮೀರದಲ್ಲಿ 'ಶತ್ರು' ಎಂದು ಕರೆದರೆ ಕೆಂಡವಾಗುವ ನಮಗೆ ಇರಾಕಿಗಳು ಅವರ ದೇಶದಲ್ಲೇ ಶತ್ರುಗಳಾಗಿಬಿಟ್ಟರು.

ಅಮೆರಿಕಾ ಸೈನಿಕರು ಎಷ್ಟು 'ಮಾನವೀಯತೆಯುಳ್ಳವರು' ಎಂದು ತೋರಿಸಲು ಅವರು ಇರಾಕಿ ಹಸುಳೆಗಳನ್ನು ಕೈಯಲ್ಲಿ ಹಿಡಿದು ಶುಶ್ರೂಷೆಗೆಂದು ಒಯ್ಯುತ್ತಿದ್ದ ಚಿತ್ರಗಳನ್ನು ಬಿತ್ತರಿಸಲಾಯಿತು. ಆದರೆ ತಂದೆ-ತಾಯಂದಿರನ್ನು ಕೊಂದು ಹಸುಳೆಗಳನ್ನು ಅನಾಥವಾಗಿಸಿದ ಪೈಶಾಚಿಕ ಕೃತ್ಯದ ಬಗ್ಗೆ ಯಾವ ಪ್ರಶ್ನೆಯನ್ನೂ ಎತ್ತಲಿಲ್ಲ. ಆಕ್ರಮಣ ಆರಂಭವಾದ ಒಂದು ವಾರದ ನಂತರವೂ ಬಸ್ರಾ ತನ್ನ ಕೈವಶವಾಗದಿದ್ದಾಗ ಬ್ರಿಟನ್ ಪಡೆ ಸಂಪೂರ್ಣ ಸುಳ್ಳೊಂದನ್ನು ಹೇಳಿತು : ಬಸ್ರಾ ನಗರವನ್ನು ಬಿಟ್ಟು ಪಲಾಯನ ಮಾಡುತ್ತಿದ್ದ ನಾಗರಿಕರ ಮೇಲೆ ಇರಾಕ್ ಸೈನಿಕರು ಗುಂಡು ಹಾರಿಸುತ್ತಿದ್ದಾಗ ಬ್ರಿಟನ್ ಪಡೆಗಳು ಅವರ ರಕ್ಷಣೆಗೆ ಬಂದರು ಎಂಬ ಆ ಅಪ್ಪಟ ಸುಳ್ಳು ಸತ್ಯ ವರದಿಯಂತೆ ಮಾಧ್ಯಮಗಳಲ್ಲಿ ಪ್ರಸಾರವಾಯಿತು. ಇರಾಕಿ ನಾಗರಿಕರನ್ನು ಇರಾಕಿ ಸೈನಿಕರ ವಿರುದ್ಧ ಎತ್ತಿಕಟ್ಟುವ ತಂತ್ರ ಇದಾಗಿತ್ತು. ಆದರೆ ಭಾರತದ ಮಾಧ್ಯಮದವರಿಗೆ ಇದನ್ನೆಲ್ಲಾ ಗಮನಿಸಲು ಮಿದುಳು ಗಡ್ಡೆ ಕಟ್ಟಿಕೂತಿತ್ತು.

ಇರಾಕ್ ಯುದ್ಧವನ್ನು ಭಾರತೀಯ ದೃಷ್ಟಿಯಲ್ಲಿ ವರದಿ ಮಾಡುವುದಾಗಿ ಹೇಳಿಕೊಂಡಿದ್ದ ಸಾರ್ವಜನಿಕ ಪ್ರಸಾರ ಸಂಸ್ಥೆಯಾದ 'ದೂರದರ್ಶನ' (ಅದನ್ನು ಕೆಲವೇಳೆ ದುರ್ದರ್ಶನ ಎನ್ನುತ್ತಾರೆ) ಅಮೆರಿಕಾ ಪರ ನಿಲುವು ತಳೆದದ್ದು ವಿಷಾದದ ಸಂಗತಿ. ಆಕ್ರಮಣ ಆರಂಭವಾದೊಡನೆಯೇ ರಭಸದಿಂದ ಬಾಗ್ದಾದ್ ಎಡೆಗೆ ನುಗ್ಗುತ್ತಿದ್ದ 'ಮಿತ್ರ' ಪಡೆಗಳ 'ಸಾಧನೆಯ' ಶ್ಲಾಘನೆ ಆರಂಭವಾಯಿತು. ''ವರ್ಲ್ಡ್ ವ್ಯೂ ಇಂಡಿಯಾ'' ಎಂಬ ವಿಶೇಷ ಕಾರ್ಯಕ್ರಮ ಅಮೆರಿಕಾ - ಬ್ರಿಟನ್ ಹೇಳಿಕೆಗಳ ಪುನರುಚ್ಚರಣೆ ಮಾಡತೊಡಗಿತು. ಚರ್ಚೆಗಾಗಿ ಕರೆಯಲಾದ ಕೆಲವೇ ಮಾಜಿ ಸೇನಾಧಿಕಾರಿಗಳು ಮತ್ತು ರಾಯಭಾರಿಗಳು ಅಮೆರಿಕಾ ಸೈನ್ಯ ಹೇಗೆ ಬಾಗ್ದಾದನ್ನು ವಶಕ್ಕೆ ತೆಗೆದುಕೊಳ್ಳಬೇಕು, 'ತೊಂದರೆ ಕೊಡುವ' ಅರೆ ಮಿಲಿಟರಿ ಪಡೆಗಳನ್ನು ಹೇಗೆ ಸದೆ ಬಡಿಯಬೇಕು ಎಂಬ ಸಲಹೆ ನೀಡುತ್ತಾ ಹೊರಟರು. ಚರ್ಚೆಗೆ ಬಂದವರನ್ನು ಬಾಜಿ ಕಟ್ಟಲು ಬಂದವರಂತೆ ಇರಾಕನ್ನು ಪೂರ್ಣವಶಕ್ಕೆ ತೆಗೆದುಕೊಳ್ಳಲು ಎಷ್ಟು ದಿನ ಬೇಕೆಂದು ಕಾರ್ಯಕ್ರಮ ನಿರೂಪಕರು ಕೇಳಿದಾಗ ಒಬ್ಬರು ಒಂದು ವಾರ, ಇನ್ನೊಬ್ಬರು ಎರಡು ವಾರ, ಮತ್ತೊಬ್ಬರು ಮೂರು ವಾರ ಎಂದು ಹೇಳತೊಡಗಿದರು. ಮಾಜಿ ಸೈನ್ಯಾಧಿಕಾರಿಯೊಬ್ಬರು ಅಮೆರಿಕಾ ಪಡೆಗಳನ್ನು ಪ್ರಶಂಸಿಸಿದ್ದಲ್ಲದೆ ಅವರ ಸಾಮರ್ಥ್ಯದಲ್ಲಿ ವಿಶ್ವಾಸ ವ್ಯಕ್ತಪಡಿಸಿದರು. ಅದೇ ಜನರೊಂದಿಗಿನ ಚರ್ಚೆ ವಾರ ಪೂರ್ತ ಮುಂದುವರಿದದ್ದು ದೂರದರ್ಶನದ ಅಮೆರಿಕ ಪರ ನಿಲುವಿಗೆ ಸಾಕ್ಷಿಯಾಗಿತ್ತು. ಇರಾಕಿನ ಮೇಲೆ ನಡೆದ ಅನಾಗರಿಕ ಆಕ್ರಮಣ, ಅದರಿಂದುಂಟಾದ ಸಾವು, ಹಾನಿಗಳಿಗಿಂತ ಯುದ್ಧಾನಂತರದ ಏರ್ಪಾಡು ಏನಾಗಬೇಕೆಂಬ ವಿಷಯವೇ ಹೆಚ್ಚು ಚರ್ಚಿತವಾಯಿತು.

ದೂರದರ್ಶನದ ವಾಷಿಂಗ್ಟನ್ ಮತ್ತು ಲಂಡನ್‌ನ ಬಾತ್ಮೀದಾರರು ಕಳುಹಿಸಿಕೊಡುತ್ತಿದ್ದ ಸುದ್ದಿಗಳು ಅಮೆರಿಕಾ-ಬ್ರಿಟನ್ 'ವಿಶ್ವಶಾಂತಿ'ಗಾಗಿ ನಡೆಸಿದ ಪ್ರಯತ್ನಗಳ ವಿವರಗಳಂತೆ ತೋರಿಬಂದವು. ಅಲ್ಲಿಯ ಯುದ್ಧ ವಿರೋಧಿ ಸಂಘಟನೆಗಳ ಪ್ರದರ್ಶನಗಳು ಮತ್ತು ರಾಜಕೀಯ ಭಿನ್ನಮತೀಯರ ಅಭಿಪ್ರಾಯಗಳನ್ನು ಕಡೆಗಣಿಸಲಾಯಿತು. ಇನ್ನೂ ಕಾಣ ಸಿಗದ ಸಮೂಹ ನಾಶಕ ಅಸ್ತ್ರಗಳು ಸದ್ದಾಂ ಹುಸೇನ್ ಬಳಿ ಇವೆ ಎಂಬ ದಿನನಿತ್ಯದ ಬುಷ್-ಬ್ಲೇರ್ ಆರೋಪವನ್ನು ವೀಕ್ಷಕರು ನೋಡಬೇಕಾಯಿತು. ಅವರು ಮಾಡಿದ ಆರೋಪವನ್ನು ಆಧರಿಸಿಯೇ ಚರ್ಚೆಗಳು, ವಿಶ್ಲೇಷಣೆಗಳು ನಡೆದುವು. ಈಗ ಕೊಂಡಲಿಸ್ಸಾ-ರಮ್ಸ್‌ಫೆಲ್ಡ್-ಬುಷ್-ಪವೆಲ್ ದುಷ್ಟಚತುಷ್ಟಯವು ಅಂತಹ ಅಸ್ತ್ರಗಳನ್ನು ಇರಾಕಿನಲ್ಲಿ ಎಲ್ಲಾದರೂ ಹುದುಗಿಸಿಟ್ಟು ಆಮೇಲೆ ಸಂಶೋಧನೆ ಮಾಡಿ ಹೊರತೆಗೆಯಲು ಸಜ್ಜಾಗಿದೆ.

ಅಮೆರಿಕಾದ ವಿದೇಶಾಂಗ ಕಾರ್ಯದರ್ಶಿ ಕಾಲಿನ್ ಪಾವೆಲ್ ಜೊತೆ 'ವಿಶೇಷ' ಸಂದರ್ಶನವನ್ನು ತಾವು ನಡೆಸಿದ್ದೇ ಮಹಾಸಾಧನೆ ಎಂಬಂತೆ ದಿನವೆಲ್ಲಾ ಆ ಬಗ್ಗೆ ದೂರದರ್ಶನ ಪ್ರಚಾರ ಮಾಡಿತು. ಆದರೆ ಅದು ಪತ್ರಕರ್ತರೊಬ್ಬರು ನಡೆಸುವ ಸಂದರ್ಶನದಂತಿರದೆ ಸಾಮಾನ್ಯ ಪ್ರಜೆಯೊಬ್ಬ ಮಹಾರಾಜನಿಂದ ಅಪ್ಪಣೆ ಪಡೆಯುವಂತಿತ್ತು.

'ಸರ್, ಸರ್' ಎಂದು ಆರಂಭವಾಗುತ್ತಿದ್ದ ನಿರೂಪಕ ಸೈಯದ್ ನಕ್ವಿಯ ಪ್ರತೀ ಪ್ರಶ್ನೆ ಪಾವೆಲ್‌ಗೆ ಹಿತಕರವಾದ ವಿನಂತಿಯಂತಿತ್ತು! ವೃತ್ತಿಪರ ಪತ್ರಕರ್ತನಾದವನು ಉತ್ತರಕ್ಕಾಗಿ ಒತ್ತಾಯಿಸುತ್ತಾನೆಯೇ ಹೊರತು ಬೇಡಿಕೊಳ್ಳುವುದಿಲ್ಲ. ಈ 'ಸಂದರ್ಶನ' ಭಾರತ-ಅಮೆರಿಕಾ ಸಂಬಂಧಗಳಿಗೆ ಹಿಡಿದ ಕನ್ನಡಿಯಂತಿತ್ತು. ಯಾವುದೇ ಅಮೆರಿಕನ್ ಪತ್ರಕರ್ತ ಭಾರತೀಯ ನಾಯಕರನ್ನು ಹೀಗೆ ವಿನಂತಿಸುವುದಿಲ್ಲ. 'ಮಿಸ್ಟರ್' ಎಂದು ಸಂಬೋಧಿಸಿ ಉತ್ತರಕ್ಕಾಗಿ ಒತ್ತಾಯಿಸುತ್ತಾನೆ, ಅಷ್ಟೆ. ಜನರಲ್ ಪಾವೆಲ್‌ನಿಂದ ಉತ್ತರ ಬೇಡಿದ್ದು ನಕ್ವಿಯವರಿಗೆ ಎಷ್ಟು ಹೆಮ್ಮೆಯ ವಿಷಯವಾಗಿದೆ ಎಂದರೆ ಅವರು ಪಶ್ಚಿಮ ಏಷ್ಯಾದ ನಾಯಕರನ್ನು ಸಂದರ್ಶಿಸಿದಾಗಲೆಲ್ಲಾ 'ನಾನು ಪಾವೆಲ್‌ರನ್ನು ಕೇಳಿದಾಗ ಹೀಗೆ ಹೇಳಿದರು, ನೀವೇನು ಹೇಳುತ್ತೀರಿ' ಎಂದು ಕೇಳುತ್ತಿದ್ದಾರೆ!

ದಕ್ಷಿಣ ಇರಾಕಿನಲ್ಲಿ ನೀರಿಗಾಗಿ ಪರದಾಡುತ್ತಿದ್ದ ಅಸಹಾಯಕ ಮಹಿಳೆಯರ ಗುಂಪೊಂದನ್ನು ಅಮೆರಿಕಾ ಸೈನಿಕನೊಬ್ಬ ನೋಡುತ್ತಿದ್ದ ದೃಶ್ಯವನ್ನು ತೋರಿಸಲಾಯಿತು. ವಿದ್ಯುತ್ ಮತ್ತು ಜಲ ಸ್ಥಾವರಗಳ ಮೇಲೆ ಬಾಂಬ್ ದಾಳಿ ನಡೆಸಿದ ಅಮಾನವೀಯ ಕೃತ್ಯದ ಬಗ್ಗೆ ಏನೂ ಹೇಳದ ವರದಿಗಾರ್ತಿ ಅಮೆರಿಕಾ ಸೈನಿಕರು ಜನರಿಗೆ ''ಸಹಾಯ'' ಮಾಡುತ್ತಿದ್ದಾರೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದಳು. ಇದು ದೂರದರ್ಶನದ ''ವರ್ಲ್ಡ್ ವ್ಯೂ''. ಇಡೀ ದೇಶ ತಲೆ ತಗ್ಗಿಸಬೇಕಾದ ಪ್ರಸಂಗ ಇದು.

ಇನ್ನೊಂದೆಡೆ ಎಣ್ಣೆ ಬಾವಿಗಳಲ್ಲಿ ಹೊತ್ತಿ ಉರಿಯುತ್ತಿದ್ದ ಬೆಂಕಿಯನ್ನು ಅಮೆರಿಕನ್ನರು ಆರಿಸುತ್ತಿದ್ದುದರ ಬಗ್ಗೆ ಪ್ರಶಂಸನೀಯ ವರದಿಯನ್ನು ನೀಡಲಾಯಿತು. ಎಣ್ಣೆ ಬಾವಿಗಳ ಮೇಲೆ ಅಮೆರಿಕನ್ನರು ಬಾಂಬ್ ದಾಳಿ ಮಾಡಿದ್ದರಿಂದಲೇ ಅವು ಹೊತ್ತಿ ಉರಿದವು ಎಂಬ ಸತ್ಯವನ್ನು ಹೇಳಲಿಲ್ಲ. ಇರಾಕಿಗಳ ವಿಮೋಚನೆಗಾಗಿಯೇ ಯುದ್ಧ ಅನಿವಾರ್ಯ ವಾಯಿತೆಂದು ತೋರಿಸಲು ಬಾಗ್ದಾದ್‌ನ ಮೂಲೆಯೊಂದರಲ್ಲಿ ಶಿಯಾ ಗುಂಪೊಂದು ಸದ್ದಾಂ ಹುಸೇನರ ಪ್ರತಿಮೆಯನ್ನು ಒದೆಯುತ್ತಿರುವ ದೃಶ್ಯವನ್ನು ಸಿ.ಎನ್.ಎನ್. ಪ್ರಸಾರ ಮಾಡಿತು. ದೂರದರ್ಶನ ಅದನ್ನೇ ಪದೇ ಪದೇ ತೋರಿಸಿತು. ಈ ಘಟನೆಯ ವಿವರಗಳನ್ನು ಉತ್ಪ್ರೇಕ್ಷೆ ಮಾಡಿ ಎ.ಪಿ. ಮತ್ತು ರಾಯಿಟರ್ಸ್ ಮಾಡಿದ ವರದಿಗಳನ್ನು ಭಾರತದ ಎಲ್ಲ ಮಾಧ್ಯಮಗಳೂ ಸತ್ಯವೆಂಬಂತೆ ಪ್ರಕಟಿಸಿವೆ. ಆ ಜನ ಬ್ರಿಟನ್ ಅಮೆರಿಕಾ ಪಡೆ ಹಿಡಿದು ತಂದಿದ್ದ ಬಾಡಿಗೆ ಗುಂಪಲ್ಲ ಎಂಬುದಕ್ಕೆ ಯಾವ ಸಾಕ್ಷ್ಯಾಧಾರಗಳೂ ಇಲ್ಲ.

ಸುಳ್ಳನ್ನೇ ಹೇಳುತ್ತ ಬಂದಿರುವ ಅಮೆರಿಕಾವು ಇರಾಕಿ ಟೆಲಿವಿಷನ್ ಕೇಂದ್ರವನ್ನು 'ಸುಳ್ಳು' ಪ್ರಚಾರ ಮಾಡುತ್ತಿದೆ ಎಂಬ ಕಾರಣಕ್ಕೆ ನಾಶಪಡಿಸಿದ್ದೇವೆ ಎಂದು ಹೇಳಿದೆ. ಈ ಬಗ್ಗೆ ಭಾರತೀಯ ಮಾಧ್ಯಮಗಳಲ್ಲಿ ಯಾವುದೇ ಪ್ರತಿಕ್ರಿಯೆ ಇಲ್ಲ. ಬಾಗ್ದಾದ್‌ನಲ್ಲಿರುವ ದೂರದರ್ಶನ ತಂಡದ ಉಪಕರಣಗಳು ಪ್ಯಾಲೆಸ್ಟೈನ್ ಹೊಟೆಲ್ ಮೇಲೆ ನಡೆದ ಕ್ಷಿಪಣಿ ದಾಳಿಯಲ್ಲಿ ಹಾನಿಗೊಂಡವು. ಆದರೂ ಅಮೆರಿಕಾದ ಮೇಲೆ ಯಾವುದೇ ಆರೋಪವನ್ನು ದೂರದರ್ಶನ ಮಾಡಿಲ್ಲ. ಅದು ತಪ್ಪೆಂದೂ ಹೇಳಿಲ್ಲ. ಅಲ್ ಜಜೀರ ಮತ್ತು ಅಬು ಧಾಬಿ ಟೆಲಿವಿಷನ್ ಕಚೇರಿಗಳ ಮೇಲೆ ಕ್ಷಿಪಣಿ ದಾಳಿ ನಡೆಸಿ ಇಬ್ಬರು ಪತ್ರಕರ್ತರನ್ನು ಅಮೆರಿಕಾ ಕೊಂದಿದೆ. ಈ ಕೊಲೆಯನ್ನು ಸಹ ಖಂಡಿಸಲಿಲ್ಲ ನಮ್ಮ ಮಾಧ್ಯಮಗಳು. ಇದನ್ನು ನೋಡಿದರೆ ಅವು ಯಾರ ಮುಖವಾಣಿಯೆಂಬ ಸಂಶಯ ಮೂಡುತ್ತದೆ.

ಅಮೆರಿಕಾ ದಾಳಿಯನ್ನು ಖಂಡಿಸಲು ಹಿಂಜರಿದ ಪುಕ್ಕಲು ಸರ್ಕಾರದ ಮುಖವಾಣಿ ಯಾಗಿರುವ ದೂರದರ್ಶನ ಅಮೆರಿಕಾ ಕಣ್ಣುಗಳಿಂದಲೇ ಯುದ್ಧವನ್ನು ನೋಡುತ್ತಿದ್ದಂತೆ ಕಂಡಿತು. ಆಶ್ಚರ್ಯವೆಂದರೆ ಬೇರೆ ಮಾಧ್ಯಮಗಳೂ ದೂರದರ್ಶನಕ್ಕಿಂತ ಭಿನ್ನವಾಗಿ ನಡೆದುಕೊಳ್ಳಲಿಲ್ಲ. ಅಮೆರಿಕಾ ಪ್ರಾಬಲ್ಯ ಹೆಚ್ಚುತ್ತಿರುವ ಸಂದರ್ಭದಲ್ಲಿ ಎಚ್ಚರವಹಿಸಿ ಕಾರ್ಯ ಮಾಡಬೇಕಾದ ಮಾಧ್ಯಮಗಳು ತಮ್ಮ ದೃಷ್ಟಿಯನ್ನೇ ಕಳೆದುಕೊಳ್ಳುತ್ತಿರುವುದು ವಿಷಾದದ ಸಂಗತಿ. ನಾಳೆ ಇರಾನ್, ಸಿರಿಯಾ, ಮತ್ತು ಕಡೆಗೆ ಭಾರತದ ಮೇಲೆ ಅಮೆರಿಕಾದ ಪೈಶಾಚಿಕ ಸೈನ್ಯ ಎರಗಿಬಂದರೆ ನಮ್ಮ ಮಾಧ್ಯಮಗಳು ಹೇಗೆ ನಡೆದುಕೊಂಡಾವು ಎಂಬುದು ಕೇವಲ ಕುತೂಹಲದ ವಿಷಯವಲ್ಲ, ಆತಂಕದ ಸಂಗತಿ.

**ಡಾ|| ಡಿ. ಎಸ್. ಪೂರ್ಣಾನಂದ**
ಸಮೂಹ ಸಂವಹನ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು - ೫೭೪ ೧೯೯

## ಸಾದರ ಸ್ವೀಕಾರ

**ಮನೆ ಶಾಲೆ** (ಕಥನಗಳ ಪುನರ್ಕಥನ)
*ಡಾ|| ಮಹಾಬಲೇಶ್ವರ ರಾವ್*
**ಪುಟ: ೮೮** **ಬೆಲೆ : ರೂ. ೪೦**

**ಅಂಚೆ ಸೇವೆ** (ಅಂಚೆಯ ಇತಿಹಾಸ)
ಕಮಲಾ ರಾಮಸ್ವಾಮಿ
**ಪುಟ : ೭೨** **ಬೆಲೆ : ರೂ . ೩೦**

**ತಮ್ಮಣ್ಣನ ತಮಟೆ** (ಮಕ್ಕಳ ನಾಟಕ)
*ಸುರೇಶ್ ಹೆಗಡೆ*
**ಪುಟ: ೩೨** **ಬೆಲೆ : ರೂ. ೧೫**

**ಬೆರಳುಗಳು** (ಮಕ್ಕಳ ನಾಟಕ)
*ಎನ್. ಶ್ರೀನಿವಾಸ ಉಡುಪ*
**ಪುಟ: ೩೨** **ಬೆಲೆ : ರೂ. ೧೫**

*ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು*
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್,**
೧೧, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ಸಂಖ್ಯೆ. ೫೧೫೯, ಕುಮಾರ ಪಾರ್ಕ್ ಪೂರ್ವ,
ಬೆಂಗಳೂರು - ೫೬೦ ೦೦೧

**ಶ್ರೀ ಜಯತೀರ್ಥರು** (ಜೀವನ ಚರಿತ್ರೆ)
*ಕೊರಟಿ ಶ್ರೀನಿವಾಸರಾವ್*
**ಪುಟ : ೨೮೨** **ಬೆಲೆ : ರೂ. ೧೨೫**

**ಶ್ರೀ ಮಧ್ವಾಚಾರ್ಯರು** (ಜೀವನ ಚರಿತ್ರೆ)
*ಕೊರಟಿ ಶ್ರೀನಿವಾಸರಾವ್*
**ಪುಟ : ೨೫೮** **ಬೆಲೆ : ರೂ. ೧೨೫**

**ಶ್ರೀ ವ್ಯಾಸರಾಯರು** (ಜೀವನ ಚರಿತ್ರೆ)
*ಕೊರಟಿ ಶ್ರೀನಿವಾಸರಾವ್*
**ಪುಟ : ೩೦೪** **ಬೆಲೆ : ರೂ. ೧೨೫**

**ಶ್ರೀ ವಾದಿರಾಜರು** (ಜೀವನ ಚರಿತ್ರೆ)
*ಕೊರಟಿ ಶ್ರೀನಿವಾಸರಾವ್*
**ಪುಟ : ೩೧೬** **ಬೆಲೆ : ರೂ. ೧೨೫**
*ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು*
**ಭಾಗ್ಯಲಕ್ಷ್ಮೀ ಪ್ರಕಾಶನ**
೮೭, ೩ನೇ ಕ್ರಾಸ್, ೪ನೇ ಬ್ಲಾಕ್, ಬನಶಂಕರಿ ೩ನೇ ಸ್ಟೇಜ್, ೩ನೇ ಫೇಸ್, ಬೆಂಗಳೂರು - ೫೬೦ ೦೮೫

**ನಿಮ್ಮೊಳಗೆ ನಾನೊಬ್ಬ** (ಚುಟುಕಗಳ ಸಂಗ್ರಹ)
*ಶಿ. ಕಾ. ಬಡಿಗೇರ*
**ಪುಟ: ೫೦** **ಬೆಲೆ : ರೂ. ೨೭**
**ಬೆಳಕು ಪ್ರಕಾಶನ,** ಯತ್ನಟ್ಟಿ -೫೮೩ ೨೩೧
**ಕೊಪ್ಪಳ ತಾ||**

**ಒದಬನ್ನಿ ಒತ್ತಕ್ಕರ ಪದಗಳ**
*ಡಾ|| ಮಹಾಬಲೇಶ್ವರ ರಾವ್*
**ಪುಟ : ೬೦** **ಬೆಲೆ : ರೂ. ೩೩**
**ಶಾಂತಾ ಪ್ರಕಾಶನ,**
ವಾರಂಬಳ್ಳಿ ಗ್ರಾಮ, ಬ್ರಹ್ಮಾವರ - ೫೭೬ ೨೧೩
**(ಉಡುಪಿ ಜಿಲ್ಲೆ)**

**ಹಿರಿಯರ ಹಾದಿ** (ರಸಪ್ರಸಂಗಗಳ ಸಂಗ್ರಹ)
*ಟಿ. ವಿ. ವೆಂಕಟರಮಣಯ್ಯ*
**ಪುಟ: ೨೦೦** **ಬೆಲೆ : ರೂ. ೮೦**
**ಟಿ. ವಿ. ವೆಂಕಟರಮಣಯ್ಯ**
ಇಡಬ್ಲ್ಯೂಎಸ್-೨೧೮, ಕೆ.ಹೆಚ್.ಬಿ. ಕಾಲೋನಿ, ೨ನೇ ಹಂತ, ೫ನೇ ಕ್ರಾಸ್, ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯.

# ಅಮಾವಾಸ್ಯೆಯಿಂದ ಅಮಾವಾಸ್ಯೆಗೆ - ನಾಲ್ಕು ಗ್ರಹಣಗಳು!

ಒಂದೇ ತಿಂಗಳಲ್ಲಿ ಎರಡು ಅಮಾವಾಸ್ಯೆಗಳಿರುವುದು ಈ ತಿಂಗಳ ವಿಶೇಷ. ಈ ತಿಂಗಳಲ್ಲಿ ೩೧ ದಿನಗಳಿರುವುದರಿಂದ ಇದು ಅಸಾಧ್ಯವೇನಲ್ಲ; ವೈಜ್ಞಾನಿಕ ಮಹತ್ವವೂ ಇದಕ್ಕಿಲ್ಲ. ಆದರೆ ನಾಲ್ಕು 'ಗ್ರಹಣ'ಗಳಿರುವುದೊಂದು ವಿಶೇಷ. ಮೂರರಲ್ಲಿ ಚಂದ್ರ ಭೂಮಿಕೆಯಲ್ಲಿದೆ. ಆದರೆ ನಾಲ್ಕನೆಯದರಲ್ಲಿ ಅದರ ಪಾತ್ರವೇ ಇಲ್ಲ. ಇದೇ ೭ರಂದು ನಡೆಯುವ ಬುಧ ಸಂಕ್ರಮಣ. ಸೂರ್ಯ ಬಿಂಬದ ಮುಂದೆ ಕಪ್ಪು ಚುಕ್ಕೆಯಂತೆ ಬುಧ ಹಾದು ಹೋಗುವ ಈ ಘಟನೆ ಭಾರತಕ್ಕೆ ಅನುಕೂಲಕರವಾಗಿದೆ. ೧೦:೪೨ಕ್ಕೆ ಆರಂಭವಾಗಿ ೧೬:೦೧ ಕ್ಕೆ ಮುಗಿಯುವುದು. ಬರಿಗಣ್ಣಿಗೆ ಕಾಣುವುದಿಲ್ಲ. ಬರಿಗಣ್ಣಿನಿಂದಾಗಲೀ, ದೂರ ದರ್ಶಕದಿಂದಾಗಲೀ, ದುರ್ಬೀನಿನಿಂದಾಗಲೀ ಖಂಡಿತ ನೋಡುವ ಪ್ರಯತ್ನ ಮಾಡದಿರಿ. ಕಣ್ಣು ಶಾಶ್ವತವಾಗಿ ಕುರುಡಾಗುತ್ತದೆ. ದೂರದರ್ಶಕದಿಂದ ಅಥವಾ ಪಿನ್ ಹೋಲ್ ಕ್ಯಾಮರಾ ತಂತ್ರದಿಂದ ತೆರೆಯ ಮೇಲೆ ಸೂರ್ಯಬಿಂಬವನ್ನು ಮೂಡಿಸಿ ಅದನ್ನು ಮಾತ್ರ ನೋಡಬಹುದು. ಇನ್ನೆರಡು ಸಾಂಪ್ರದಾಯಿಕ ಗ್ರಹಣಗಳು (ಚಂದ್ರ ಮತ್ತು ಸೂರ್ಯ) ನಮಗೆ ಕಾಣುವುದಿಲ್ಲ. ಚಂದ್ರಗ್ರಹಣ ಅಮೆರಿಕದಿಂದ ಕಾಣುವುದು. ಕಂಕಣ (ಸೂರ್ಯ)ಗ್ರಹಣ ಉತ್ತರ ಧ್ರುವದಿಂದ ಕಾಣುವುದು. ತಿಂಗಳ ಕೊನೆಯ ದಿನ ಚಂದ್ರನ ನೆರಳಿನ ದಕ್ಷಿಣದ ಅಂಚು ಭಾರತದ ವಾಯವ್ಯ ಭಾಗವನ್ನು ಸವರಿಕೊಂಡು ಹೋಗುವುದು. ಶೇ. ೨ರಷ್ಟು ಮಾತ್ರ ಮರೆಯಾದ ಸೂರ್ಯ ಕಾಣಬಹುದಾದರೂ, ಯಾವುದೇ ಬಗೆಯ ಅನುಭವ ಉಂಟಾಗುವುದಿಲ್ಲ. ಉದಾಹರಣೆಗೆ, ದೆಹಲಿಯಲ್ಲಿ ೭:೩೬ಕ್ಕೆ ಆರಂಭವಾಗುವ ಗ್ರಹಣ ೮:೩೨ಕ್ಕೆ ಮುಗಿದೇ ಹೋಗುವುದು. ಮಾಧ್ಯಮಗಳು ಹಾಗೂ ಫಲಜ್ಯೋತಿಷಿಗಳು ಈ ಬಗ್ಗೆ ಗಮನ ಕೊಡದಿದ್ದರೆ ಗ್ರಹಣ ನಡೆದದ್ದು ಯಾರಿಗೂ ತಿಳಿಯುವುದೇ ಇಲ್ಲ.

ಅಮಾವಾಸ್ಯೆಯಂದು (ಒಂದನೇ ತಾರೀಖು) ಗರಿಷ್ಠ ದೂರದಲ್ಲಿರುವ ಚಂದ್ರ ಹುಣ್ಣಿಮೆಯಂದು ಕನಿಷ್ಠ ದೂರದಲ್ಲಿರುತ್ತದೆ. ಆದ್ದರಿಂದ ಭರತ ಇಳಿತಗಳ ವ್ಯತ್ಯಾಸವನ್ನು ಬೆಸ್ತರು ಗಮನಿಸಬಹುದು.



ಪೂರ್ವ

*ಮೇ ೨೯ರ ಬೆಳಿಗ್ಗೆ ಸೂರ್ಯೋದಯಕ್ಕೆ ಅರ್ಧಗಂಟೆ ಮುಂಚೆ ಕಾಣುವ ನೋಟ. ಇನ್ನೊಂದು ಗಂಟೆಯ ನಂತರ ಚಂದ್ರ ಶುಕ್ರನನ್ನು ಮರೆ ಮಾಡುವುದು.*

**ಡಾ|| ಬಿ. ಎಸ್. ಶೈಲಜಾ**

ಇನ್ನೊಂದು "ಗ್ರಹಣ" ವೈಶಿಷ್ಟ್ಯಪೂರ್ಣವಾದದ್ದು. ೨೯ರ ಬೆಳಗಿನ ಜಾವ ಸೂರ್ಯೋದಯಕ್ಕೆ ಅರ್ಧ ಗಂಟೆ ಮುಂಚೆ ಪೂರ್ವ ದಿಕ್ಕಿಗೆ ಕಣ್ಣು ಹಾಯಿಸಿ. ರೇಖಾ ಚಂದ್ರನಿಗೆ ತಗುಲಿದೆಯೇನೋ ಎಂಬಂತೆ ಶುಕ್ರ ಥಳ ಥಳ ಗುಟ್ಟುತ್ತಿರುತ್ತದೆ. ಕೆಲವೇ ಗಂಟೆಗಳಲ್ಲಿ ಚಂದ್ರ ಶುಕ್ರನನ್ನು ಮರೆ ಮಾಡುತ್ತದೆ. ಈ ಅದ್ಭುತ ದೃಶ್ಯವನ್ನು ಚಿತ್ರೀಕರಿಸಲು ಪ್ರಯತ್ನಿಸಿ. ಚಂದ್ರ ಮುಂದೆ ಸರಿದು ಶುಕ್ರ ಮರೆಯಾಗುವುದನ್ನು ನೋಡಲು ಸಾಧ್ಯವಿಲ್ಲ. ಏಕೆಂದರೆ ಅಷ್ಟು ಹೊತ್ತಿಗೆ ಬೆಳಕಾಗಿಬಿಟ್ಟಿರುತ್ತದೆ.

ಸಂಜೆ ಪಶ್ಚಿಮದಲ್ಲಿ ಕಾಣುವ ಗ್ರಹ ಶನಿ. ನೆತ್ತಿಯ ಮೇಲೆ ಕಾಣುವುದು ಗುರು. ಇವುಗಳನ್ನು ನಕ್ಷೆಯಿಂದ ಗುರುತಿಸಬಹುದು. ತಿಂಗಳ ಕೊನೆಗೆ ಶನಿಗ್ರಹವನ್ನು ಗುರುತಿಸುವುದು ಕಷ್ಟವಾಗುವುದು. ಮಂಗಳ ಗ್ರಹ ಮಕರರಾಶಿಯ ಒಂದು ಅಂಚಿನಿಂದ (ಪಶ್ಚಿಮದಿಂದ ಪೂರ್ವಕ್ಕೆ) ಇನ್ನೊಂದು ಅಂಚನ್ನು ತಲುಪುವುದು. ಮಕರರಾಶಿಯ ತ್ರಿಕೋಣಾಕಾರವನ್ನು ಇದರ ಸಹಾಯದಿಂದ ಗುರುತಿಸಬಹುದು. ಸುಮಾರು ಒಂದು ಗಂಟೆಯ ಹೊತ್ತಿಗೆ ಉದಯಿಸುವ ಇದು ಸೂರ್ಯೋದಯವಾಗುವಾಗ ಮೇಲೆ ಮಧ್ಯಾಹ್ನ ರೇಖೆಯ ಬಳಿಯೇ ಇರುತ್ತದೆ.

ಸೂರ್ಯನಿಗಿಂತ ಕೇವಲ ಅರ್ಧ ಗಂಟೆಯಷ್ಟು ಮುಂಚೆ ಉದಯಿಸುವ ಶುಕ್ರ ಪೂರ್ವದಂಚಿನಲ್ಲಿ ಬೆಳಗುತ್ತಿರುತ್ತದೆ. ಗುರುತಿಸಲು ಕಷ್ಟವೇನಿಲ್ಲ. ೨೯ರಂದು ಚಂದ್ರ ಇದನ್ನು ಮರೆಮಾಡುವಾಗ, ಸ್ವಲ್ಪ ಕೆಳಗೆ ಇನ್ನೊಂದು ಚುಕ್ಕೆ ಕಾಣುವುದು. ಅದೇ ಬುಧ. ಏಳರಂದು ಸೂರ್ಯನ ಮುಂದೆ ಹಾದು ಚುಕ್ಕೆಯಂತೆ ಕಂಡ ಬುಧ ತನ್ನ ಹಿನ್ನಡೆಯನ್ನು ಮುಗಿಸಿ ಹೀಗೆ ಪೂರ್ವದಲ್ಲಿ ಬೆಳಗಿನ ಜಾವ ಕಾಣುವಂತಾಗುತ್ತದೆ.

ಇಷ್ಟೊಂದು ಗ್ರಹಣಗಳು ಕಾಣುವ ಈ ತಿಂಗಳು ನಕ್ಷತ್ರ ಪರಿಚಯಕ್ಕೂ ಒಳ್ಳೆಯ ಅವಕಾಶವನ್ನು ಒದಗಿಸಿದೆ. ಸೂರ್ಯಾಸ್ತವಾಗುತ್ತಿದ್ದಂತೆ ಥಳಗುಟ್ಟುವ ಸಿರಿಯಸ್ ಮತ್ತು ಗುರುಗ್ರಹದ ಆಸುಪಾಸಿನಲ್ಲಿ ಒರೈಯನ್ (ಮಹಾವ್ಯಾಧ), ಟಾರಸ್ (ವೃಷಭ), ಜೆಮಿನಿ (ಮಿಥುನ) ಇವುಗಳನ್ನು ಸುಲಭವಾಗಿ ಗುರುತಿಸಬಹುದು. ತಿಂಗಳ ಕೊನೆಯ ಹೊತ್ತಿಗೆ ವೃಷಭ ಕಾಣುವುದಿಲ್ಲ ಎಂಬುದನ್ನು ಗಮನಿಸಿ. ಹೀಗೆ ಸೂರ್ಯ ವೃಷಭ ರಾಶಿಯತ್ತ ಸರಿದಿದೆ ಎಂಬುದನ್ನು ಪರೋಕ್ಷವಾಗಿ ತಿಳಿಯಬಹುದು. ಪೂರ್ವದಂಚಿನಲ್ಲಿ ಸಂಜೆ ಕಾಣುವ ಪ್ರಖರ ನೀಲಿ ನಕ್ಷತ್ರ ಚಿತ್ರಾ (ಸ್ಪಿಕಾ) ಕನ್ಯಾರಾಶಿಯದು. ಸ್ವಲ್ಪ ಉತ್ತರಕ್ಕೆ ಕಾಣುವ ಕೆಂಪು ನಕ್ಷತ್ರವೇ ಸ್ವಾತಿ (ಆರ್ಕ್ಟರಸ್). ಕಳೆದ ತಿಂಗಳ ಹುಣ್ಣಿಮೆಯ ಚಂದ್ರ ಚಿತ್ರಾ ಸಮೀಪ ಇತ್ತು. ಈ ತಿಂಗಳ ಹುಣ್ಣಿಮೆಗೆ ಅದು ಚಿತ್ರಾಗಿಂತ ಪೂರ್ವಕ್ಕಿರುವ ಕ್ಷೀಣ ನಕ್ಷತ್ರ ವಿಶಾಖಾ ಬಳಿ ಕಾಣುತ್ತದೆ. ಭಗವಾನ್ ಬುದ್ಧ ಹುಟ್ಟಿದ್ದು ಈ ಪೂರ್ಣಿಮೆಯ ದಿನವಾದದ್ದರಿಂದ, ಇದಕ್ಕೆ ವೈಶಾಖ ಪೂರ್ಣಿಮೆ ಎಂಬ ಹೆಸರಿಗಿಂತ ಬುದ್ಧ ಪೂರ್ಣಿಮಾ ಎಂಬ ಹೆಸರೇ ಜನಪ್ರಿಯವಾಗಿದೆ.

ತಲೆ ಎತ್ತಿ ನೋಡಿದಿರಾದರೆ ಗುರುಗ್ರಹದ ಪಕ್ಕ ಸಿಂಹರಾಶಿ (ಲಿಯೋ) ಕಾಣುವುದು. ಉತ್ತರದಲ್ಲಿ ಸಪ್ತರ್ಷಿ ಮಂಡಲ, ದಕ್ಷಿಣದಲ್ಲಿ ದಕ್ಷಿಣ ಶಿಲುಬೆ (ಕ್ರಕ್ಸ್) ಪ್ರಮುಖವಾಗಿ ಕಾಣುವುವು. ಚಿತ್ರಾ ನಕ್ಷತ್ರದ ಪಕ್ಕದಲ್ಲೇ ಕಾಣುವ ಇನ್ನೊಂದು ನಕ್ಷತ್ರಪುಂಜ ಕಾರ್ವಸ್ (ಕಾಗೆ). ಇದು ಬಿಡಿಸಿ ಹಿಡಿದ ಅಂಗೈಯಂತೆ ಕಾಣುವುದರಿಂದ ಇದಕ್ಕೆ ನಮ್ಮಲ್ಲಿ ಹಸ್ತಾ ಎಂಬ ಹೆಸರಿದೆ.

ಮೇ ಮೊದಲ ವಾರದಲ್ಲಿ ಗರಿಷ್ಠ ಚಟುವಟಿಕೆ ಮುಟ್ಟುವ ಈಟಾ ಅಕ್ವಾರಿಡ್ಸ್ ಎಂಬ ಉಲ್ಕಾವೃಷ್ಟಿ ಸಾಕಷ್ಟು ಹವ್ಯಾಸಿಗಳನ್ನು ಆಕರ್ಷಿಸುತ್ತಿದೆ. ಪ್ರತಿವರ್ಷವೂ ಈ ವೃಷ್ಟಿಯನ್ನು




ಗಮನಿಸಿರುವುದರಿಂದ ಅನೇಕ ಹೊಸ ಅಂಶಗಳು ಪತ್ತೆಯಾಗಿವೆ. ಸಾಧಾರಣವಾಗಿ ಮೇ ೩ ರಿಂದ ಆರಂಭವಾಗಿ, ೬ರಂದು ಗರಿಷ್ಠ ತಲುಪಿ, ೧೦ರಂದು ಮುಕ್ತಾಯವಾಗುವುದಾದರೂ, ೧೦ರಂದು ಎರಡನೆಯ ಬಾರಿ ಗರಿಷ್ಠ ಮುಟ್ಟುವುದನ್ನೂ ಗಮನಿಸಲಾಗಿದೆ. ಅಂದರೆ ೩ ರಿಂದ ಪ್ರತಿ ಬೆಳಗಿನ ಜಾವ ಆಕಾಶವನ್ನು ಗಮನಿಸುತ್ತಿದ್ದರೆ, ಗಂಟೆಗೆ ಹತ್ತು ಉಲ್ಕೆಗಳಿಂದ ಆರಂಭವಾಗಿ, ಆರನೆಯ ತಾರೀಖಿಗೆ ೪೦ರವರೆಗೂ ಮುಟ್ಟುವುದು. ಪುನಃ ಇಳಿಮುಖವಾಗಿ ೧೦ರಂದು ಪುನಃ ಗರಿಷ್ಠ ಮುಟ್ಟುವುದು. ಆಮೇಲೆ ಪುನಃ ಇಳಿಮುಖವಾಗುವುದು.

ಉಲ್ಕೆಗಳ ಅಥವಾ ಇನ್ನಾವುದೇ ಖಗೋಳ ಘಟನೆಗಳನ್ನು ೨೪ ಗಂಟೆಯೂ ಗಮನಿಸಿ ಒಟ್ಟುಗೂಡಿಸುವುದರಿಂದ ಮಾತ್ರ ಕೆಲವೊಂದು ಅಂಶಗಳು ಪತ್ತೆಯಾಗುವುವು. ಅಮೆರಿಕ, ಜಪಾನ್, ಯುರೋಪ್‌ಗಳಲ್ಲಿ ಅನೇಕ ಹವ್ಯಾಸಿಗಳು ಇದಕ್ಕಾಗಿ ಜಾಲವನ್ನೇ ನಿರ್ಮಿಸಿಕೊಂಡಿದ್ದಾರೆ. ಈ ದೃಷ್ಟಿಯಲ್ಲಿ ಭಾರತದ ಸ್ಥಾನ ಮುಖ್ಯವಾಗಿದೆ. ಅತಿ ನಿಖರವಾದ ಸಮಯದ ಅಳತೆಗಳನ್ನು ಈ ಜಾಲಕ್ಕೆ ಒದಗಿಸಿಕೊಡುವುದರಿಂದ ಇಂತಹ ಅಂತರರಾಷ್ಟ್ರೀಯ ಸಂಬಂಧಗಳು ಮತ್ತಷ್ಟು ಭದ್ರವಾಗಿ ಬೆಸೆದುಕೊಳ್ಳುವುವು.

**ದಿನಚರಿ**

೧ (ಸಂಜೆ ೫:೪೫ಕ್ಕೆ) ಅಮಾವಾಸ್ಯೆ
ಚಂದ್ರ-ಭೂಮಿ ದೂರ ಗರಿಷ್ಠ (೪೦೬,೫೨೯ ಕಿ.ಮೀ.)
೫ ಚಂದ್ರ-ಶನಿಗ್ರಹದ ನಡುವೆ ಕನಿಷ್ಠ ಕೋನ
೬ ಈಟಾ ಅಕ್ವಾರಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ
೭ ಬುಧಗ್ರಹದ ಸಂಕ್ರಮಣ (೧೦.೪೩ ರಿಂದ ೧೬:೦೧ರವರೆಗೆ)
೯ ಚಾಂದ್ರಮಾಸದ ಮೊದಲ ಪಾದ (೧೬:೩೩) ಚಂದ್ರಾಸ್ತ ನಡುರಾತ್ರಿಯಲ್ಲಿ
ಚಂದ್ರ-ಗುರುಗ್ರಹದ ನಡುವೆ ಕನಿಷ್ಠ ಕೋನ
೧೫ ಚಂದ್ರ-ಭೂಮಿ ದೂರ ಕನಿಷ್ಠ ೨೧:೦೮ಕ್ಕೆ (೩೫೭,೪೫೧ ಕಿ.ಮೀ.)
೧೬ (೦೯:೦೬ಕ್ಕೆ) ಹುಣ್ಣಿಮೆ ಚಂದ್ರಗ್ರಹಣ
೧೯ ಬುಧಗ್ರಹದ ಹಿನ್ನಡೆ ಮುಕ್ತಾಯ
೨೨ ಚಂದ್ರ-ಮಂಗಳ ನಡುವೆ ಕನಿಷ್ಠ ಕೋನ
೨೩ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)
೨೮ ಚಂದ್ರ-ಭೂಮಿ ನಡುವೆ ಗರಿಷ್ಠ ದೂರ (೪೦೬,೧೬೯ ಕಿ.ಮೀ.)
೨೯ ಚಂದ್ರ-ಬುಧ ನಡುವೆ ಕನಿಷ್ಠ ಕೋನ
ಬುಧ-ಶುಕ್ರ ನಡುವೆ ಕನಿಷ್ಠ ಕೋನ
ಚಂದ್ರ-ಶುಕ್ರಗ್ರಹವನ್ನು ಮರೆಮಾಡುವುದು (ಆಚ್ಛಾದನೆ)
೩೧ (೯.೫೦ಕ್ಕೆ) ಅಮಾವಾಸ್ಯೆ ಕಂಕಣ ಗ್ರಹಣ


**ಡಾ|| ಬಿ. ಎಸ್. ಶೈಲಜಾ**
ಜವಹರಲಾಲ ನೆಹರೂ ತಾರಾಲಯ, ಬೆಂಗಳೂರು-೫೬೦ ೦೦೧


## ಒಡಲೊಳಗೆ

ಗೂಡೊಳಗಿನ ಹಕ್ಕಿ
ಸುಳಿಗಾಳಿಗೆ ಸಿಕ್ಕು
ಹೊರಬಿದ್ದಿತು.
ಗೂಡು ಛಿದ್ರವಾಗಿತ್ತು
ಆದರೆ ಹಕ್ಕಿ ?
ಅದರ ಚೆಲುವು ?
ನೋಡುವ ಕಣ್ಣಿಗೆ ರಮ್ಯ ನೋಟ
ಹಕ್ಕಿಗೆ ಅದೇ ಒಂದು ದೊಡ್ಡ ಕಾಟ.

ಈ ಹಕ್ಕಿ
ಕೊರಗಿ ಹೊರಳಿ ನರಳಿ ಬವಳಿದಾಗ
ಅಲ್ಲೊಬ್ಬ ಬೇಡ; ಅವನ ನೋಟ
ಹಕ್ಕಿಗೋ ಆಗ ಪ್ರಾಣ ಸಂಕಟ
ಬೇಡನಿಗೆ ಹಬ್ಬದೂಟ.

ಉಂಡದ್ದಾಯಿತು
ಮಲಗಿದ್ದು ಆಯಿತು
ನಿದ್ರೆ ಮಾತ್ರ ಹತ್ತಲಿಲ್ಲ?
ಒಳಗಿದೆಯಲ್ಲ; ಒಂದು ಹಕ್ಕಿ
ಅದು ಕೂಗುತ್ತಿದೆ, ಬೊಬ್ಬಿಡುತ್ತಿದೆ, ಬೇಡುತ್ತಿದೆ
ಬೇಡನಿಗೆ ಮಾತ್ರ ಕೇಳಿಸುತ್ತಿದೆ.



ಹಕ್ಕಿ ಇರುವುದು ಒಳಗಲ್ಲವೇ?
ಬೇಡ ಅದುಮಿ ಹಿಡಿದು
ಆರ್ಭಟಿಸುತ್ತಾನೆ; ನೀನೊಂದು ಮಾಯೆ !

ಬೇಡಿ, ಕಾಡಿ, ಬಸವಳಿದ ಹಕ್ಕಿ
ಒಡಲೊಳಗೆ ತಣ್ಣಗೆ ಮುದುಡಿ ಮೌನವಾದಾಗ
ಬೇಡ ಸೌಮ್ಯವಾಗಿ ಸವರುತ್ತಾನೆ
ಮೃದುವಾಗಿ ಹೇಳುತ್ತಾನೆ :
ನೀನಲ್ಲ ಮಾಯೆ, ನೀನು ಜಗನ್ಮಾಯೆ !

ಅಲ್ಲೂ ಮಾಯೆ
ಇಲ್ಲೂ ಮಾಯೆ
'ಜಗ' ಮಾತ್ರ ಹೊಸದು
ಯಾವುದು ಸತ್ಯ?
ಏನೊಂದೂ ತಿಳಿಯದ ಹಕ್ಕಿ
ಮೆಲ್ಲನೆ ಬಸಿರ ಸವರುತ್ತಿದೆ.

ಆದರೂ ಆಗಾಗ
ಹೊರಬರುವ ಪ್ರಯತ್ನ ಮಾತ್ರ ಬಿಟ್ಟಿಲ್ಲ
ಆಗ ಕೇಳಿಸುತ್ತಿದೆ ಸಿಂಹ ಘರ್ಜನೆ:
ನಿನಗೀಗ ಎಲ್ಲಿದೆ ಸ್ವಾತಂತ್ರ್ಯ ?

ಸ್ವಾತಂತ್ರ್ಯವಿದೆಯೋ ಇಲ್ಲವೋ
ಇದ್ದರೆ ಹೇಗಿದೆ? ಎಲ್ಲಿದೆ ?
ಇದೇ ಗೊಂದಲದಲ್ಲಿ, ತಳಮಳದಲ್ಲಿ
ಜಾರುತ್ತಾ ಜಾರುತ್ತಾ
ಹಕ್ಕಿ ಜೀರ್ಣವಾಗುತ್ತಿದೆ.
ಬೇಡ ?
ನಿರಾತಂಕವಾಗಿ
ನಿದ್ದೆಗೆ ಸರಿಯುತ್ತಿದ್ದಾನೆ.


**ಅರವಿಂದ ಚೊಕ್ಕಾಡಿ**
ಕಮಲದೀಪ, ತಿಳ್ಳಾರು ಕ್ರಾಸ್ ರಸ್ತೆ
ಕಾರ್ಕಳ - ೫೭೪ ೧೦೪, ಉಡುಪಿ ಜಿಲ್ಲೆ.

# ಬಾಂಬ್ ವಿರೋಧಿ ಪಾಕಿಸ್ತಾನಿ ಕವಿತೆಗಳು

## ಕಾವ್ಯಸಂಸ್ಕೃತಿಯ ಕಾಣಿಕೆ

ಡಾ|| ಮೃತ್ಯುಂಜಯ ರುಮಾಲೆ

ಕಾವ್ಯ ಸಂಸ್ಕೃತಿಯ ಒಂದು ಎಳೆ ಭವಿಷ್ಯದೊಂದಿಗೆ ಸಾಂಸ್ಕೃತಿಕ ಅನುಸಂಧಾನಕ್ಕೆ ಮೊದಲು ಆಗಬೇಕಾದ ರಾಜಕೀಯ ಪರಿಷ್ಕರಣವೊಂದನ್ನು ಈ ಮೂಲಕ ಸೂಚಿಸುತ್ತಿದೆ. ಪಾಕಿಸ್ತಾನದ ಹದಿನೆಂಟು ಕವಿಗಳು, ಇಪ್ಪತ್ತು ಕವನಗಳ ಮೂಲಕ ಭಾರತ ಮತ್ತು ಪಾಕಿಸ್ತಾನದಲ್ಲಿ ಎದ್ದಿರುವ ರಾಜಕೀಯ ಪ್ರಕ್ಷುಬ್ಧತೆಯನ್ನು ಮತ್ತು ಅದಕ್ಕೆ ಕಾರಣವಾಗಿರುವ ಅಜ್ಞಾನದ ವಿದ್ಯಮಾನವನ್ನು ವಿರೋಧಿಸಿದ್ದಾರೆ. ಇತ್ತೀಚೆಗೆ ಅಲ್ಲಿ 'ಬಮ್ ಕೆ ಖಿಲಾಫ್ ಪಾಕಿಸ್ತಾನಿ ಕವಿತಾಯೇಂ'– ಎಂಬ ಕವನ ಸಂಕಲನ ಪ್ರಕಟಗೊಂಡಿದೆ. (ಕನ್ನಡಕ್ಕೆ : ಡಾ|| ಸರಜೂ ಕಾಟ್ಕರ್, ಬಾಂಬ್ ವಿರೋಧಿ ಪಾಕಿಸ್ತಾನಿ ಕವಿತೆಗಳು, ಲೋಹಿಯಾ ಪ್ರಕಾಶನ, ಬಳ್ಳಾರಿ). ಭಾರತದ 'ಅಗ್ನಿ' ಮತ್ತು ಪಾಕಿಸ್ತಾನದ 'ಘೋರಿ'ಗಳು ಆಕಾಶಕ್ಕೆ ಚಿಮ್ಮಿದಾಗ ರಾಜಕೀಯ ಮತ್ತು ಧಾರ್ಮಿಕ ಎರಡೂ ಕ್ಷೇತ್ರಗಳು ನಿರ್ಲಿಪ್ತವಾದ ದುರಾದೃಷ್ಟ ಪ್ರಸಂಗದಲ್ಲಿ ಸಮಾಜದ ಸೃಷ್ಟಿಶೀಲ ಮನೋಭಾವವೊಂದು ಈ ರೀತಿಯಾಗಿ ಪ್ರತಿಕ್ರಿಯೆಗೊಂಡಿದೆ.

ಕಾವ್ಯಮೀಮಾಂಸೆ ಹೇಳುವ ಕಾವ್ಯ ವಸ್ತು, ಕಾವ್ಯ ಪರಿಕರಗಳ ಆಚೆಗೆ ಈ ಕವನಗಳು ಸರಿದು ನಿಂತಿರುವುದು 'ಸೃಷ್ಟಿಶೀಲ ಪ್ರಕ್ರಿಯೆ'ಯ ಒಂದು ನವೀನ ಆಯಾಮವನ್ನು ಸೃಷ್ಟಿಸಿದಂತಾಗಿದೆ. ಕಾವ್ಯ ರಚನಾಪೂರ್ವದ (ಸಿದ್ಧಾಂತ) ಸಲಹೆಗಳಾಗಲೀ, ಕಾವ್ಯ ರಚನಾನಂತರದ (ವಿಮರ್ಶೆ) ಸಮಸ್ಯೆಗಳಾಗಲೀ ಇಂಥ ಕವನಗಳು ಏನೂ ಮಾಡುವುದಿಲ್ಲ ಎಂಬುದು 'ಅತ್ಯಂತ ಪ್ರಚಲಿತ' ಎನ್ನಬಹುದಾದ ಒಂದು ವಿದ್ಯಮಾನಕ್ಕೆ ಇವು ಸ್ಪಂದಿಸಿರುವುದೇ ಮುಖ್ಯ ಕಾರಣವಾಗಿದೆ. 'ಕಾವ್ಯದ ವಸ್ತು' ಮತ್ತು 'ಕಾವ್ಯ ಕರ್ತೃ' ಮೊದಲ ಬಾರಿಗೆ ಇತ್ಯಾತ್ಮಕವಾದ ವಿಶಾಲ ವೇದಿಕೆಯಲ್ಲಿ ಈ ಮೂಲಕ ಅನಾವರಣಗೊಳ್ಳುವುದು ಈ ಕವನ ಸಂಕಲನದ ಇತ್ಯಾತ್ಮಕ ಅಂಶ.

ಇಚ್ಛಾ ಶಕ್ತಿಯನ್ನು ಪ್ರಯೋಗಗೊಳಿಸುವ ಸಾಮರ್ಥ್ಯ ರಾಜಕೀಯ ಮತ್ತು ರಾಜಕೀಯ ಪ್ರೇರಿತ ಅದರ ಅಂಗಗಳಿಗಿರುವಂತೆ ಸಾಹಿತ್ಯಕ್ಕಿಲ್ಲ. ಇದು ಆಧುನಿಕವಾಗಿ ಒಂದು ಪ್ರಚಲಿತ ನೇತ್ಯಾತ್ಮಕ ವಿದ್ಯಮಾನವೂ ಹೌದು, ವಾಸ್ತವವೂ ಹೌದು. ಸಾಹಿತ್ಯ ಹೇಳುವ ಸತ್ಯಕ್ಕೆ ರಾಜಕೀಯ ಹೆದರುವುದು ಒಂದು ಕಾಲದ ಸಾಂಸ್ಕೃತಿಕ ಪ್ರಕ್ರಿಯೆಯಾದರೆ, ಸಾಹಿತ್ಯ ಹೇಳುವ ಸತ್ಯಕ್ಕೆ ಬೆಲೆ ಕೊಡದಂಥ ದುರ್ಬರ ಸ್ಥಿತಿಗೆ ಹೋಗಿರುವುದು ಈ ಕಾಲದ ದುರಂತವಾಗಿದೆ. ಇತಿಹಾಸದಲ್ಲೆಲ್ಲಾ ಆಗಿರುವ ಪ್ರಮುಖ ಮೂಲಭೂತ ಅಂಶವೆಂದರೆ, ನಾಡಿನ ಸಮಗ್ರ ನೆಮ್ಮದಿಗೆ ಹಾತೊರೆಯುವ ಒಂದು ಧ್ವನಿ ಸೀಮಿತವಾಗಿ, ಚಿಕ್ಕದಾಗಿ ಹರಿಯುತ್ತಿರುತ್ತದೆ. ಆದರೆ ಬೇಡವಾಗಿರುವ ಧ್ವನಿಗಳ ಆರ್ಭಟ ಯಾವಾಗಲೂ ಕಿವಿಗಡಚಿಕ್ಕುವಂತಿರುತ್ತದೆ. ಕೂಗಿ ಹೇಳುವ ನಿರುಪಯುಕ್ತವಾದ ದೊಡ್ಡ ಧ್ವನಿಗಿಂತಲೂ ಮನಸ್ಸಿಗೆ ನಾಟುವ ಪಿಸುಮಾತು ಪರಿಣಾಮಕಾರಿಯಾಗುವ ಸತ್ಯ ಇತಿಹಾಸದಲ್ಲಿ ಕರಗಿ ಹೋಗಿರುತ್ತದೆ.

ಮಾಹಿತಿಗಳು ರಾಜಕೀಯದ ಮೂಲಕ ಪರಿಚಯಿಸುವ ಒಂದು ದೇಶವನ್ನು ಅಲ್ಲಿಯ ಕವಿ ಮನಸ್ಸು ಹೇಗೆ ವಿರೋಧಿಸುತ್ತದೆ – ಎಂಬುದು ಈ ಕವನ ಸಂಕಲನದ ಮೂಲಕ ವಿದಿತವಾಗುತ್ತದೆ. ಪ್ಲೇಟೋನ ವಾದವೇ ಇಲ್ಲಿ ಹೇಗೆ ವಿಲೋಮಗೊಂಡಿದೆ! – ಎಂಬುದು ಒಂದು 'ಸಾತ್ವಿಕ ಶಕ್ತಿ'ಯ ಪರಿವರ್ತನಾಗುಣವನ್ನು ತೋರಿಸಿದೆ. 'ಅವರು ಮತ್ತು ಇವರು' ಎಂಬ ಇಲ್ಲಿಯ ಕವನ ಅದನ್ನೇ ಹೇಳುತ್ತದೆ. –

*ಕೈ ಬೆರಳೆಣಿಕೆಯಷ್ಟಿರುವ*
*ಒಂದಿಷ್ಟು ಜನರು*
*ಜೀವನೋತ್ಸಾಹ ತುಂಬಿ ತುಳುಕುತ್ತಿರುವ*
*ಎರಡೂ ದೇಶಗಳನ್ನು*
*ಅಪಹರಿಸಿಬಿಟ್ಟಿದ್ದಾರೆ.*




ಎರಡೂ ದೇಶಗಳ ನಡುವೆ ರಾಜಕೀಯ ಉಂಟುಮಾಡಿರುವ ಪೂರ್ವಗ್ರಹವನ್ನು ಈ ಕವನ ಸಂಕಲನದ ಒಟ್ಟು ಆಶಯವು ಅಲ್ಲಗಳೆಯುತ್ತದೆ. ಪಾಕಿಸ್ತಾನದ ಈ ಜನರ ಮನಸ್ಸು ಈ ರೀತಿ ಮಿಡಿಯುತ್ತಿರುವುದು ಒಂದು ರೀತಿಯಲ್ಲಿ ಸೋಜಿಗವನ್ನು, ಅಪಮಾನವನ್ನು ಉಂಟುಮಾಡುತ್ತವೆ. ಈ ಎರಡಕ್ಕೂ ಕಾರಣ ಒಂದೇ; ಅಲ್ಲಿಯ ಒಟ್ಟು ಜನಗಳ ಬಗ್ಗೆ ನಮಗಿರುವ ತಪ್ಪು ಭಾವನೆ ಅಥವಾ ತಪ್ಪಭಿಪ್ರಾಯ. ಅಧಿಕಾರ ಎಂಬುದು ಅಸಂತೋಷವನ್ನು ಅನುಭವಿಸಲೇಬೇಕಾಗಿ ಬಂದ ಮರುಕ್ಷಣವೇ (ಅಥವಾ ಅಧಿಕಾರದಿಂದ ಅಸಂತೋಷವನ್ನು ಅನುಭವಿಸಲೇಬೇಕಾಗಿ ಬಂದ ಮರುಕ್ಷಣವೇ) ಬಾಂಬಿನ ಬಗ್ಗೆ ಯೋಚಿಸುವಂತೆ ಮಾಡುತ್ತಿರುವುದು ತೀರಾ ಇತ್ತೀಚಿನ ರಾಜಕೀಯ ವಿದ್ಯಮಾನ. ನೈತಿಕ ಬದುಕು ಮತ್ತು ಪ್ರತಿಷ್ಠೆಯ ಬದುಕುಗಳ ಮುಖಾಮುಖಿಯಲ್ಲಿ 'ಬಾಂಬ್'ನ ಆಟವೇ ಪ್ರಮುಖವಾಗುವ ಕಾರಣದಿಂದ ಒಬ್ಬನ ಅತೃಪ್ತಿ, ಅಜ್ಞಾನಗಳು ಎಲ್ಲರ, ಎಲ್ಲವುಗಳ ನಾಶಕ್ಕೆ ಕಾರಣವಾಗುತ್ತವೆ. ಸಮಾಜದ ಸಮಗ್ರ ಜೀವನವನ್ನು ರಾಜಕೀಯಕ್ಕೇ ವಹಿಸಿಕೊಟ್ಟಿರುವುದು ಒಂದು 'ಮೂರ್ಖತನದ ಕಾರ್ಯ'ವೆಂಬ ಅರಿವು ಈ ಶತಮಾನದ ಇತ್ತೀಚಿನ ದಶಕಗಳಲ್ಲಿ ಪರಮಾವಧಿಯ ಹಂತಕ್ಕೆ ಮುಟ್ಟಿದೆ. ಒಬ್ಬ ರಾಜನ ಅಜ್ಞಾನದ ನಿರ್ಧಾರಕ್ಕೆ ಇಡೀ ನಾಡೇ ಬಲಿಯಾದ ಉದಾಹರಣೆಗಳು ಇತಿಹಾಸದುದ್ದಕ್ಕೂ ಸಿಗುತ್ತವೆ. ಆದರೆ ಅದರ ಪರಿಣಾಮಕ್ಕೆ ಇತಿಮಿತಿಯಿರುತ್ತಿತ್ತು. ಪ್ರಕೃತದ್ದು ಬಹುಮುಖೀ ದುಷ್ಪರಿಣಾಮವಾಗಿದೆ. 'ಬಾಂಬ್'-ವಿಜ್ಞಾನದ ಒಂದು 'ಶೋಧ' ಎಂಬುದಕ್ಕಿಂತಲೂ ಅಧಿಕಾರಾಜ್ಞಾನದ 'ಅತಿರೇಕದ ಸಂಕೇತ'ವಾಗಿದೆ.

''ಕವಿಗಳು, ಸಾಹಿತಿಗಳು, ಚಿಂತಕರು ಕೇವಲ ತಮಗೆ ಬೇಕಾಗಿದ್ದ 'ವಾದ'ದ ವಕಾಲತ್ತು ವಹಿಸುವುದು ಅಷ್ಟೊಂದು ಪ್ರಿಯವಾದದ್ದೇನಲ್ಲ – ಇವರೆಲ್ಲರು ಒಟ್ಟಾರೆ ಮಾನವ ಸಮಾಜದ ಕಡೆಗೆ, ಅಷ್ಟೇ ಏಕೆ ಸಂಪೂರ್ಣ ಚರಾಚರ ವಿಶ್ವದ ಅಸ್ತಿತ್ವದ ಕಡೆಗೆ ಗಮನ ಹರಿಸಬೇಕಾಗುತ್ತದೆ. ಸಾಹಿತ್ಯ ಇಡೀ ಮಾನವ ಸಮಾಜದ ಸಮಸ್ಯೆಗಳನ್ನು ಎದುರಿಸುವ ಜವಾಬ್ದಾರಿಯನ್ನು ಸ್ವೀಕರಿಸಬೇಕಾಗುತ್ತದೆ'' (ಚಂದ್ರಕಾಂತ ಕುಸುನೂರು, ಪ್ರಸ್ತಾವನೆಯಲ್ಲಿ) ಎಂಬ ಮಾತಿನಂತೆ ಘನಶ್ಯಾಂ ಅಗರವಾಲ್ ಅವರ ಕವನ 'ಶಿಕ್ಷೆ' – ಇದನ್ನೇ ಧ್ವನಿಸುತ್ತದೆ.

*ಈತ ಕವಿ, ಲೇಖಕ, ಕಲಾವಿದ*
*ಈತನಿದ್ದೂ ಬಾಂಬ್ ಸೃಷ್ಟಿಯಾಯಿತು*
*ಈತನಿಗೆ ನೂರು ಬಾರುಕೋಲಿನಿಂದ ಬಾರಿಸಿರಿ.*

ಸಾಹಿತ್ಯ ಮತ್ತು ಕಲೆಯ ಹೊಣೆಗಾರಿಕೆಯು ರಾಜಕಾರಣ ಮತ್ತು ಧರ್ಮಕ್ಕಿಂತಲೂ ಅಧಿಕವಾದುದು ಎಂಬುದು 'ಶಿಕ್ಷೆ' ಕವನದ ವ್ಯಂಗ್ಯಾರ್ಥವಾಗಿದೆ.

ಇಲ್ಲಿನ ಪಾಕಿಸ್ತಾನೀ ಕವಿತೆಗಳು ಇಂಥ ಮನೋಭಾವ ತೋರಿಸಿ ವಾಸ್ತವವನ್ನು ಎದುರಿಸಬೇಕಾದ ರೀತಿಯನ್ನು ಕುರಿತು ಚಿಂತಿಸಿವೆ.

*  *  *

ಈ ಸಂಕಲನದ ಮೊದಲ ಕವನವೇ ನಿಂತು ಓದಿಸಿ, ಆಲೋಚಿಸುವಂತೆ ಮಾಡಿ ಮುಂದೆ ಕರೆದೊಯ್ಯುತ್ತದೆ. ಈ ಕವನ (ಜಿಹಾದ್‌ಗೆ ಹೊರಟ ಗೆಳೆಯರೆ – ಓಜಸ್) ಕಳೆದು ಹೋಗುತ್ತಿರುವ ಸುಂದರ ಕ್ಷಣಗಳನ್ನು ಮತ್ತು ಮುಂಬರುತ್ತಿರುವ ಭೀಕರ ಕ್ಷಣಗಳನ್ನು ಮುಖಾಮುಖಿಯಾಗಿಸಿ ಒಂದು ಬಗೆಯ ಅಸಹಾಯಕ ನಿರ್ಲಿಪ್ತತೆಯನ್ನು ತಾಳಿದೆ.

*ಜಿಹಾದ್ ಹೆಸರಿನಲಿ*
*ಯುದ್ಧಕ್ಕೆ ಹೊರಟ ನನ್ನ ಗೆಳೆಯರೇ,*
*ಬಂದೂಕನ್ನು ಎತ್ತುವ ಮೊದಲು*
*ನನಗೆ ಕೆಲವು*
*ಕ್ಷಣಗಳನ್ನು ನೀಡಿರಿ*

ಧರ್ಮ ಮತ್ತು ರಾಜಕಾರಣ ಮಾಡಿಕೊಂಡಿರುವ ಭೀಕರ ಒಪ್ಪಂದ ಹೇಗೆ ಮುಗ್ಧ ಮತ್ತು ಸಹಜ ಬದುಕನ್ನು ಮರೆಸುವಂತೆ ಮಾಡುತ್ತಿದೆ. ಮಳೆ, ಗಾಳಿ, ಬೆಳಕುಗಳೊಂದಿಗಿರುವ ತನ್ನನ್ನು ಮತ್ತು ತನ್ನ ಅಸ್ತಿತ್ವವನ್ನು ಮತ್ತೆಲ್ಲೋ ಹುಡುಕುವಂತೆ ಮಾಡಿದೆ.

*ಅಮೃತ ಕಲಶವನ್ನು ಹೊತ್ತು ತಂದು*
*ಎಲ್ಲೆಡೆ ನೀರು ಸುರಿಸಿದ ಮೋಡಗಳಿಗೆ*
*ಎಂದಾದರೂ ನೀವು*
*'ನೀನು ಬಂದದೆಲ್ಲಿಂದ ?' ಎಂದು ಕೇಳಿದ್ದೀರಾ ?*
..........................
*ನೆನಪಾಗುತ್ತಿದೆಯೇ, ನಿಮಗೆ*
*ಶರದ್ ಋತುವಿನಲ್ಲಿ*
*ಒಂದಿಷ್ಟು ಸೂರ್ಯ ದರ್ಶನಕ್ಕಾಗಿ*
*ಕಾತರಿಸಿದ ಆ ದಿನಗಳು ?*
..........................

ಈಗಲೇ ಗೆಳೆಯರೇ ಈಗಲೇ
ಈ ನಕ್ಷತ್ರಗಳನ್ನು
ನೋಡಿ ಖುಷಿ ಪಡಿ

ಯಾಕೆಂದರೆ ಇನ್ನಷ್ಟು ಹೊತ್ತಿನಲ್ಲಿ
ಈ ನಕ್ಷತ್ರಗಳು ಅಲ್ಲೇ ಇರಬಹುದು
ಆದರೆ ಅವುಗಳನ್ನು ನೋಡಲು
ನಿಮ್ಮ ಕಣ್ಣುಗಳೇ ಇರಲಿಕ್ಕಿಲ್ಲ
...................
ಎಂದಾದರೂ ನೀವು ಈ ಪಕ್ಷಿಗಳಿಗೆ
'ನೀನು ಮುಸಲ್ಮಾನನೋ ಅಥವಾ ಹಿಂದುವೋ'
ಎಂದು ಕೇಳಿದ್ದೀರಾ ?

ಕಳೆದು ಹೋಗುತ್ತಿರುವ ಬದುಕಿನ ಬಗ್ಗೆ ಕವಿಗಿರುವ ಕಾಳಜಿ, ಮುಸ್ಲಿಮನದಲ್ಲ, ಹಿಂದೂವಿನದಲ್ಲ, ಅದು ಮನುಷ್ಯನದು.

'ಕ್ರೌರ್ಯ' (– ಅತಿಯಾ ದಾವೂದ್) ಮತ್ತೊಂದು ರೀತಿಯಲ್ಲಿ ತಲೆ ತಗ್ಗಿಸುವಂತೆ ಮಾಡುತ್ತಿದೆ. ಗಾಂಧಿಯನ್ನು ಮೆಚ್ಚದ ಅಲ್ಲಿನ 'ರಾಷ್ಟ್ರ ನಾಯಕ'ರಲ್ಲಿ ಇಲ್ಲದ ಗುಣ, ಲತಾ ಮಂಗೇಶ್ಕರಳನ್ನು ಮೆಚ್ಚುವ ಮಗು ಸಹಾಯಿಯಲ್ಲಿ ಕಾಣುತ್ತಿದೆ. ಅಂದರೆ 'ದ್ವೇಷದ ಕಾಡಿನಲ್ಲಿಯೇ ಪ್ರೇಮದ ಒಂದು ಸಸಿಯೂ ಇದೆ !'

ನನ್ನ ಮಗಳು ಸಹಾಯಿ
ಲತಾಳ ಹಾಡು ಕೇಳುತ್ತ ಕೇಳುತ್ತ
ನಿದ್ದೆ ಹೋಗಿದ್ದಾಳೆ.

(ಲತಾ ಮಂಗೇಶ್ಕರರನ್ನು ಕೊಟ್ಟುಬಿಡಿ, ಕಾಶ್ಮೀರದ ತಂಟೆಗೇ ಬರುವುದಿಲ್ಲ – ಎಂದು ಪಾಕಿಸ್ತಾನದ ಸೈನ್ಯಾಧಿಕಾರಿ ಹಿಂದೊಮ್ಮೆ ಹೇಳಿದ್ದ ಮಾತೂ ಇಲ್ಲಿ ನೆನಪಿಗೆ ಬರುತ್ತದೆ).

ಮಗಳು ದಿನಪತ್ರಿಕೆ ಓದುವುದಿಲ್ಲ
ಟಿ.ವಿ. ಮೇಲಿನ ಸುದ್ದಿಗಳನ್ನು ನೋಡುವುದಿಲ್ಲ
.............
ಎಂದಾದರೂ ಒಂದು ದಿನ
ಮಾಧುರಿ ದೀಕ್ಷಿತಳ ಜೊತೆ
ಫೋಟೋ ತೆಗೆಸಿಕೊಳ್ಳಬೇಕೆಂದೂ
ಆಕೆ ಆಶಿಸುತ್ತಾಳೆ.
.................
ಹೂವು ಕಲ್ಲು ಸುವಾಸನೆ
ಉಸುಕು ಸಂಗೀತ ಹಾಡು
ಮತ್ತು ಬಾಂಬ್‌ಗಳ ಪರಸ್ಪರ
ಸಂಬಂಧ ಏನೆಂದು ಕೇಳುತ್ತಿದ್ದಾಳೆ.
..................
...ಇಂದು ಚೌಗಿ ಗುಡ್ಡದಲಿ
ಸಿಡಿದ ಬಾಂಬ್ ಪ್ರಾತ್ಯಕ್ಷಿಕೆ
ಟಿ.ವಿ. ಯಲಿ ನೋಡಿ
ಬಾಂಬ್ ಎಂದರೇನೆಂದು ಕೇಳುತ್ತಿದ್ದಾಳೆ.

ರಾಜಕೀಯ ನಿರ್ಮಿತ ದೇಶ ಹೇಗೆ ಸಂಸ್ಕೃತಿ ನಿರ್ಮಿತ ದೇಶವನ್ನು ಮರೆಮಾಚುತ್ತಿದೆ – ಎಂಬುದಿಲ್ಲಿ ಗಮನಾರ್ಹ. ರಾಜಕೀಯ ಹೇಳುವ 'ಸತ್ಯ-ನಂಬಿಕೆ'ಗಳನ್ನು ದಾಖಲಿಸುವ ಇತಿಹಾಸ, ಸಾಹಿತ್ಯ ಹೇಳುವ 'ಸತ್ಯ'ವನ್ನು ಹೇಗೆ ಇತಿಹಾಸ ದಾಖಲಿಸದು ಮತ್ತು ನಂಬದು – ಎಂಬ ಅಂಶ ಇಲ್ಲಿದೆ.

'ವಿಷದ ಗಾಳಿ' (– ಹಸನ್ ಆಬೇದಿ)
ಪರ್ವತಗಳು ಬೆಂಕಿ ಕಾರುವವು
ಸಮುದ್ರದಿಂದ ಜ್ವಾಲೆಗಳು ಏಳುವವು
ಮನುಷ್ಯನ ಅಸ್ತಿತ್ವದ ಸರ್ವನಾಶವಾಗುವದು
ನೆಲವೆಲ್ಲ ಬೂದಿಯಾಗುವುದು

ನೋಡು - ಪ್ರಕೃತಿಯ ವೈಪರೀತ್ಯದ ಪರಿಣಾಮಕ್ಕಿಂತಲೂ ಭೀಕರವಾದುದು. ಪ್ರಕೃತಿಯು ಎಲ್ಲವನ್ನೂ ಕಳೆಯುತ್ತಿದ್ದಾಗ ಮನುಷ್ಯ ಅಸಹಾಯಕನಾಗಿ ಸಾಯುತ್ತಾನೆ; ಆದರೆ, ಮನುಷ್ಯನೇ ಎಲ್ಲವನ್ನೂ ಕಳೆಯುತ್ತಿದ್ದಾಗ...?!

'ಹುಚ್ಚ' (– ಸಾರ್ಮನ್ ಮೋಯಿರ್)

ರಾಜಕೀಯ ಹೇಗೆ ತನ್ನ ಅಧಿಕಾರದ ಸ್ಥಿರತೆಯ ಬೆಂಬಲಕ್ಕೆ ದುಷ್ಟಶಕ್ತಿಯನ್ನು ಬಳಸಿಕೊಂಡು ಆ ಮೂಲಕ ನಿರಪರಾಧಿಗಳೂ ಮುಗ್ಧರೂ ಮಾತ್ರ ಇಂಥ ಕೃತ್ಯಗಳಲ್ಲಿ ಬಲಿಯಾಗುತ್ತಾರೆ ಎಂಬುದನ್ನು ಈ ಕವನ ಬಿಂಬಿಸುತ್ತದೆ.

ಭಯಾನಕ ಅಣ್ವಸ್ತ್ರಗಳನ್ನು ತಯಾರಿಸುವವ
ನಿಶ್ಚಿಂತೆಯಲಿ ಉಸಿರಾಡುತ್ತಿದ್ದ
ಮನುಷ್ಯ ರಕ್ತದ ಜೊತೆ ಆಟ ಆಡುವವ
ಪುರುಸೊತ್ತಿನಲಿ ಟಿವಿ ನೋಡುತ್ತ ಕುಳಿತಿದ್ದ

ಈ ಕವನದಲ್ಲಿ, ಭಯೋತ್ಪಾದನೆಯ ಅಟ್ಟಹಾಸದಲ್ಲಿ ಶಾಂತಿ ಬಯಸುವವನು ಹೇಗೆ 'ಹುಚ್ಚ'ನಾಗಿ ಕಾಣುತ್ತಾನೆ – ಎನ್ನುವಲ್ಲಿ ಕವಿಗಿರುವ ಅತಿರೇಕದ ನಿರ್ಲಿಪ್ತತೆ ಅರಿವಾಗುತ್ತದೆ.

'ರಾಸ್ ಪರ್ವತ ಸತ್ತು ಹೋಯಿತು' (– ರಹೀಂ ಬಕ್ಷ ಆಜಾದ್)

ರೋಮಾಂಚಕಾರಿ ಅನುಭವವನ್ನುಂಟುಮಾಡುವ 'ರಾಸ್...' ಒಂದು ಪರ್ವತ ಇಲ್ಲಿ ಭಯೋತ್ಪಾದನೆಗೆ ಬಲಿಯಾಗಿ ಹೋದದ್ದರ ಬಗ್ಗೆ ಕವಿ ಕಂಬನಿಗರೆದಿದ್ದಾನೆ. ನಿರಪರಾಧಿ, ಮುಗ್ಧರಂತೆ ನಿರಪರಾಧಿ ನಿಸರ್ಗವೂ ಇಲ್ಲಿ ಬಲಿಯಾಗಿದೆ.

ರಾಸ್ ಪರ್ವತ
ಮನುಷ್ಯನ ಅಹಂಕಾರಕ್ಕೆ ಸಂಕೇತವಾಗಿ
ಕಫನ್ ಜಗ್ಗಿಕೊಂಡು
ಸತ್ತುಹೋಯಿತು.

'ಸೈರನ್' (– ಮುಸ್ತಾಫಾ ಅರಬಾಬ್) – ಯುದ್ಧದಿಂದ ಮುಗಿಯುತ್ತಿರುವ ಬದುಕಿನ ಕೊನೆಗೆ 'ಕಾವ್ಯ ಸುಖ' ಬಯಸುತ್ತಿರುವ ಈ ಕವನದ ಕವಿ, ತನ್ನ ಸುಖವನ್ನು ಎರಡು ದೇಶಗಳಲ್ಲಿ ಹರಿಯಬಿಡುತ್ತಿದ್ದಾನೆ. 'ಕವಿತೆ ಓದಲು ಯಾರಾದರೂ ಇರುವರೇ ?' ಎಂದೂ, 'ಆ ಕವಿತೆ ಪೂರ್ತಿ ಬರೆಯಲು ನಾನೂ ಇರುವುದಿಲ್ಲ' – ಎಂದೂ ಹೇಳುತ್ತಿರುವ ಕವಿಯ ಅನಾಥ ಪ್ರಜ್ಞೆಯಲ್ಲೂ ಭೀಕರತೆಯ ಭಯವೇ ಕಾಣುತ್ತಿದೆ.

'ಅವರು ಮತ್ತು ಇವರು' (– ಮುಸ್ತಾಫಾ ಅರಬಾಬ್) ಈರ್ವರ ಅಜ್ಞಾನದ ಕೃತ್ಯವನ್ನು ಪರಿಹರಿಸಲು ಈರ್ವರ ಸಾಂಪ್ರದಾಯಿಕ ನಂಬಿಕೆ ಇಲ್ಲಿ ಹುಸಿಯಾಗಿದೆ.

'ಗೌತಮನಿಗೊಂದು ಕವಿತೆ' (– ಸಬಾ ಇಕ್ರಾಮ್)
ಕಾಮನ ಬಿಲ್ಲಿನಂತಹ ಪಕ್ಷಿಗಳ ಹಾಡುಗಳನ್ನು
ಗಿಡದ ಟೊಂಗೆಗಳನ್ನು
ಚಿಗುರೆಲೆಗಳನ್ನು ಭಸ್ಮ ಮಾಡುತ್ತ ಮಾಡುತ್ತ
ಹೊರಟವೆ

ಈ ಕವನ ಬುದ್ಧನ ಜೀವನದ ಕೊನೆಗಾಲದ ಘಟನೆಯನ್ನು ನೆನಪಿಸುತ್ತದೆ. (ಕವಿಗೆ ಇರುವ ಬುದ್ಧನ ಜೀವನದ ಅರಿವು ಗಮನಾರ್ಹವಾದುದು)

'ನಮಗೆ ಹೂವು ಬೇಕು' (– ನ. ಮ. ದಾನೀಶ್)
ಯುದ್ಧದ ಎದುರು
ಸಾವು ಸೋಲುವಷ್ಟು
ಜೀವನ ಅಸಹಾಯಕವಾಗಿದೆಯೆಂದು
ನಾನು ಭಾವಿಸಿಲ್ಲ.

ಕವಿಗಿರುವ ಬದುಕಿನ ಬಗೆಗಿನ ಪ್ರೀತಿ ಮತ್ತು ಯುದ್ಧ ಉಂಟುಮಾಡುತ್ತಿರುವ ಭೀತಿ ಇಲ್ಲಿ ಗಮನಾರ್ಹ.

'ಜಾದೂಗಾರ' (– ಅಲಿ ಮೋ ಘರಶಿ)

ಅಧಿಕಾರಶಾಹಿ ಗುಣ ಹೇಗೆ ಸಮುದಾಯದ ಮುಂದೆ ಕಣ್ಣಾಮುಚ್ಚಾಲೆಯಾಡುತ್ತಿದೆ ಎಂಬುದನ್ನು ಸಾಂಕೇತಿಕವಾಗಿ ತಿಳಿಸುತ್ತದೆ.

ಮನುಷ್ಯನನ್ನು ರಾಕೆಟ್ಟಿನಂತೆ
ಆಗಸಕ್ಕೆ
ಏರಿಸಿದ ಜಾದೂಗಾರ್
ಜೋಳಿಗೆಯೊಳಗಿಂದ ಬಾಂಬ್ ಹೊರ ತೆಗೆದು
ನೆಲಕ್ಕೆ ಬಡಿದ
ನೆಲವೆಲ್ಲ ಬೂದಿಯ ರಾಶಿಯಾಗಿ
ಸ್ಮಶಾನದಲ್ಲಿ ಮಾರ್ಪಾಡಾಯಿತು.

'ಅಲ್ಲಾ ಮತ್ತು ರಾಮ' (– ಸರಸುಮ್ ಸಮೀವಾಲೆ) – ಯಾವುದೇ ಮಹಾತ್ಮ ತನ್ನ ಬದುಕಿನ ಕೊನೆಯ ಭಾವನೆಯಾಗಿ ಹೇಳುವ ಸಂತವಾಣಿಯಂತಿದೆ.

'ಹಿಂದೂಸ್ತಾನಿ-ಪಾಕಿಸ್ತಾನಿ' (–ಸರಸುಮ್ ಸಮೀವಾಲೆ) – ಎಲ್ಲೆಲ್ಲೂ ನಾಶಮಾಡುವ, ಬೂದಿಮಾಡುವ ವಸ್ತುವಿರುವುದು ತಮ್ಮ ಸ್ವಾರ್ಥ, ಹಿತಾಸಕ್ತಿ ಬಯಸುವವರ ಕೈಯಲ್ಲಿ. ಅವರಿಂದ ಸೌಂದರ್ಯದ ಅನಾವರಣ ಅಸಾಧ್ಯ, ಬದಲಿಗೆ ಹುಟ್ಟಿದ, ಬೆಳೆದ ಹೂವನ್ನು ಬೂದಿ ಮಾಡುವುದು ಮಾತ್ರ ಸಾಧ್ಯ-ಎಂಬಂಶವನ್ನು ಸಾರುತ್ತದೆ.

'ಸೈತಾನಿ ನೃತ್ಯ' (– ಜಿಯಾ ಜಾಲಂದರಿ) ಅಜ್ಞಾನದ, ನಾಶದ ಅತಿರೇಕದ – ಮೂಲವನ್ನು ಹುಡುಕುತ್ತಿದೆ.

'ಇದು ಹೇಗೆ ಸಾಧ್ಯ ಹೇಳಿ ?' (– ಅಜ್ರಾ ಅಬ್ಬಾಸ್). ಈ ಕವಿತೆ ವಾಚ್ಯಕ್ಕೆ ಸಂಪೂರ್ಣ ವಿಲೋಮ ಆಶಯ ಹೊಂದಿದೆ. ಯುದ್ಧ ವಿರೋಧಿತನದ ಆಧಿಕ್ಯವನ್ನು ಈ ಕವಿತೆ ಕಂಡುಕೊಂಡಿರುವುದರಿಂದ... 'ಇಷ್ಟು ಸುಲಭದಲಿ ಸಿಗುವ ರೊಟ್ಟಿಯನ್ನು ಒಂದು ಕವಿತೆಗಾಗಿ ನಾನೇಕೆ ಕಳೆದುಕೊಳ್ಳಬೇಕು ನೀವೇ ಹೇಳಿ ?' – ಎಂದು ಹೇಳುತ್ತಿದೆ. ಬಾಂಬ್‌ನ ಅಟ್ಟಹಾಸದ ನಗುವಿನ ಮುಂದೆ ಈ ಕವಿತೆಯ ಧ್ವನಿ ಅಸಹಾಯಕತೆಯ ಪರಮಾವಧಿಯನ್ನು ಪಡೆದಿರುವುದರಿಂದ, 'ಬಾಂಬ್ ವಿರೋಧಿ ಕವಿತೆಯನ್ನು ಹೇಗೆ ಬರೆಯಲಿ ನೀವೇ ಹೇಳಿ' – ಎನ್ನುತ್ತದೆ.

'ಅಮೃತಾ ಹೇಳಿದ್ದಳು ನನಗೆ' (– ಸಯೀದಾ ಗುಜದರ್) ಹೇಗೆ ಆದರ್ಶಗಳು ಬೂದಿಯಾಗುತ್ತಿವೆ ?! ಹಸಿವು ಮತ್ತು ನೀರಡಿಕೆ ಮಾತ್ರ ನಮ್ಮ ದಿನನಿತ್ಯ ಮಾತಾಗುವ ಸ್ಥಿತಿ ಬಂದ ಮೇಲೂ ಪರಸ್ಪರ ಪ್ರೀತಿಸುವ ಮೂಲಕ ಆದರ್ಶವನ್ನು ಜೀವಂತವಾಗಿಡಬೇಕು ಎಂಬ ಚಿಂತನೆ ಇಲ್ಲಿದೆ.

* * *

ಈ ಕವನ ಸಂಕಲನದಲ್ಲಿ ಕವನಗಳು ತಮ್ಮ ಬದುಕಿನ ಉಳಿವಿಗಾಗಿ ಬಾಂಬನ್ನು ವಿರೋಧಿಸುತ್ತಿಲ್ಲ, ಒಟ್ಟಾರೆ ಬದುಕಿನ ಆನಂದವನ್ನು ಬಯಸಿವೆ. ಕಾವ್ಯಾಂಶಕ್ಕಿಂತಲೂ ಜೀವಾಂಶ ಈ ಕವನಗಳಲ್ಲಿ ಮುಖ್ಯವಾಗಿದೆ. ಕಾವ್ಯ ಸೌಂದರ್ಯದಂಥ ಮೌಲ್ಯಕ್ಕಿಂತಲೂ ಜೀವನ ಮೌಲ್ಯ ಇಲ್ಲಿ ಮುಖ್ಯ.

ಅನುವಾದ ಕ್ರಿಯೆ ಉಂಟುಮಾಡುವ ಒಂದು ಪ್ರಮುಖ ಸಾರ್ಥಕ್ಯವನ್ನು ಈ ಕವನ ಸಂಕಲನ ಹೊಂದಿದೆ. ಸರಿಯಾದ ಸಮಯಕ್ಕೆ ಕನ್ನಡಿಗರಿಗೆ ಪಾಕಿಸ್ತಾನಿ ಕವಿಗಳು ಪರಿಚಯವಾಗುತ್ತಿದ್ದಾರೆ.

'ಜೀವನ ಜೀವನವೇ
ಅದು ಸೋಲುವ ದ್ರವ್ಯವಲ್ಲ'

**ಡಾ|| ಮೃತ್ಯುಂಜಯ ರುಮಾಲೆ**
ವಿಜಯನಗರ ಕಾಲೇಜ್, ಹೊಸಪೇಟೆ - ೫೮೩ ೨೦೧

# ಜನಪದ ಸೀತಾಯಣ



ಅಗಸನ ಮಾತ ಕೇಳಿ ಪ್ರೀತಿಯ ಸತಿಯಳ
ಅಡವೀಗಿ ಅಟ್ಟಿದ ನಮ್ಮ ಅಯೋಧ್ಯೆ ಶ್ರೀರಾಮ
ಹತ್ತೆಲಿ ರಾವಣ ಎತ್ತಿಕೊಂಡೊಯ್ದಾಗ
ನಿದ್ದಿ-ನೀರಡಿಕಿ ತೊರೆದs ಇವರು ಯಾಕ್ಹಿಂಗ ಮಾಡಿದರ ?

ನಟ್ಟನಡು ದಾರ್ಯಾಗ ಅಡವಿ ಆರ್ಯಾಣದಾಗ
ಹೊಟ್ಯಾನ ಮಾತಹೇಳಿs ಅಳುತಾನ ಲಕ್ಷ್ಮಣ
ಭೂಮ್ಯಾಗ ಹುಟ್ಟಿದವಳು ಬೆಂಕ್ಯಾಗ ಹಾದವಳು
ದಿನ ತುಂಬಿದ ಸೀತಾ ಮೈದುನಗ ಹೌಹಾರಿ ಕೇಳ್ಯಾಳ.

ಮೂವರು ಅತ್ತೇರು ಮೂವತ್ತು ದಾಸೇರು
ಮಂತ್ರಿ-ಸಭಾಸದರs ಮತ್ತ ನನ್ನ ನೆಗೆಣ್ಯಾರ
ಧರ್ಮದ ಹೆಸರೇಳಿ ಅಣ್ಣನ ಕೆರು ಹೊತ್ತ
ಭರತ, ಶತ್ರುಘ್ನರು ಕೇಳಲಿಲ್ಲೇನ ಯಾರ ?

ಲೆಂಕಿಯ ಸುಟ್ಟಾಂವ ಹಣಮಂತ ಎಲ್ಲಿದ್ದ,
ಮತ್ತ ಬರುವನೇನs ಮಾರುತಿ ರಾಮನುಂಗುರ ಹಿಡದ ?
ದುಂಡನ ಮೊಗದವಳು ದೊಡ್ಡ ಕಣ್ಣಿನವಳು
ಮೈಯೆಲ್ಲ ಕಣ್ಣಾಗಿ ತನ್ನ ರಾಮನ ಹುಡುಕುವಳ.

ಇಲ್ಲನನ ಹಡದವ್ವ ಅಣ್ಣ ಬರುವದಿಲ್ಲ
ನನ್ನನ್ನ ಕಳುವ್ಯಾನ ಅಡವ್ಯಾಗ ಬಿಟ್ಟುಬಾರಂದಾನ.

ನನ್ನಂಥ ಪಾಪಿಯು ಲೋಕದೊಳಗ್ಯಾರಿಲ್ಲ
ಮುಗಿಸಿಬಿಡವ್ವ ನನ್ನ ಅತ್ತಿಗೆ ರಾಮಗ ಬೈಬ್ಯಾಡ.

ಒಳ್ಳೆದ್ದು ನೆನಿಬೇಕ, ಕೇಡನ ಮರಿಬೇಕ
ಖೋಡಿ ಮನಸ ಹ್ಯಾಂಗs ಹಿಡದು ನಿಲ್ಲಿಸಬೇಕ ?
ದೆವ್ವ ತಾ ಬಡದಾಂಗ, ಕರಿನಾಗ ಕಡದಾಂಗ
ಬವಳ್ಹತ್ತಿ ಬಿದ್ದಾಳು ನೆಲಕ ಭೂಮಿ ತಾಯಿಯ ಮಗಳ.

ಕೋಡಿನ ಜೋಡನ್ನ ಹುಳಮೇದು ಅಳಿದಾಂಗ
ಆಡಿನ ಜೋಡಮಲಿ ಕೋದು ಅಗಲಿಸಿದಾಂಗ
ತೊರೆದಾನ ಶ್ರೀರಾಮs ತನ್ನ ಮಡದಿಯ ಸಂಗ
ಕೂಡಿ ಆಡಿದ ಮನಸ ಇದಕ ಒಪ್ಪಿತಾದರೂ ಹ್ಯಾಂಗ !

ಅಣ್ಣ ಜಿಗಿಯಂದರ ಟಣ್ಣನ ಜಿಗಿಯುವ
ರಾಮನ ತಮ್ಮನs ಸೀತವನ ಮೈದುನ ಲಕ್ಷ್ಮಣ
ಹೂನಂದು ಹೊಂಟಾನ, ಹೋಗದ ಹೊಂಟಾನ
ಅಡವಿ ಆರ್ಯಾಣದಾಗs ಬೋರ್ಯಾಡಿ ಅಳು ಕೇಳಿ ನಿಂತಾನ.

ಕೋಗಿಲ ಅಳುತಿತ್ತ, ನವುಲ ತಾ ನಾಚಿತ್ತ
ಗೂಗಿ ಗುರ್ರನುತಿತ್ತs ರಾಮಗ ಕರುಣವಿಲ್ಲೇನಂತ !
ತಿಳಿಹೇಳುತಾವ ಗಿಳಿ, ಇಂದಿನಂಗಲ್ಲ ನಾಳಿ
ಬಂದೇ ಬರುತಾನ ರಾಮs ಗೆಳತಿ ಎದಿಯಾನ ದನಿಕೇಳಿ.

''ಬರುವ ಹಾಂಗಿದ್ದರ ಕಳುವತಿದ್ದನ್ಯಾಕ ?
ಕುತನಿ ಗಾದಿಗಿ ಸೋತs ಪತಿರಾಯ ಬಲಿಯಾದ ಪಾಪಕ
ಅತ್ತಿ ಕೌಸಲ್ಲಿಗ್ಹೇಳು ತಪ್ಪು ನನದೇ ಅಂತ
ಹೆಣ್ಣಾಗಿ ಹುಟ್ಟಿದ್ದು ರಾಮನ ಕಣ್ಣಾಗಿ ಬೆಳದದ್ದು.''

ಅತ್ತತ್ತು ಬಿದ್ದಾಳ, ಎಸರಾಗಿ ಕುದ್ದಾಳ
ತುಂಬ ಸೆರಗ ಹೊದ್ದು ಸೀತವ್ವ ಮುಂದಕ ನಡದಾಳ
ಎಸಳಂತಾ ಬೆರಳೀಲಿ ಹೂವ-ಹಣ್ಣs ಹರದು
ಉಡಿಯಾಗ ತುಂಬ್ಯಾಳ ರಾಮಗ ಎಡಿಯ ಮಾಡಂದಾಳ.

ಅಡವೀಗಿ ಕೈಮುಗದು ಅತಿಗೀನ ಅಡವಿಟ್ಟು
ಹೊರಳಿ ನೋಡದಲೋದs ತಮ್ಮ ಗತಿಗೇಡಿ ಲಕ್ಷ್ಮಣ
ವಾಲ್ಮೀಕಿ ಋಷಿ ಬಂದ, ಹಣ್ಣು-ಹಂಪಲ ತಂದ
ತಿನ್ನಿಸಿ ಉಣ್ಣೇಸಿ ತನ್ನ ಗುಡಿಸಲಕ ಕರೆದೊಯ್ದ.

ಹಲುಬಬ್ಯಾಡವ್ವ ಮಗಳ ಹಾಲುಗಲ್ಲದ ನಾರಿ
ಅವನು ತುಂಬಿದ ಒಡಲs ಅವನ ಸೋಲಿಗಿ ತಾಂಬೂಲ
ಜೋಡಿಲಿ ಹುಟ್ಟುವರ ಒಂದೆಲ್ಯಾಗುಣ್ಣುವರ
ಕುದುರಿಯ ಕಟ್ಟುವರs ರಾಮನ ಹಂಕಾರ ಮೆಟ್ಟುವರ.

ಅವರದು ತಪ್ಪಿಲ್ಲ, ಹಂಕಾರ ಮೊದಲಿಲ್ಲ
ದೊರಿಧರ್ಮಕ ಬಲಿ ನನ್ನ ದೊರಿಯಾದ ಶ್ರೀರಾಮ
ತಾಪತ್ರಿ ನನಗಿರಲಿ ಹೂಪತ್ರಿ ಅವರಿಗಿರಲಿ
ನಿಮ್ಮ ದಯವಿರಲಿ ರಾಮರ ಕೀರುತಿ ಹಬ್ಬಲಿ.

ಅವನಿಗಿಂತಧಿಕಳು ಅವನಿಯ ಮಗಳವ್ವ
ಹಾಡಿ ಹೊಗಳುವೆ ನಿನ್ನs ಜೋಡಿಲಿ ರಾಮನ ಹೆಸರಿಟ್ಟು
ಸೀತಾರಾಮಗ ಒಡವಿ ರಾಮ ಸೀತಾಗ ಅಡವಿ
ಪೊಡವಿಗಧಿಕ ಬಾಪೂಗೌಡನ ಕೊಣ್ಣೂರ ಚಿನುಮಾಯಿ.


ಬಿ. ಆರ್. ಪೋಲಿಸ್ ಪಾಟೀಲ
ಬನಹಟ್ಟಿ, ಬಾಗಲಕೋಟೆ ಜಿಲ್ಲೆ




ಅಮೆರಿಕನ್ ಮತ್ತು ಬ್ರಿಟಿಷ್ ಸೇನೆಗಳು ಇರಾಕಿನ ನಗರಗಳ ಮೇಲೆ ನಾಲ್ಕು ವಾರಗಳು ಬಾಂಬುಗಳ ಮಳೆಗರೆದು, ಎಲ್ಲವನ್ನೂ ಧ್ವಂಸ ಮಾಡಿ ಇರಾಕಿನ ಜನರನ್ನು ಸರ್ವಾಧಿಕಾರಿ ಸದ್ದಾಮ್ ಹುಸೇನನ ಆಳ್ವಿಕೆಯಿಂದ 'ವಿಮೋಚನೆ'ಗೊಳಿಸಿದ ದೃಶ್ಯಗಳನ್ನು ಮಾಧ್ಯಮದಲ್ಲಿ ನೋಡಿದ್ದಾಯಿತು. ಅದರ ಹಿಂದೆಯೇ ರಾಜಧಾನಿ ಬಾಗ್ದಾದ್ ಅನ್ನು ಒಳಗೊಂಡಂತೆ ಪ್ರಮುಖ ನಗರಗಳಲ್ಲಿ ಹರಡಿದ ಅರಾಜಕತೆ, ಲೂಟಿ ಹಗರಣಗಳು ಹಾಗೂ ಆಕ್ರಮಣಕಾರಿ ಸೈನಿಕರ ನಿರ್ದಯವಾದ ದೌರ್ಜನ್ಯದ ದೃಶ್ಯಗಳನ್ನೂ ಕಂಡದ್ದಾಯಿತು. ಯುದ್ಧದ ಭೀಕರತೆ, ಕ್ರೌರ್ಯ, ಅಮಾನುಷತೆಗಳ ಪ್ರತ್ಯಕ್ಷ ದರ್ಶನವಾಗಿತ್ತು ಅವು. ಹತ್ತು ವರ್ಷಗಳಿಗೂ ಹೆಚ್ಚು ಕಾಲದಿಂದ ಅಮೆರಿಕ ಹೇರಿದ್ದ ಆರ್ಥಿಕ ದಿಗ್ಬಂಧನದಿಂದ ಈ ಮೊದಲೇ ತತ್ತರಿಸುತ್ತಿದ್ದ ಇರಾಕಿನ ಜನ ಈ ಯುದ್ಧದಿಂದ ಇನ್ನಷ್ಟು ಸಂಕಷ್ಟಗಳಿಗೀಡಾಗಿದ್ದಾರೆ. ಅಮಾನುಷವಾದ, ಕ್ರೂರವಾದ ಬಾಂಬು ದಾಳಿಯಿಂದ ಸಹಸ್ರಾರು ಮಂದಿ

# ಪ್ರಪಂಚದ ಅತಿದೊಡ್ಡ ಭಯೋತ್ಪಾದಕ ರಾಷ್ಟ್ರ ಅಮೆರಿಕ

ಅಮಾಯಕ ನಾಗರಿಕರು ಸಾವಿಗೀಡಾಗಿದ್ದಾರೆ, ಗಾಯಾಳುಗಳಾಗಿದ್ದಾರೆ. ಇರಾಕ್ ಇಂದು ಸುಟ್ಟು ಬೂದಿಯಾಗಿ ಮಸಣದ ಗೋರಿಯಂತಾಗಿದೆ. ಐತಿಹಾಸಿಕ ಸ್ಮಾರಕಗಳು, ಆಸ್ಪತ್ರೆಗಳು, ಶಾಲೆಗಳು, ವಸತಿ ಕಟ್ಟಡಗಳು ಎಲ್ಲ ನೆಲಸಮಗೊಂಡು ಇರಾಕ್ ಅತ್ಯುಗ್ರ ಭೂಕಂಪನಕ್ಕೀಡಾದಂತೆ ತೋರುತ್ತಿದೆ. ಉನ್ನತ ತಂತ್ರಜ್ಞಾನದಿಂದ ನಿರ್ದೇಶಿತಗೊಂಡು ನಿರ್ದಿಷ್ಟ ಮಿಲಿಟರಿ ಸ್ಥಾಪನೆಗಳನ್ನು ಗುರಿ ಇರಿಸಿ ಬಾಂಬು ದಾಳಿ ನಡೆಸಲಾಗುತ್ತಿದೆ ಎಂಬ ಅಮೆರಿಕದ ಪ್ರಚಾರವೆಲ್ಲ ಹುರುಳಿಲ್ಲದ್ದು. ಯದ್ವಾತದ್ವಾ ದಾಳಿ ನಡೆಸಿ ಪುಡಿಗುಟ್ಟಿರುವುದಕ್ಕೆ ಮಾಧ್ಯಮಗಳಲ್ಲಿ ಪ್ರಸಾರವಾದ ದೃಶ್ಯಗಳೇ ನಿದರ್ಶನ. ಈ ಹತ್ಯಾಕಾಂಡದಿಂದ ಲಕ್ಷಗಟ್ಟಲೆ ಇರಾಕಿ ಜನ ನಿರಾಶ್ರಿತರಾಗಿದ್ದಾರೆ. ಇಷ್ಟೆಲ್ಲ ಅವಾಂತರ ಉಂಟುಮಾಡಿದ ಅಮೆರಿಕಾಗೆ ಸೇಡು ತೀರಿಸಿಕೊಂಡ ಸಮಾಧಾನ. ಅದು ಆಪಾದಿಸಿದ್ದಂತೆ ಇರಾಕಿನ ಬಳಿ ಯಾವ ಸಾಮೂಹಿಕ ವಿನಾಶಕಾರಿ ಅಸ್ತ್ರಗಳೂ ಪತ್ತೆಯಾಗಲಿಲ್ಲ. ಹಾಗೇನಾದರೂ ಇದ್ದಿದ್ದರೆ ಖಂಡಿತ ಸದ್ದಾಮ್ ಹುಸೇನ್ ಅಮೆರಿಕನ್ ಸೈನಿಕರ ಮೇಲೆ ಪ್ರಯೋಗಿಸುತ್ತಿದ್ದ. ಸದ್ದಾಮ್ ಹುಸೇನ್ ಕೂಡ ಅಮೆರಿಕನ್ನರ ವಶವಾಗಲಿಲ್ಲ. ಇದರಿಂದ ಅಮೆರಿಕದ ಅಕ್ರಮ ದಾಳಿಯ ಹಿಂದಿನ ಹಸಿ ಸುಳ್ಳು ಪೂರ್ಣವಾಗಿ ಬಯಲಾಗಿದೆ. ಈ ಯುದ್ಧ ನಡೆಸಿದ್ದು ಇರಾಕನ್ನು ಆಕ್ರಮಿಸಿಕೊಳ್ಳುವುದರ ಮೂಲಕ ಇಡೀ ಮಧ್ಯಪ್ರಾಚ್ಯದ ಮೇಲೆ ತನ್ನ ಹಿಡಿತವನ್ನು ಸ್ಥಾಪಿಸಿಕೊಳ್ಳುವ ಉದ್ದೇಶದಿಂದ ಎಂಬುದು ಈಗ ರುಜುವಾತು ಗೊಂಡಿದೆ. ಏಕಚಕ್ರಾಧಿಪತ್ಯ ಸ್ಥಾಪಿಸುವ ಹೆಬ್ಬಯಕೆಯನ್ನು ಈಡೇರಿಸಿಕೊಳ್ಳುವ ನಿಟ್ಟಿನಲ್ಲಿ ಈ ಯುದ್ಧ ಅಮೆರಿಕ ಇರಿಸಿರುವ ದೊಡ್ಡ ಹೆಜ್ಜೆಯಾಗಿದೆ. ಇರಾಕ್ ಯುದ್ಧ ಮುಗಿಯಿತು ಎನ್ನುತ್ತಿರುವಂತೆಯೇ ಮುಂದ ಹದ್ದಿನ ಕಣ್ಣು ಯಾರ ಮೇಲೆ ಎಂಬ ಭೀತಿ ಜಗತ್ತಿನಲ್ಲಿ ಆವರಿಸಿದೆ. ಈ ಯುದ್ಧದ ಮೂಲಕವಾಗಿ ಅಮೆರಿಕ ಇಡೀ ಮಾನವಕುಲಕ್ಕೇ ಸವಾಲೊಡ್ಡಿದೆ.

ಜಗತ್ತಿನ ಜನಾಭಿಪ್ರಾಯವನ್ನು, ಪ್ರತಿಭಟನೆಯನ್ನು, ವಿಶ್ವಸಂಸ್ಥೆಯನ್ನು, ಬಹುತೇಕ ರಾಷ್ಟ್ರಗಳ ಅಭಿಮತವನ್ನು ಧಿಕ್ಕರಿಸಿ ಅಮೆರಿಕ ಇರಾಕಿನ ಮೇಲೆ ನಡೆಸಿದ ಈ ಯುದ್ಧದ ಫಲಿತಾಂಶ ಅನಿರೀಕ್ಷಿತವಾದ್ದೇನಲ್ಲ. ಅತ್ಯಾಧುನಿಕ ಶಸ್ತ್ರಾಸ್ತ್ರಗಳಿಂದ ಸಜ್ಜಿತಗೊಂಡಿರುವ ಪ್ರಪಂಚದ ಅತ್ಯಂತ ಬಲಿಷ್ಠ ರಾಷ್ಟ್ರ ಅಮೆರಿಕವನ್ನು ಎದುರಿಸಿ ಜಯಗಳಿಸುವ ಸಾಮರ್ಥ್ಯ ಏಕಾಂಗಿಯಾಗಿದ್ದ ಇರಾಕ್‌ನಂಥ ಚಿಕ್ಕ ದೇಶಕ್ಕೆ ಇರದೇ ಇದ್ದುದು ವಾಸ್ತವ ಸಂಗತಿ. ಆದರೆ ಇರಾಕಿನ ಆಕ್ರಮಣ ಅಮೆರಿಕದ ನಾಯಕರು ನಿರೀಕ್ಷಿಸಿದ್ದಷ್ಟು ಕ್ಷಿಪ್ರವಾಗಿ, ಸುಲಭವಾಗಿ ಸಾಗಲಿಲ್ಲ. ಇರಾಕಿ ಸೇನೆಗಳು ದಾಳಿಕಾರರನ್ನು ನಿರ್ಭೀತವಾಗಿ ಎದುರಿಸಿ ಕಾದಾಡಿದರು. ಅಮೆರಿಕದ ಸೇನೆಗಳು ತೀವ್ರವಾದ ವಿರೋಧವನ್ನು ಎದುರಿಸಬೇಕಾಯಿತು. ಸದ್ದಾಮ್ ಹುಸೇನನ ಸರ್ವಾಧಿಕಾರಿ ಆಡಳಿತದಿಂದ ಇರಾಕಿನ ಜನತೆ ಬೇಸತ್ತಿರಬಹುದಾದರೂ, ದುರಾಕ್ರಮಣಕಾರಿ ಅಮೆರಿಕನ್ನರನ್ನು ಸ್ವಾಗತಿಸಲು ಸಿದ್ಧರಾಗೇನಿರಲಿಲ್ಲ. ಈಗ ಇರಾಕಿ ಆಕ್ರಮಣ ಪೂರ್ಣಗೊಂಡು ಯುದ್ಧ ಮುಗಿದಿದ್ದರೆ, ಶಾಂತಿ ಸ್ಥಾಪನೆ ಇನ್ನೂ ಬಹು ದೂರ. ರಾಷ್ಟ್ರಪ್ರೇಮಿಗಳಾದ ಇರಾಕಿನ ಜನ ಪರಕೀಯರ ಆಳ್ವಿಕೆಯನ್ನು ಸಹಿಸಿಕೊಂಡಿರುವರೆಂದು ಭಾವಿಸಲಾಗದು. ಅಮೆರಿಕ ಇದನ್ನು ಅರಿತುಕೊಂಡೇ ಕೈಗೊಂಬೆ ಸರಕಾರವೊಂದನ್ನು ಸ್ಥಾಪಿಸಿ ಪರೋಕ್ಷವಾಗಿ ಆಡಳಿತ ನಡೆಸಲು ಪ್ರಯತ್ನಿಸುತ್ತಿದೆ. ಯುದ್ಧದಿಂದ ಸಂಕಷ್ಟಗಳಿಗೀಡಾಗಿದ್ದರೂ ಈಗಾಗಲೇ ಇರಾಕಿನ ಜನ ಅಮೆರಿಕದ ವಿರುದ್ಧ ತಮ್ಮ ಆಕ್ರೋಶವನ್ನು ವ್ಯಕ್ತಗೊಳಿಸುತ್ತಿದ್ದಾರೆ. ಅಮೆರಿಕನ್ ಸೈನಿಕರನ್ನು ಇರಾಕಿನಿಂದ ಕಾಲ್ತೆಗೆಯುವಂತೆ ಒತ್ತಾಯ ತರುತ್ತಿದ್ದಾರೆ. ಇರಾಕಿನ ಪುನರ್ನಿರ್ಮಾಣ ಕಾರ್ಯದಲ್ಲಿ, ಮುಂದಿನ

> **ಇರಾಕಿನ ಮೇಲೆ ಅಮೆರಿಕ ನಡೆಸಿದ ಯುದ್ಧದಿಂದಾಗಿ ಭಯೋತ್ಪಾದಕ ಕೃತ್ಯಗಳು ಇನ್ನಷ್ಟು ಹೆಚ್ಚುವ ಸಾಧ್ಯತೆಗಳಿವೆ. ಪ್ರಪಂಚದ ಅತಿ ದೊಡ್ಡ ಭಯೋತ್ಪಾದಕ ರಾಷ್ಟ್ರವಾಗಿರುವ ಅಮೆರಿಕವನ್ನು ಪ್ರತ್ಯಕ್ಷವಾಗಿ ಎದುರಿಸಲು ಸಾಧ್ಯವಾಗದಿರುವಾಗ ಭಯೋತ್ಪಾದಕ ಕೃತ್ಯಗಳೊಂದೇ ವಿಧಾನ ಎನಿಸಿದಲ್ಲಿ ಅಚ್ಚರಿ ಏನಿಲ್ಲ. ಈ ಯುದ್ಧದಿಂದ ಅಮೆರಿಕ ಸಮಸ್ಯೆಗಳನ್ನು ಬಗೆಹರಿಸುವುದಕ್ಕಿಂತ ಜಗತ್ತಿನಲ್ಲಿ ಹೆಚ್ಚು ಸಮಸ್ಯೆಗಳನ್ನು ಹುಟ್ಟುಹಾಕಿದೆ.**
>
> **ಸೀಯಾರ್ಕೆ**

ಆಡಳಿತದ ಸ್ಥಾಪನೆಯ ವಿಚಾರದಲ್ಲಿ ವಿಶ್ವಸಂಸ್ಥೆಯನ್ನು, ಇತರ ಮಿತ್ರರಾಷ್ಟ್ರಗಳನ್ನೂ ದೂರವಿರಿಸಲು ಅಮೆರಿಕ ನಿರ್ಧರಿಸಿದೆ. ಇರಾಕಿನ ಪುನರ್‌ಸ್ಥಾಪನೆಯ ಕಾರ್ಯದಲ್ಲಿ ವಿಶ್ವಸಂಸ್ಥೆಗೆ ಪ್ರಮುಖ ಪಾತ್ರವಿರಬೇಕು ಎಂಬ ಹಲವು ದೇಶಗಳ ಒತ್ತಾಯವನ್ನು ಅಮೆರಿಕ ನೇರವಾಗಿ ತಿರಸ್ಕರಿಸಿದೆ. ಯುದ್ಧ ಇನ್ನೂ ನಡೆಯುತ್ತಿರುವಾಗಲೇ ಅಮೆರಿಕ ಇರಾಕಿನ ಪುನರ್ನಿರ್ಮಾಣ ಕಾರ್ಯಗಳಿಗೆ ತನ್ನ ಬೃಹತ್ ಬಹುರಾಷ್ಟ್ರೀಯ ಸಂಸ್ಥೆಗಳಿಗೆ ಕಂಟ್ರಾಕ್ಟ್‌ಗಳನ್ನು ನೀಡಿರುವ ಸುದ್ದಿ ಪ್ರಕಟಗೊಂಡಿತ್ತು. ಇರಾಕಿನ ತೈಲ ಸಂಪತ್ತನ್ನು ಅಪಹರಿಸುವುದು, ಇರಾಕಿನ ನೆಲದಲ್ಲಿ ಭದ್ರ ನೆಲೆ ಸ್ಥಾಪಿಸಿಕೊಳ್ಳುವುದಷ್ಟೇ ಅಮೆರಿಕದ ಗುರಿ. ಇರಾಕಿನ ಜನತೆಯ ಒಳಿತಿಗಾಗಿ ಪುನರ್ನಿರ್ಮಾಣ ಕಾರ್ಯದ ಮಾತುಗಳೆಲ್ಲ ಪ್ರಚಾರ ತಂತ್ರ ಅಷ್ಟೆ. ಅಫ್ಘಾನಿಸ್ತಾನದ ಪುನರ್ನಿರ್ಮಾಣದ ಗತಿ ಅದಕ್ಕೆ ಸಾಕ್ಷಿ. ಯುದ್ಧ ಒಂದು ನಿರ್ಣಾಯಕ ಘಟ್ಟ ತಲುಪುತ್ತಿದ್ದ ಹಾಗೆಯೇ ಇರಾಕಿನ ಪುನರ್ನಿರ್ಮಾಣದ ಹೆಸರಿನಲ್ಲಿ ಲಾಭ ಸೂರೆ ಮಾಡಲು ಕಚ್ಚಾಟ ಪ್ರಾರಂಭವಾದ್ದು ಗಮನಾರ್ಹ. ಸಿಂಹಪಾಲು ಕಬಳಿಸುವ ಅಮೆರಿಕ ನೀಡುವ ಶಿಲ್ಕುಗಳಿಂದಲೇ ಇತರ ರಾಷ್ಟ್ರಗಳು ತೃಪ್ತಿಪಟ್ಟುಕೊಳ್ಳಬೇಕು ಅಷ್ಟೆ. ವಿಶ್ವಸಂಸ್ಥೆಯನ್ನು ಧಿಕ್ಕರಿಸಿ ಯುದ್ಧವನ್ನು ನಡೆಸಿದ ಅಮೆರಿಕ ಈಗ ಎಲ್ಲದರಲ್ಲೂ ಅದನ್ನು ದೂರವಿರಿಸಲು ನಿರ್ಧರಿಸಿರುವುದೀಗ ಗಮನಾರ್ಹವಾದ ಬೆಳವಣಿಗೆ. ಪ್ರಪಂಚದ ಎಲ್ಲ ರಾಷ್ಟ್ರಗಳನ್ನೂ ಪ್ರತಿನಿಧಿಸುವ ವಿಶ್ವಸಂಸ್ಥೆಯ ಬಹ್ವಂಶ ರಾಷ್ಟ್ರಗಳ ಅಭಿಪ್ರಾಯಕ್ಕೆ ಮನ್ನಣೆ ನೀಡದಿರುವ ಅಮೆರಿಕ ಯಾವ ದಿಶೆಯಲ್ಲಿ ಹೊರಟಿದೆ ಎನ್ನುವುದನ್ನು ಇದು ತೋರಿಸುತ್ತದೆ. ತನ್ನನ್ನು ಎದುರಿಸುವ ಧೈರ್ಯ ಯಾವ ದೇಶಕ್ಕೂ ಇಲ್ಲ ಎನ್ನುವ ಅಹಮಿಕೆಯಿಂದ ಅಮೆರಿಕ ಬೀಗುತ್ತಿದೆ.

ಎರಡನೆಯ ಮಹಾಯುದ್ಧದ ಕಾಲದಲ್ಲಿ ಅಸಾಧಾರಣ ಮಿಲಿಟರಿ ಹಾಗೂ ಆರ್ಥಿಕ ಪ್ರಾಬಲ್ಯವನ್ನು ಗಳಿಸಿಕೊಂಡಿದ್ದ ಅಮೆರಿಕ ಜಗತ್ತಿನ ಮೇಲೆ ತನ್ನ ಹತೋಟಿಯನ್ನು ಸ್ಥಾಪಿಸುವ ಬಯಕೆಯನ್ನು ಪ್ರದರ್ಶಿಸಿತ್ತು. ಯುದ್ಧ ಮುಕ್ತಾಯ ಹಂತದಲ್ಲಿದ್ದು ಜಪಾನ್ ಶರಣಾಗತವಾಗಲಿದ್ದ ಸಮಯದಲ್ಲಿ ಅಮೆರಿಕ ಜಪಾನಿನ ಹಿರೋಷಿಮ ಮತ್ತು ನಾಗಾಸಾಕಿ ನಗರಗಳ ಮೇಲೆ ಅನವಶ್ಯಕವಾಗಿ ಪರಮಾಣು ಬಾಂಬು ದಾಳಿ ನಡೆಸಿತು. ಈ ದಾಳಿ ನಡೆಸಿದ್ದು ಭಯಂಕರವಾದ ಹೊಸ ಅಸ್ತ್ರವನ್ನು ಪ್ರಯೋಗ ಮಾಡಿ ನೋಡಬೇಕೆಂಬ ದೃಷ್ಟಿಯಿಂದ ಮಾತ್ರವೇನಲ್ಲ, ಅಮೆರಿಕ ಈ ಭಯೋತ್ಪಾದನೆಯ ಚರ್ಯೆ ನಡೆಸಿದ್ದು ಎಲ್ಲ ದೇಶಗಳಿಗೂ ನೀಡಿದ ಎಚ್ಚರಿಕೆಯಾಗಿತ್ತು. ತನ್ನ ಅಭಿಲಾಷೆಗಳಿಗೆ, ಹಿತಾಸಕ್ತಿಗಳಿಗೆ ಅಡ್ಡ ಬಂದವರಿಗೆ ತಕ್ಕ ಶಾಸ್ತಿಯಾಗುವುದೆಂದು ಪ್ರಚುರ ಪಡಿಸುವುದಾಗಿತ್ತು. ಆದರೆ ಅಂದು ಸೋವಿಯತ್ ಒಕ್ಕೂಟ ಅಮೆರಿಕದ ಅಧಿನಾಯಕತ್ವದ ಬಯಕೆಗಳಿಗೆ ಸವಾಲು ಒಡ್ಡಲು ಸಮರ್ಥವಾಗಿದ್ದುದರಿಂದ ಅದು ಮುಂದುವರಿಯಲಿಲ್ಲ. ಸೋವಿಯತ್ ಒಕ್ಕೂಟದ ವಿಘಟನೆಯಿಂದಾಗಿ ಅಮೆರಿಕಾಗೆ ಅಡ್ಡಿ ನಿವಾರಣೆಯಾದಂತಾಯಿತು. ಕಳೆದ ಒಂದು ದಶಕಕ್ಕೂ ಹೆಚ್ಚು ಕಾಲದಿಂದ ಏಕೈಕ ಪ್ರಬಲ ರಾಷ್ಟ್ರವಾಗಿ ಮೆರೆಯುತ್ತಿರುವ ಅಮೆರಿಕ ಈಗ ತನ್ನ ನಿಜವಾದ ಬಣ್ಣವನ್ನು ತೋರಿಸುತ್ತಿದೆ. ಆರ್ಥಿಕವಾಗಿ ಜಗತ್ತಿನ ರಾಷ್ಟ್ರಗಳನ್ನು ಐ.ಎಂ.ಎಫ್, ವರ್ಲ್ಡ್ ಬ್ಯಾಂಕ್, ಡಬ್ಲ್ಯುಟಿಒಗಳ ಮೂಲಕ ಜಾಗತೀಕರಣದ ಬಲೆ ಬೀಸಿ ಅಧೀನಕ್ಕೊಳಪಡಿಸಿಕೊಳ್ಳುವುದರಲ್ಲಿ ಅಮೆರಿಕ ಈಗಾಗಲೇ ಸಾಕಷ್ಟು ಸಫಲಗೊಂಡಿದೆ. ಈಗ ತನ್ನ ಮಿಲಿಟರಿ ಪ್ರಾಬಲ್ಯದಿಂದ ತನಗೆ ಎದುರಾಗಿರುವ ದೇಶಗಳನ್ನು ಅಧೀನಕ್ಕೊಳಪಡಿಸಿಕೊಳ್ಳಲು ಹೊರಟಿದೆ. ಇರಾಕಿನ ಯುದ್ಧ ಈ ನಿಟ್ಟಿನಲ್ಲಿ ಇರಿಸಿರುವ ದೊಡ್ಡ ಹೆಜ್ಜೆ. ಪ್ರಪಂಚದ ಎಲ್ಲ ದೇಶಗಳಿಗೂ ಅಮೆರಿಕದ ಅಪೇಕ್ಷೆಗಳಿಗೆ, ಹಿತಾಸಕ್ತಿಗಳಿಗೆ ಅಡ್ಡಿ ಬಂದರೆ, ಆಣತಿಗಳನ್ನು ಉಪೇಕ್ಷಿಸಿದರೆ ತಕ್ಕ ಶಾಸ್ತಿಯಾಗುವುದು ಎಂದು ನೀಡಿರುವ ಸಂದೇಶ. ಅಮೆರಿಕ ವಕ್ತಾರರ ಹೇಳಿಕೆಗಳಲ್ಲಿ, ಅಧ್ಯಕ್ಷ ಜಾರ್ಜ್ ಡಬ್ಲ್ಯು. ಬುಷ್‌ನ ಭಾಷಣಗಳಲ್ಲಿ ಈ ಎಚ್ಚರಿಕೆ ಮಾತುಗಳನ್ನು ಗಮನಿಸಬಹುದಾಗಿದೆ.

ಇರಾಕಿನ ಯುದ್ಧ ಕೊನೆಗೊಳ್ಳುತ್ತಿರುವಂತೆಯೇ ಅಮೆರಿಕದ ವಕ್ರದೃಷ್ಟಿ ಸಿರಿಯಾದ ಮೇಲೆ ಬಿದ್ದಿದೆ. ಸದ್ದಾಮ್ ಹುಸೇನನ ಪರಿವಾರ ಹಾಗೂ ಅನುಯಾಯಿಗಳಿಗೆ ಸಿರಿಯಾ ಆಶ್ರಯ ನೀಡಿದೆ ಎಂದೂ, ಸಿರಿಯಾ ವಿನಾಶಕಾರಿ ರಾಸಾಯನಿಕ ಪರೀಕ್ಷಿಸಿದೆ ಎಂದೂ ಅಮೆರಿಕ ಆಪಾದಿಸಿದೆ. ದುಷ್ಟ ರಾಷ್ಟ್ರಗಳ ಪಂಕ್ತಿಗೆ ಈಗ ಅಮೆರಿಕ ಸಿರಿಯಾವನ್ನೂ ಸೇರಿಸಿದೆ. ಇರಾನ್, ಉತ್ತರ ಕೊರಿಯಾಗಳು ಈ ಮೊದಲೇ ಪಟ್ಟಿಯಲ್ಲಿವೆ. ಇನ್ನೂ ಗದಾಫಿ ಆಡಳಿತೆಯಲ್ಲಿರುವ ಲಿಬಿಯಾ ಪಟ್ಟಿ ಸೇರುವುದೊಂದು ಬಾಕಿ ಇದೆ. ಒಂದಾದ ಮೇಲೆ ಒಂದರಂತೆ ಮಧ್ಯಪ್ರಾಚ್ಯದ ಎಲ್ಲ ದೇಶಗಳ ಮೇಲೂ ತನ್ನ ಹತೋಟಿ ಸ್ಥಾಪಿಸಿಕೊಳ್ಳುವುದು ಅಮೆರಿಕದ ಗುರಿ. ತೈಲ ಸಂಪತ್ತಿನಿಂದ ಕೂಡಿರುವ ಇಡೀ ಪಶ್ಚಿಮ ಏಶಿಯಾದ ಭೂಭಾಗವನ್ನು ತನ್ನ ತೆಕ್ಕೆಗೆ ಸೇರಿಸಿಕೊಂಡರೆ, ಜಗತ್ತಿನಾದ್ಯಂತ ತನ್ನ ಹಿಡಿತ ಸ್ಥಾಪಿಸಿಕೊಳ್ಳುವುದಕ್ಕೆ ಅನುಕೂಲ ಎನ್ನುವುದು ಅಮೆರಿಕದ ಲೆಕ್ಕಾಚಾರ. ಭೌಗೋಳಿಕವಾಗಿ ಮಧ್ಯಭಾಗದಲ್ಲಿರುವ ಈ ಪ್ರದೇಶ ಆಫ್ರಿಕ, ಏಷಿಯಾ ಮತ್ತು ಯೂರೋಪು ಖಂಡಗಳಿಗೆ ಸಮೀಪದಲ್ಲಿದೆ. ಇರಾಕಿನ ರಾಜಧಾನಿ ಬಾಗ್ದಾದ್, ಲಂಡನ್, ಜೊಹಾನ್ಸ್‌ಬರ್ಗ್ ಮತ್ತು ಬೀಜಿಂಗ್‌ಗಳಿಗೆ ಹೆಚ್ಚುಕಡಿಮೆ ಸಮ ದೂರದಲ್ಲಿದೆ. ಇದರಿಂದ ಅಮೆರಿಕಾಗೆ ಚೀಣಾ, ಇಂಡಿಯಾ, ರಷ್ಯಾಗಳ ಮೇಲೆ ಒತ್ತಡ ತರಲು ಅವಕಾಶವಾಗುತ್ತದೆ. ಒಂದು ಕಡೆ ಇಸ್ರೇಲ್, ಇನ್ನೊಂದು ಕಡೆ ಅಮೆರಿಕದ ಬೆಂಬಲದಿಂದ ಅಧಿಕಾರದಲ್ಲಿರುವ ಕೈಗೊಂಬೆ ಸರಕಾರಗಳು ಮಧ್ಯ ಪ್ರಾಚ್ಯದಲ್ಲಿ ಅಮೆರಿಕದ ಹಂಚಿಕೆಗಳಿಗೆ ಸೋಪಾನಗಳಾಗಿವೆ.

ಇಷ್ಟೆಲ್ಲ ಆಗಿದ್ದರೂ ಅಮೆರಿಕದ ಅಧಿನಾಯಕತ್ವದ ಹಂಚಿಕೆಗಳು ಈಡೇರುವುದು ಅಷ್ಟು ಸುಲಭವೇನಲ್ಲ. ಪ್ರಪಂಚದ ಜನತೆ ಎಚ್ಚೆತ್ತಿದ್ದಾರೆ. ಇರಾಕಿನ ಮೇಲೆ ಅಮೆರಿಕದ ದಾಳಿಗೆ ವಿರುದ್ಧವಾಗಿ ಪ್ರಪಂಚದ ಎಲ್ಲೆಡೆಗಳಲ್ಲಿ, ಮುಖ್ಯವಾಗಿ ಅಮೆರಿಕದಲ್ಲೇ ಲಕ್ಷೋಪಲಕ್ಷ ಸಂಖ್ಯೆಯಲ್ಲಿ ಜನಸಾಮಾನ್ಯರು ನಡೆಸಿದ ಪ್ರದರ್ಶನಗಳು ಸಾಮಾನ್ಯವೇನಲ್ಲ. ಇಸ್ಲಾಮಿಕ್ ರಾಷ್ಟ್ರಗಳಲ್ಲಿ ಅಲ್ಲಿನ ಸರಕಾರಗಳ ದಬ್ಬಾಳಿಕೆಯಿಂದಾಗಿ ಪ್ರತಿಭಟನೆ ಅಷ್ಟು ತೀವ್ರವಾಗಿಲ್ಲದೇ ಹೋಗಿದ್ದರೂ ಅಮೆರಿಕದ ವಿರೋಧಿ ಭಾವನೆ ಜನರಲ್ಲಿ ತೀವ್ರವಾಗಿದೆ. ಯುದ್ಧದ ಸಾವುನೋವುಗಳ ವಿವರಗಳು, ಕಷ್ಟನಷ್ಟಗಳು ಸ್ಪಷ್ಟವಾಗಿ ಹೊರಹೊಮ್ಮುತ್ತಿದ್ದಂತೆ ಅಮೆರಿಕ ವಿರೋಧಿ ಭಾವನೆಗಳು ಅಧಿಕಗೊಳ್ಳುವುದು ಖಚಿತ. ಮುಂದೆ ಇದು ಕ್ರೋಢೀಕೃತಗೊಂಡು ಸಂಘಟಿತ ರೂಪ ಪಡೆದುಕೊಂಡೀತು. ಪ್ರಪಂಚದ ಎಲ್ಲ ಪ್ರಮುಖ ಚಿಂತಕರು, ಬುದ್ಧಿಜೀವಿಗಳು, ಮಾನವತೆಯ ಪ್ರೇಮಿಗಳು, ವಿವೇಕಿಗಳು ಅಮೆರಿಕದ ಯುದ್ಧ ದಾಹವನ್ನು ಕಟುವಾಗಿ ವಿರೋಧಿಸಿರುವುದು ಗಮನಿಸಬೇಕಾದ ಸಂಗತಿ. ಎಲ್ಲ ಕಾಲದಲ್ಲೂ ಜನ ಅನ್ಯಾಯವನ್ನು ಸಹಿಸಿಕೊಂಡಿರುವರು ಎಂದು ಅಮೆರಿಕದ ನಾಯಕರು ಎಣಿಸಿದ್ದರೆ ಅದು ತಪ್ಪು ಲೆಕ್ಕಾಚಾರ. ಇದನ್ನು ಅವರು ಅರಿತುಕೊಂಡರೆ ಒಳಿತು.

ಇರಾಕಿನ ಮೇಲೆ ಅಮೆರಿಕ ನಡೆಸಿದ ಯುದ್ಧದಿಂದಾಗಿ ಭಯೋತ್ಪಾದಕ ಕೃತ್ಯಗಳು ಇನ್ನಷ್ಟು ಹೆಚ್ಚುವ ಸಾಧ್ಯತೆಗಳಿವೆ. ಪ್ರಪಂಚದ ಅತಿ ದೊಡ್ಡ ಭಯೋತ್ಪಾದಕ ರಾಷ್ಟ್ರವಾಗಿರುವ ಅಮೆರಿಕವನ್ನು ಪ್ರತ್ಯಕ್ಷವಾಗಿ ಎದುರಿಸಲು ಸಾಧ್ಯವಾಗದಿರುವಾಗ ಭಯೋತ್ಪಾದಕ ಕೃತ್ಯಗಳೊಂದೇ ವಿಧಾನ ಎನಿಸಿದಲ್ಲಿ ಅಚ್ಚರಿ ಏನಿಲ್ಲ. ಈ ಯುದ್ಧದಿಂದ ಅಮೆರಿಕ ಸಮಸ್ಯೆಗಳನ್ನು ಬಗೆ ಹರಿಸುವುದಕ್ಕಿಂತ ಜಗತ್ತಿನಲ್ಲಿ ಹೆಚ್ಚು ಸಮಸ್ಯೆಗಳನ್ನು ಹುಟ್ಟುಹಾಕಿದೆ.




ಸೀಯಾರ್ಕೆ
೮೪೯, ೬ನೇ ಕ್ರಾಸ್, ೧ನೇ ಮೇನ್ ಬನಶಂಕರಿ
೩ನೇ ಹಂತ, ೩ನೇ ಫೇಸ್, ೩ನೇ ಬ್ಲಾಕ್,
ಕತ್ರಿಗುಪ್ಪೆ, ಬೆಂಗಳೂರು- ೫೬೦ ೦೮೫

# ನಮ್ಮ ವಿದ್ಯಾಪದ್ಧತಿ ಹಾಳಾಗಿರುವುದೇ ಗೋಡೆ ಮತ್ತು ಕುರ್ಚಿ ವಿದ್ವಾಂಸರಿಂದ

*ಡಾ|| ಹಿ. ಶಿ. ರಾಮಚಂದ್ರೇಗೌಡ್ರು ಅಪರೂಪದ ವ್ಯಕ್ತಿ.*
*ಅವರು ನಮ್ಮ ಜಾನಪದ ಅಕಾಡೆಮಿಯ ಅಧ್ಯಕ್ಷರಾಗಿರುವುದು ನಿಜಕ್ಕೂ ನಮ್ಮ ಜಾನಪದ ಸಂಪತ್ತಿನ ವೃದ್ಧಿಗೆ ದೊರೆತ ಭಾಗ್ಯವೆಂದೇ ಹೇಳಬಹುದು. ಜಾನಪದದ ಸಾರವನ್ನು ಅರಿತು, ವಿಶ್ವಮಾನವತೆಯನ್ನು ಜನಪದರ ಹೃದಯಗಳಲ್ಲಿ ಮೂಡಿಸಿ, ಭ್ರಾತೃತ್ವವನ್ನು ಬೆಳೆಸುವ ಕಲಾ ಸಂಜೀವಿನಿ ಶಕ್ತಿ ಎಂದರೆ ಡಾ|| ಹಿ. ಶಿ. ರಾಮಚಂದ್ರೇಗೌಡ್ರು. ತಮ್ಮ ಅಂತರಂಗದ ಭಾವನೆಗಳನ್ನು ನನ್ನೊಂದಿಗೆ ಹಂಚಿಕೊಂಡಿದ್ದಕ್ಕಾಗಿ ಅವರಿಗೆ ಕೃತಜ್ಞತೆಗಳು.* — *ಸಂದರ್ಶಕ*

**ಸಣ್ಣವೀರಣ್ಣ ಹಾ. ದೊಡ್ಡಮನಿ**

**ಕ**ಲೆಗಳು ಜನರಲ್ಲಿ ಧರ್ಮ, ಸಂಪ್ರದಾಯ, ಮೌಲ್ಯ ಮುಂತಾದವುಗಳನ್ನು ಪುನರು ಜ್ಜೀವನಗೊಳಿಸಲು ಮತ್ತು ಚೇತನಗೊಳಿಸಲು ಸಂಜೀವಿನಿ ಶಕ್ತಿಯಾಗಿವೆ ಎಂಬ ಮಾತು ಶತಸತ್ಯ. ಅಂತಹ ಕಲೆಗಳಲ್ಲಿ ಒಂದಾದ ಕರಪಾಲ ಕಲೆಯೂ ಒಂದು. ಈ ಕಲೆ ಉತ್ತರ ಕರ್ನಾಟಕದಲ್ಲೇ ಹುಟ್ಟಿದ್ದರೂ ಅದರ ಅವಶೇಷಗಳ ಮೇಲೆ ಆಧುನಿಕ ಹಾವಳಿಯ ಜಡ ಸಂಪ್ರದಾಯಗಳು ಮೇಲೇರಿ ಕರಪಾಲ ಕಲೆಯನ್ನು ತಲೆ ಎತ್ತದಂತೆ ಮಾಡಿವೆ. ಆದ್ದರಿಂದ ಈ ಕಲೆಯು ದಕ್ಷಿಣ ಕರ್ನಾಟಕಕ್ಕೆ ಮಹಾಪೂರವಾಗಿ ಹರಿದುಹೋಗಿದೆ. ಅದರ ಮೂಲ ನೆಲೆಯನ್ನು ಅರಿತು ಡಾ|| ಹಿ. ಶಿ. ರಾಮಚಂದ್ರೇಗೌಡ್ರು, ಉತ್ತರ ಕರ್ನಾಟಕದ ಕಲೆಯಾದ ಇದನ್ನು ತವರು ನಾಡಿನಲ್ಲಿ ಮತ್ತೆ ಬೆಳೆಸಿ, ಪ್ರೋತ್ಸಾಹಿಸಬೇಕೆಂಬ ಹಂಬಲದಿಂದ, ಉತ್ತರ ಕರ್ನಾಟಕದ ಗಂಡು ಮೆಟ್ಟಿನ ಸ್ಥಳ ಹುಬ್ಬಳ್ಳಿಯ ಶ್ರೀ ಸದ್ಗುರು ಸಿದ್ಧಾರೂಢರ ಕೈಲಾಸ ಮಂಟಪದಲ್ಲಿ ಕರಪಾಲ ಕಮ್ಮಟ ಉದ್ಘಾಟನಾ ಸಮಾರಂಭವಿಟ್ಟುಕೊಂಡಿದ್ದರು. ನಾನು ಮೂಲತಃ ಸಂಶೋಧನ ವಿದ್ಯಾರ್ಥಿಯಾದ್ದರಿಂದ ಬಹಳ ಉತ್ಸುಕತೆಯಿಂದ ಕಮ್ಮಟದಲ್ಲಿ ಭಾಗವಹಿಸಿದೆ. ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಅಧ್ಯಕ್ಷರು, ಇತರ ಅಕಾಡೆಮಿ ಅಧ್ಯಕ್ಷರು ಮಾಡಿದಂತೆ ಇವರೂ ಉದ್ಘಾಟನೆ ಮಾಡಿ, ಒಂದೆರಡು ಮಾತು ಹೇಳಿ ಹೊರಟುಹೋಗುತ್ತಾರೆ ಎಂದುಕೊಂಡಿದ್ದೆ. ಆದರೆ ಹಾಗೆ ಮಾಡದೆ ರಾಮಚಂದ್ರೇಗೌಡರು ಕರಪಾಲ ಕಮ್ಮಟದ ಒಂದೊಂದು ಹಾಡನ್ನು ಹಾಡಿ ಅದರ ಅರಿವು ಮೂಡಿಸಿದರು. ಅದರಲ್ಲಿ ಒಂದು ಉದಾಃ "ಹುಬ್ಬಳ್ಳಿ ಎಂಬುದು ಕೈಲಾಸ, ಸಿದ್ಧಾರೂಢ ಪರಮೇಶ" ಎಂದು ಪ್ರಾರಂಭ ಮಾಡಿದರು. ಅವರ ತಾಳ, ಲಯಬದ್ಧವಾದ ಹಾಡುಗಾರಿಕೆ ಶಿಬಿರಾರ್ಥಿಗಳನ್ನು ಮತ್ತು ಮಠದ ಭಕ್ತರನ್ನು ಮಂತ್ರಮುಗ್ಧರನ್ನಾಗಿಸಿತು. ಹಾಗೆಯೇ, ಶಿಶುನಾಳ ಶರೀಫ - ಸದ್ಗುರು ಸಿದ್ಧಾರೂಢರಂತಹ ಪುಣ್ಯ ಪುರುಷರ, ಪುಣ್ಯ ಭೂಮಿಯಾದ ಈ ಉತ್ತರ ಕರ್ನಾಟಕದ ನೆಲದ ಸತ್ವವೋ ಏನೋ, 'ತಕ್‌ಥೈ' ಎಂದು ಕುಣಿಯುತ್ತ, ತಾಳಹಾಕುತ್ತ, ಕುಲುಮೆಯಲ್ಲಿ ಕಮ್ಮಾರನು ಕಾದ ಕಬ್ಬಿಣವನ್ನು ತನಗೆ ಬೇಕಾದ ಹಾಗೆ ಬಾಗಿಸಿಕೊಳ್ಳುವಂತೆ ಶಿಬಿರಾರ್ಥಿಗಳನ್ನು ಸತತವಾಗಿ ಆರು ತಾಸುಗಳವರೆಗೆ ತಿದ್ದಿ ತೀಡಲು ಮುಂದಾದರು ಗೌಡರು. ಇದನ್ನು ಕಂಡು ನನಗೆ ಆಶ್ಚರ್ಯ ಮತ್ತು ಆನಂದವೂ ಆಯಿತು. ಯಾವ ಹಮ್ಮು ಬಿಮ್ಮುಗಳಿಲ್ಲದ ನಿರಾಡಂಬರ ವ್ಯಕ್ತಿತ್ವವುಳ್ಳ ವಿದ್ವಾಂಸರು ಆ ಕಲೆಯನ್ನು ಎಷ್ಟು ಪರಿಶ್ರಮದಿಂದ ಕಲಿಸುತ್ತಿದ್ದಾರಲ್ಲಾ ಎಂದುಕೊಂಡು ಮತ್ತೊಂದು ಸಲ ಅಧ್ಯಕ್ಷರು ಕೇವಲ ತೋರಿಕೆಗಾಗಿ ಈ ನೃತ್ಯ ಮಾಡುತ್ತಿರುವರೋ ಏನೋ ಎಂದು ಅವರ ಅಂತರಂಗದ ಫಲ ಹೇಗೆ ಇರಬಹುದು ಎಂಬುದನ್ನು ಅಳೆಯಲು ನನ್ನ ಮನಸ್ಸು ಹಾತೊರೆಯಿತು. ಹಾಗಾಗಿ ಅವರೊಡನೆ ಕೆಲವು ಸಮಯ ಕಳೆಯುವ ಸುಸಂದರ್ಭ ಒದಗಿಬಂತು.

**ದೊಡ್ಡಮನಿ :** ಹಾಡನ್ನು ಹೇಗೆ ಕಲ್ತಿರುವಿರಿ ?

**ಹಿ. ಶಿ. ರಾ. :** ನಮ್ಮ ತಾಯಿ ಮೂಲತಃ ಒಳ್ಳೆಯ ಜನಪದ ಗೀತೆಗಳನ್ನು ಹಾಡುತ್ತಿದ್ದಳು. ಹಾಗೇ ತುಂಬಾ ಜಾನಪದ ಕಥೆಗಳನ್ನು ಹೇಳುತ್ತಿದ್ದಳು. ತಾಯಿ ಹೊಲಕ್ಕೆ ಸಸಿ ನಾಟಿ ಮಾಡಲು ಹೋದಾಗ ಇತ್ತ ಅಮ್ಮನ ಕಡೆ ಹೋಗುತ್ತಿದ್ದೆ, ಆಗ ಅವರು ಅನೇಕ ಕಥನ ಗೀತೆ ಹೇಳುತ್ತಿದ್ದರು. ಮದುವೆ ಶೋಭಾನೆ ಹೇಳಲು ಹೋಗುತ್ತಿದ್ದರು. ಹೆಣ್ಣು ಮಕ್ಕಳು ಋತುಮತಿ ಯಾದಾಗ ಹಸೆ ಹಾಡುಗಳನ್ನು ಹೇಳಲು ಹೋಗುತ್ತಿದ್ದರು. ಅಮ್ಮನ ಜೊತೆಗೆ ಹೋಗಿ ನಾನು ಅಲ್ಲಿ ಹಾಡುಗಳನ್ನು ಕಲ್ತುಕೊಂಡೆ, ನನ್ನ ಅಕ್ಕಂದಿರಾದ ಲಕ್ಷ್ಮಮ್ಮ, ಸಾವಂತ್ರೆಮ್ಮ ಮತ್ತು ಪುಟ್ಟಮ್ಮ ತುಂಬಾ ಹಾಡುಗಳನ್ನು ಹಾಡುತ್ತಿದ್ದರು. ಅಂದಿನಿಂದ ಹಾಡೋದನ್ನ ಕಲ್ತುಕೊಂಡೆ.

**ದೊಡ್ಡಮನಿ :** ಕರಪಾಲದ ಹಾಡು ಕಲಿತುಕೊಂಡಿದ್ದು ಯಾವಾಗ ?

**ಹಿ. ಶಿ. ರಾ. :** ನಾನು ಹುಡುಗನಾಗಿದ್ದಾಗ ನಮ್ಮ ಹಳ್ಳಿಗೆ ಕರಪಾಲದ 'ಐಯ್ನೋರಮೇಳ' ಕರೆದುಕೊಂಡು ಬರುತ್ತಿದ್ದರು. ಸಂಜೆ ಹೊತ್ತು ನಾನು ತಪ್ಪದೇ ಈ ಮೇಳ ನೋಡುತ್ತಿದ್ದೆ, ಅವರ ಹಾಡುಗಳನ್ನು, ಕುಣಿತವನ್ನು ಅನುಕರಿಸುತ್ತಿದ್ದೆ. ನಾನು ಎಂ. ಎ. ಮಾಡಿ ಮಾಸ್ತರ ಪದವಿಗೇರಿ ಪಾಠ ಹೇಳಲು ಸುರು ಮಾಡಿದ ಮೇಲೆ ನನ್ನ ಸಹಪಾಠಿಗಳನ್ನು ಕೂಡಿಸಿಕೊಂಡು 'ಕರಪಾಲ ಮೇಳ' ಕಟ್ಟಿ ಪ್ರದರ್ಶನ ಕೊಡಲು ಸುರು ಮಾಡಿದೆ. ಮೈಸೂರು ವಿಶ್ವವಿದ್ಯಾಲಯದ ಬಯಲು ರಂಗಮಂದಿರ, ಬೆಂಗಳೂರಿನ ಪ್ರೆಸ್ ಕ್ಲಬ್, ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಅನೇಕ ಕಡೆಗಳಲ್ಲಿ ಪ್ರದರ್ಶನ ನೀಡಿದೆವು. ಆಗ ನನ್ನ ಶಿಷ್ಯರಾಗಿದ್ದ ಡಾ|| ನಲ್ಲೂರ ಪ್ರಸಾದ ಈಗ ಬೆಂಗಳೂರು ವಿ.ವಿ.ಪುರಂ ಕಾಲೇಜಿನಲ್ಲಿ ಪ್ರಾಧ್ಯಾಪಕರು. ವಿಶ್ವೇಶ್ವರಯ್ಯ ಎನ್ನುವರು ಬಳ್ಳಾರಿ ವೀರಶೈವ ಕಾಲೇಜಿನಲ್ಲಿ ಪ್ರಾಧ್ಯಾಪಕರು. ಡಾ|| ಶಿವಕುಮಾರಸ್ವಾಮಿ ಕುವೆಂಪು ವಿ.ವಿ.ಯಲ್ಲಿ ಪ್ರಾಧ್ಯಾಪಕರು, ಎಸ್. ಎ. ಕೃಷ್ಣಯ್ಯ ಉಡುಪಿ ರಂಗ ಕಲೆಗಳ ಅಧ್ಯಯನ ಕೇಂದ್ರದಲ್ಲಿ ಹಿರಿಯ ಸಂಶೋಧಕರು.

**ದೊಡ್ಡಮನಿ :** ಅಧ್ಯಕ್ಷರಾಗಿ ನೀವು ಕುಣಿತೀರಲ್ಲಾ ನಿಮಗೆ ಮುಜುಗರ ಅನಿಸುವುದಿಲ್ಲವೆ ?

**ಹಿ. ಶಿ. ರಾ. :** ನಾನು ಒಣ ವಿದ್ವಾಂಸ ಅಲ್ಲ. ಪುಸ್ತಕ ಓದಿ ವಿದ್ವಾಂಸರಾಗುವವರ ಬಗ್ಗೆ ನನಗೆ ಅಂತಾ ಗೌರವವಿಲ್ಲ. ವಿದ್ವಾಂಸನಿಗೆ ಕ್ರಿಯಾಶೀಲತೆ ಬೇಕು. ಜಾನಪದ ವಿದ್ವಾಂಸನಿಗಂತೂ ಒಂದಿಲ್ಲೊಂದು ಜನಪದ ಕಲೆಗಳಲ್ಲಿ ಪರಿಶ್ರಮವಿರಬೇಕು ಎಂದು ನಾನು ಬಯಸುತ್ತೇನೆ. ಇಲ್ಲದಿದ್ದರೆ ಅಂಥ ವಿದ್ವಾಂಸ ಒಬ್ಬ ಸುಲೆಕೋರ ಎನಿಸಿಕೊಳ್ಳುತ್ತಾನೆ. ಕಲೆ ಮತ್ತು ಕಲಾವಿದರಿಗೆ ಏನೂ ಮಾಡದೆ ಅವರ ಹೆಸರಿನಲ್ಲಿ ಜೀವನ ಮಾಡುವವರನ್ನು ನಾನು ದೊಡ್ಡ ವಿದ್ವಾಂಸ ಎಂದು ಕರೆಯುವುದಿಲ್ಲ. ನಮ್ಮ ವಿದ್ಯಾಪದ್ಧತಿ ಹಾಳಾಗಿರುವದೇ ಗೋಡೆ ಮತ್ತು ಕುರ್ಚಿ ವಿದ್ವಾಂಸರಿಂದ.

**ದೊಡ್ಡಮನಿ :** ಜನಪದ ಕಲೆಗಳಲ್ಲಿ ಮೂಢತನ ಇದೆ ಎಂದು ಹೇಳುತ್ತಾರಲ್ಲ?

**ಹಿ. ಶಿ. ರಾ. :** ಹಾಗೆ ಹೇಳುವವರು ಮೂಢರು. ಕಲೆ ಕೇವಲ ಕುಣಿತ ಅಥವಾ ಮನರಂಜನೆಯಲ್ಲ, ಅದೊಂದು ಸಂದೇಶವಾಹಕ. ಪ್ರತಿಯೊಂದು ಜಾನಪದ ಕಲೆಯೂ ಅದು ಹುಟ್ಟಿರುವ ಸಮಾಜಕ್ಕೆ ಮಾರ್ಗದರ್ಶನ ಮಾಡುತ್ತದೆ. ಉದಾ : ವೀರಗಾಸೆ ಕುಣಿತ. ೧೨ನೇ ಶತಮಾನದ ನಂತರ ವೀರಗಾಸೆ ಹುಟ್ಟಿಕೊಂಡಿತ್ತು, ಆಗ ಶರಣಧರ್ಮಕ್ಕೆ ಅಪಾಯವಿತ್ತು. ಅಂತಹ ಸಂದರ್ಭದಲ್ಲಿ ಕೆಲವರು ವೀರಗಾಸೆ ಹಾಕಿ ಸೈನಿಕರಾಗಿ ನಿಂತುಕೊಂಡು ವೀರಶೈವ ಧರ್ಮವನ್ನು ರಕ್ಷಿಸಿದರು. ಇಲ್ಲದಿದ್ದರೆ ಅದು ಬೌದ್ಧ ಧರ್ಮದಂತೆ ದೇಶ ಬಿಟ್ಟು ಗಡೀಪಾರಾಗಿ ಹೋಗಬೇಕಾಗಿತ್ತು. ಜಾನಪದ ಕಲೆಗಳನ್ನು ನೋಡುವವರು ಅವುಗಳ ಚರಿತ್ರೆಯನ್ನು ಚೆನ್ನಾಗಿ ತಿಳಿದುಕೊಳ್ಳಬೇಕು.

**ದೊಡ್ಡಮನಿ :** ಮದುವೆ ಹಾಡುಗಳ ಬಗ್ಗೆ ಏನು ಹೇಳುವಿರಿ ?

**ಹಿ. ಶಿ. ರಾ. :** ಈಗ ಹುಡುಗ-ಹುಡುಗಿ ಪ್ರೇಮಿಸಿ ಓಡಿಹೋಗಿ ಮದುವೆ ಆಗ್ತಾರೆ, ಆಗ ಹಿಂದೆ ಅಷ್ಟು ಸುಲಭವಾಗಿ ಓಡಿಹೋಗುವ ಅವಕಾಶವಿರಲಿಲ್ಲ. ಮದುವೆ ಎಂಬುದು ಎಲ್ಲರ ಶುಭ ಹಾರೈಕೆಯ ಒಂದು ಕಾರ್ಯಕ್ರಮವಾಗಿತ್ತು. ಜೊತೆಗೆ ಗಂಡು-ಹೆಣ್ಣು ಕೂಡಿ ಬಾಳಲು ಹೇಳಿಕೊಡುವ ಮೊದಲ ಪಾಠವಾಗಿತ್ತು. ಅಲ್ಲಿಯ ಕೆಲವು ಹಾಡುಗಳು ದೋಷ ಪೂರ್ಣವಾಗಿದ್ದರೆ ಅವುಗಳನ್ನು ಬಿಡಬಹುದಲ್ಲಾ.

**ದೊಡ್ಡಮನಿ :** ಬೆಂಗಳೂರಿನ ಅಕಾಡೆಮಿಗಳು ದಾವಣಗೇರಿ ಬಿಟ್ಟು ಈಚೆಗೆ ಬರುವುದಿಲ್ಲ ಎಂಬ ಮಾತಿದೆಯಲ್ಲ?

**ಹಿ. ಶಿ. ರಾ. :** ಕರ್ನಾಟಕ ಎಂದರೆ ಬೆಂಗಳೂರು ಅಥವಾ ದಾವಣಗೇರಿ ಅಲ್ಲ,

ಬೆಂಗಳೂರಿನ ವ್ಯಾಮೋಹವಿರುವ ಅಧ್ಯಕ್ಷರು ಮಾತ್ರ ಅಲ್ಲೆ ಬೆಂಗಳೂರು ಸುತ್ತಾಮುತ್ತಾ ಅಡ್ಡಾಡಬಹುದು. ಒಟ್ಟು ಕರ್ನಾಟಕದ ಅರಿವು ಇರುವವರು ಹಾಗೆ ಮಾಡುವುದಿಲ್ಲ. ಜಾನಪದ ಅಕಾಡೆಮಿ ಯಾವ ಕಾರಣಕ್ಕೂ ದಕ್ಷಿಣ ಕರ್ನಾಟಕಕ್ಕೆ ಸೀಮಿತವಾಗಬಾರದು. ಸಮೃದ್ಧ ಜಾನಪದ ಸಂಪತ್ತು ಇರುವುದು ಉತ್ತರ ಕರ್ನಾಟಕದಲ್ಲಿ. ದಕ್ಷಿಣ ಕರ್ನಾಟಕದಲ್ಲಿ ಅನೇಕ ಹಳ್ಳಿಗಳು ನಗರ ಸಂಸ್ಕೃತಿಯಿಂದ ಬೆರೆಕೆಯಾಗಿಹೋಗಿವೆ. ಉತ್ತರ ಕರ್ನಾಟಕದಲ್ಲಿ ಗ್ರಾಮ ಸಂಸ್ಕೃತಿ ತುಂಬಿ ತುಳುಕುತ್ತಿದೆ. ಈ ಕಡೆಗೆ ಹೆಚ್ಚಿನ ಆದ್ಯತೆ ನೀಡಬೇಕು. ಇತ್ತಕಡೆಯ ದಾನಿಗಳು ಜಾನಪದ ಅಕಾಡೆಮಿಗೆ ಸ್ಥಳೀಯ ನೆರವು ಕೊಟ್ಟು ಕಾರ್ಯಕ್ರಮ ಯಾಚಿಸಬೇಕು.

**ದೊಡ್ಡಮನಿ:** ನಿಮಗೆ ಎಷ್ಟು ಕಲೆಗಳು ಗೊತ್ತು? ಅವುಗಳೆಲ್ಲವನ್ನು ಈಗ ಉಳಿಸಿಕೊಂಡಿದ್ದೀರಾ ?

**ಹಿ. ಶಿ. ರಾ. :** ನನಗೆ ಶೋಬಾನೆ ಪದ, ತಿಂಗಳ ಮಾವನ ಪದ, ಗಾಡಿ ಪದ, ಸೋಮನ ಪದ ಹಾಗೂ ಕೋಲಾಟದ ಪದಗಳನ್ನು ಹಾಡಲು ಗೊತ್ತು.

ಕಲೆಗಳಲ್ಲಿ ಕೋಲಾಟ, ವೀರಭದ್ರನ ಕುಣಿತ, ಕರಪಾಲ, ಮತ್ತು ಮೂಡಲ ಪಾಯದ ಬಯಲಾಟ ಗೊತ್ತು. ನಾನು ಪ್ರಾಧ್ಯಾಪಕನಾದ ಮೇಲೂ ಇವನ್ನು ಪ್ರಯೋಗಿಸುತ್ತಿದ್ದೇನೆ. ಈ ವಿಷಯದಲ್ಲಿ ಕರಾವಳಿಯ ವಿದ್ಯಾವಂತರಿಗೆ ಕೈ ಮುಗಿಯಬೇಕು.

**ದೊಡ್ಡಮನಿ :** ನಿಮ್ಮ ಅಕಾಡೆಮಿಯು ಯೋಜಿಸಿರುವ ಹೊಸ ಕಾರ್ಯಕ್ರಮಗಳು ಯಾವುವು ?

**ಹಿ. ಶಿ. ರಾ. :** ಹಿಂದೆ ಜಾನಪದ ಎಂದರೆ ಹಾಡು ಹಾಡುವುದು ಮತ್ತು ಕುಣಿಯುವುದು ಎಂದು ತಿಳಿದಿದ್ದರು. ಜಾನಪದ ಎಂದರೆ ಅಷ್ಟು ಮಾತ್ರವಲ್ಲ. ಪಾರಂಪರಿಕವಾಗಿ ಬೆಳೆದು ಬಂದ ಜ್ಞಾನ ಪದ್ಧತಿಯೆಲ್ಲವೂ ಇದರೊಳಗೆ ಸೇರುತ್ತವೆ. ಜಾನಪದ ಆಹಾರ, ಆಭರಣ, ಕರಕುಶಲ ಕಲೆ, ವೈದ್ಯ, ನೀರಿನ ತಂತ್ರಜ್ಞಾನ, ವ್ಯವಸಾಯ ಉಪಕರಣಗಳ ತಂತ್ರಜ್ಞಾನ, ಪ್ರಸಾಧನ ಕಲೆ, ಇವೆಲ್ಲವೂ ಸೇರುತ್ತವೆ. ಇವೆಲ್ಲವಕ್ಕೂ ಪ್ರೋತ್ಸಾಹ ಅಗತ್ಯವಿದೆ. ಈ ಎಲ್ಲ ಕ್ಷೇತ್ರಗಳ ಹಳ್ಳಿಯ ತಜ್ಞರಿಗೆ ನಾವು ಪ್ರಶಸ್ತಿಯನ್ನು ಕೊಟ್ಟಿದ್ದೇವೆ. ಆದ್ದರಿಂದ ನಾನು ಅಕಾಡೆಮಿಗೆ ಬಂದಮೇಲೆ ಈ ಪ್ರಶಸ್ತಿಗಳನ್ನು 'ಜಾನಪದ' ಜ್ಞಾನ-ವಿಜ್ಞಾನ ಪ್ರಶಸ್ತಿಗಳೆಂದು ಕರೆದಿದ್ದೇವೆ. ನಾವು ಇರುವ ಕಲೆಗಳ ಪ್ರದರ್ಶನದ ಜೊತೆಗೆ ಆ ಕಲೆಗಳನ್ನು ಬೆಳೆಸುವ ನಮ್ಮ ಪ್ರಯತ್ನವನ್ನು ಮಾಡುತ್ತಿದ್ದೇವೆ. ಕರಪಾಲ ಕಮ್ಮಟ, ತೊಗಲು ಗೊಂಬೆ ಕಮ್ಮಟ, ಮಹಿಳಾ ಜಾನಪದ ಕಲೆಗಳ ಕಮ್ಮಟ ಮತ್ತು ನಗರದ ವಿದ್ಯಾವಂತರಿಗೆ ಜಾನಪದ ಕಲೆ ಮತ್ತು ಹಾಡುಗಳನ್ನು ಕಲಿಸುವ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದೇವೆ.

*ಹಿ. ಶಿ. ರಾಮಚಂದ್ರಗೌಡರೊಡನೆ ಸಂದರ್ಶಕ*

ಇತ್ತೀಚಿನ ದಿನಗಳಲ್ಲಿ ನಮ್ಮ ಯುವಕರು ನಮ್ಮ ಸಾಂಪ್ರದಾಯಿಕ ಸಂಗೀತ ಬೇಸರವಾಗಿದೆ ಎಂದು ಪಾಶ್ಚಾತ್ಯ ಸಂಗೀತದ ಕಡೆಗೆ ಓಡಿಹೋಗುತ್ತಿದ್ದಾರೆ. ಈ ತಪ್ಪು ಗ್ರಹಿಕೆಯನ್ನು ಹೋಗಲಾಡಿಸಲು ನಮ್ಮ ಅನೇಕ ಜನಪದ ವಾದ್ಯಗಳ ಸಂಗೀತವನ್ನು ಹೊರಗೆ ತೆಗೆಯುವ ಕಾರ್ಯಕ್ರಮವನ್ನು ಹಾಕಿಕೊಂಡಿದ್ದೇವೆ. ಮಾರ್ಚ್ ೮ ಮತ್ತು ೯ರಂದು ಉಡುಪಿಯಲ್ಲಿ 'ಕರಾವಳಿ ಜಾನಪದ ವಾದ್ಯಗಳ ಕಮ್ಮಟ'ವನ್ನು ಇಟ್ಟುಕೊಂಡಿದ್ದೇವೆ. ಅಲ್ಲಿ ಹೊಸ ಸಂಗೀತದ ಸಾಧ್ಯತೆಯನ್ನು ಹುಡುಕುತ್ತಿದ್ದೇವೆ.

**ದೊಡ್ಡಮನಿ :** ಇಂದು ಜಾನಪದ ಅಧ್ಯಯನ ಯಾವ ದಿಕ್ಕಿನಲ್ಲಿ ಸಾಗ್ತಾಯಿದೆ ?

**ಹಿ. ಶಿ. ರಾ. :** ವಿಶ್ವವಿದ್ಯಾಲಯಗಳಲ್ಲಿ ಈ ಜಾನಪದ ಅಧ್ಯಯನ ನಿಧಾನ ಆಗಿದೆ. ಈಗಿನ ವಿದ್ವಾಂಸರಿಗೆ ರಾಷ್ಟ್ರ ಮತ್ತು ದೇಶದ ಕಾಳಜಿಗಿಂತ ಸ್ವಂತ ಕಾಳಜಿ ಜಾಸ್ತಿಯಾಗಿದೆ. ಹೆಚ್ಚಿನ ಜನ ಪಾಶ್ಚಾತ್ಯರನ್ನು ಅನುಕರಿಸುತ್ತಿದ್ದಾರೆ. ಇಲ್ಲವೇ ಪಾಶ್ಚಾತ್ಯರಿಗೆ ಸಾಮಗ್ರಿಯನ್ನು ಸಾಗಿಸುವ ಕಾಯಕದಲ್ಲಿ ನಿರತರಾಗಿದ್ದಾರೆ.

ಇತ್ತೀಚಿನ ಪ್ರಜ್ಞಾವಂತ ಯುವಕರು ಕರ್ನಾಟಕದ ಚಿಕ್ಕಚಿಕ್ಕ ಜಾನಪದ ಗುಂಪುಗಳನ್ನು ವಿಶೇಷ ಅಧ್ಯಯನಕ್ಕೆ ಒಳಪಡಿಸುತ್ತಿದ್ದಾರೆ. ಜೋಗೇರರು, ಮುದ್ದೆ ಕುಂಬಾರರು, ಕಿಳ್ಳೇಕೇತರು, ಸುಡುಗಾಡು ಸಿದ್ದರು ಮುಂತಾದ ಕಿರು ಜನಾಂಗಗಳ ಅಧ್ಯಯನ ಜಾನಪದ ಅಧ್ಯಯನಕ್ಕೆ ದೊಡ್ಡ ಕೊಡುಗೆಯಾಗಲಿದೆ. ಹಳ್ಳ-ಹಳ್ಳ ಸೇರಿ ನದಿ, ಅನೇಕ ನದಿಗಳು ಸೇರಿ ಸಮುದ್ರ ಎನ್ನುವಂತೆ, ಭಾರತದ ಒಟ್ಟು ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಲು ಈ ಬಗೆಯ ಅಧ್ಯಯನಗಳು ತುಂಬಾ ಉಪಯುಕ್ತವಾದವು.

**ದೊಡ್ಡಮನಿ :** ಜಾಗತಿಕದ ಪ್ರಭಾವದಿಂದ ನಮ್ಮ ಜಾನಪದ ಏನಾಗಬಹುದು ?

**ಹಿ. ಶಿ. ರಾ. :** ನಮ್ಮ ಮನೆಗೆ ಯಾರೋ ನೆಂಟರು ಬಂದು ಹೋಗುತ್ತಾರೆಂದು ನಮ್ಮ ನಡೆವಳಿಕೆಗಳೇನೂ ಬದಲಾಗುವುದಿಲ್ಲ. ಹುಚ್ಚರು ಮಾತ್ರ ಕಂಡವರ ಬೆನ್ನು ಹತ್ತಿ ಹೋಗುತ್ತಾರೆ. ಉತ್ತಮರು ಇರಬೇಕಾದ ಕಡೆ ಇರುತ್ತಾರೆ. ಜಾಗತೀಕರಣದ ಪ್ರಭಾವದಿಂದ ಅಲ್ಪ ತೃಪ್ತರು ನಮ್ಮ ಕಲೆಗಳನ್ನು ದೂರ ಇಡಬಹುದು. ಆದರೆ ಹಳ್ಳಿಗರು ಅವುಗಳೊಳಗೆ ತಮ್ಮ ಜೀವನವನ್ನು ಇನ್ನೂ ಇಟ್ಟುಕೊಂಡಿದ್ದಾರೆ. ಅಗತ್ಯಬಿದ್ದಲ್ಲಿ ಕಲೆಗಳಲ್ಲಿ ದೋಷಗಳಿದ್ದಲ್ಲಿ ಅವನ್ನು ಬಿಟ್ಟು ಉತ್ತಮವಾದದ್ದನ್ನು ಉಳಿಸಿಕೊಳ್ಳುತ್ತಾರೆ.

**ದೊಡ್ಡಮನಿ :** ಬೇರೆ ಬೇರೆ ಅಕಾಡೆಮಿಗೆ ಹೋಲಿಸಿದರೆ ನಿಮ್ಮ ಅಕಾಡೆಮಿಯ ಸ್ಥಿತಿಗತಿ ಏನು ?

**ಹಿ. ಶಿ. ರಾ. :** ಬೇರೆ ಅಕಾಡೆಮಿಗಳು ಒಂಟಿ ಕುಟುಂಬದ ಹಾಗೆ. ನಮ್ಮ ಅಕಾಡೆಮಿ (ಕೂಡ) ಅವಿಭಕ್ತ ಕುಟುಂಬದ ಹಾಗೆ. ಬೇರೆ ಅಕಾಡೆಮಿಯ ಫಲಾನುಭವಿಗಳನ್ನು ಸುಲಭದಲ್ಲಿ ಲೆಕ್ಕ ಹಾಕಬಹುದು. ಜಾನಪದ ಅಕಾಡೆಮಿಯ ಫಲಾನುಭವಿಗಳ ಸಂಖ್ಯೆ ಹಲವು ಲಕ್ಷ. ಆದರೆ ಸರ್ಕಾರ ಕೊಡುವ ಅನುದಾನ ಎಲ್ಲ ಅಕಾಡೆಮಿಗಳಿಗೂ ಒಂದೇ. ಆದ್ದರಿಂದ ನಮ್ಮ ಕಲಾವಿದರಿಗೆ ಮತ್ತು ತಜ್ಞರಿಗೆ ಸಿಗುವ ಅವಕಾಶ ಬಹಳ ಕಡಿಮೆ. ಒಂದು ದೃಷ್ಟಿಯಲ್ಲಿ ನಮ್ಮ ಅಕಾಡೆಮಿಯ ಬಗ್ಗೆ ಸರ್ಕಾರಕ್ಕೆ ಸರಿಯಾದ ಮಾಹಿತಿ ಇಲ್ಲ. ಇನ್ನೊಂದು ದೃಷ್ಟಿಯಲ್ಲಿ ಹೇಳುವುದಾದರೆ ಅಕಾಡೆಮಿಗೆ ಹಣಕಾಸು ನೀಡುವವರು, ವಿದ್ಯಾವಂತ ಅಧಿಕಾರಿಗಳು ಮತ್ತು ತಜ್ಞರು. ಇವರು ಯಾವಾಗಲೂ ಹಳ್ಳಿಗರ ಮತ್ತು ಬಡವರ ಬಗ್ಗೆ ಮಲತಾಯಿ ಧೋರಣೆಯನ್ನು ತೋರುತ್ತಾರೆ.

**ದೊಡ್ಡಮನಿ :** ದಕ್ಷಿಣ ಕರ್ನಾಟಕದ 'ಕರಪಾಲ' ಕಲೆಯನ್ನು ಉತ್ತರ ಕರ್ನಾಟಕದಲ್ಲಿ ಕಲಿಸುವ ಕಮ್ಮಟ ಮಾಡಿದ್ದು ಏಕೆ ?

**ಹಿ. ಶಿ. ರಾ. :** ಮೂಲತಃ ಕರಪಾಲ ಮೇಳ ಹುಟ್ಟಿದ್ದು ಉತ್ತರ ಕರ್ನಾಟಕದಲ್ಲಿ. ಅದರ ಪೂರ್ವ ಸಂಸ್ಕೃತಿಯ ಪಳೆಯುಳಿಕೆಗಳು ಈಗಲೂ ಉತ್ತರ ಕರ್ನಾಟಕದ ಬೇರೆ ಬೇರೆ ಭಾಗದಲ್ಲಿ ದೊರೆಯುತ್ತವೆ. ದಕ್ಷಿಣ ಕರ್ನಾಟಕದ ಕರಪಾಲ ಕಲಾವಿದರು ಪ್ರಾರ್ಥನೆ ಮಾಡುವಾಗ ಹುಬ್ಬಳ್ಳಿಯ ಶ್ರೀ ಸಿದ್ಧಾರೂಢ ಗುರುಗಳನ್ನು ಜ್ಞಾಪಿಸಿಕೊಳ್ಳುತ್ತಾರೆ. ಅಂದರೆ ಕರಪಾಲ ತಂಡ ಸಿದ್ಧಾರೂಢ ಗುರು ಮಠಕ್ಕೆ ಸೇರಿದ್ದು ಅದು ದಕ್ಷಿಣಕ್ಕೆ ಬಂದಿರಬೇಕು. ಆದ್ದರಿಂದ ಸಿದ್ಧಾರೂಢ ಮಠದಲ್ಲಿ ಕರಪಾಲವನ್ನು ಕಲಿಸುತ್ತಾ ಮೂಲತಃ ಆ ಕಲೆಯನ್ನು ತವರಿಗೆ ಕಳಿಸುವ ಸತ್‌ಸಂಪ್ರದಾಯ ನಡೆಸಿಕೊಟ್ಟಿದ್ದೇವೆ.

ಇನ್ನೊಂದು ಮುಖ್ಯ ಅಂಶವೆಂದರೆ ಈಗ ಭಾರತ ದೇಶ ಬೇರೆ ಬೇರೆ ದೇಶದ ಕಲೆಗಳನ್ನು ನಮ್ಮ ದೇಶದ ಕಲೆಗಳೊಂದಿಗೆ ವಿನಿಮಯ ಮಾಡಿಕೊಳ್ಳುತ್ತದೆ. ಇಂಥ ಸಂದರ್ಭದಲ್ಲಿ ದಕ್ಷಿಣ ಕರ್ನಾಟಕದ ಕಲೆಯೊಂದನ್ನು ಉತ್ತರ ಕರ್ನಾಟಕಕ್ಕೆ ಪರಿಚಯಿಸುವುದು ಪ್ರಾದೇಶಿಕ ಬಾಂಧವ್ಯವನ್ನು ಬೆಳೆಸಿದ ಹಾಗೆ. ಈ ರೀತಿಯ ಸಾಂಸ್ಕೃತಿಕ ವಿನಿಮಯ ಮಾಡುವುದರಿಂದ ಉತ್ತರ ಕರ್ನಾಟಕ ಬೇರೆ, ದಕ್ಷಿಣ ಕರ್ನಾಟಕ ಬೇರೆ, ಎಂಬ ಸಂಕುಚಿತ ಮನೋಭಾವವನ್ನು ಹೋಗಲಾಡಿಸಬಹುದು.

**ದೊಡ್ಡಮನಿ :** ಮಾಧ್ಯಮಗಳಿಂದ ಜಾನಪದ ಅಭಿವೃದ್ಧಿಗೆ ಅನುಕೂಲವಾಗಿದೆಯೇ ?

**ಹಿ. ಶಿ. ರಾ. :** ಒಂದು ದೃಷ್ಟಿಯಲ್ಲಿ ಹಳ್ಳಿಯ ಕಲೆಯನ್ನು ದಿಲ್ಲಿಗೆ ಪರಿಚಯಿಸಿದವರು ಮಾಧ್ಯಮದವರು. ಒಂದು ಸ್ಥಳೀಯ ಜಾನಪದ ಕಲೆಯನ್ನು ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಕಲೆಯನ್ನಾಗಿ ಮಾಡಿದ್ದಾರೆ. ಉದಾಹರಣೆಗೆ, 'ಡೊಳ್ಳು ಕುಣಿತ'. ಉತ್ತರ ಕರ್ನಾಟಕದಲ್ಲಿ ಪ್ರಧಾನವಾಗಿ ಕಂಡುಬರುವ ಈ ಡೊಳ್ಳು ಕಲೆ ಮಾಧ್ಯಮದವರಿಂದಾಗಿ ಈಗ ದಿಲ್ಲಿಯ ಜನರಿಗೆ ಹಾಗೂ ರಷ್ಯಾದ ಜನರಿಗೆ ಬಹು ಮೆಚ್ಚಿನ ಕಲೆಯಾಗಿದೆ. ಇವತ್ತಿಗೂ ಪತ್ರಿಕೆಯವರು ಜನಪದ ಕಲೆಗಳಿಗೆ ಕೊಡುತ್ತಿರುವ ಪ್ರಚಾರ ಅವರ ಕಲಾಭಿರುಚಿಗೆ ಸಾಕ್ಷಿ.

**ದೊಡ್ಡಮನಿ :** ಜಾನಪದದಲ್ಲಿ ಹೊಸ ಕಲೆಗಳನ್ನು ಸೃಷ್ಟಿಸಬಹುದೇ ?

**ಹಿ. ಶಿ. ರಾ. :** ನಿಪುಣನಾದ ಕಲಾವಿದನಿಂದ ಸಾಧ್ಯ. ಜಾನಪದ ಕಲೆಗಳು ಬೆಳೆಯುತ್ತಿವೆ ಮತ್ತು ಬೆಳಸಲೂಬಹುದು. ಈಗಿರುವ ನಮ್ಮ ಜಾನಪದ ಕಲೆಗಳು ಅನೇಕ ಶತಮಾನಗಳ ಹಿಂದೆ ಹುಟ್ಟಿದವು. ಅವುಗಳನ್ನು ಜನಪದ ಕಲಾವಿದರು ತಮ್ಮ ಕಾಲಕ್ಕೆ ತಕ್ಕಂತೆ ತಿದ್ದಿ ತೀಡಿ ಬೆಳೆಸಿಕೊಂಡು ಬಂದಿದ್ದಾರೆ. ಹಳ್ಳಿಯ ಸಂಸ್ಕೃತಿಯ ಬಗ್ಗೆ ತಿಳುವಳಿಕೆ ಮತ್ತು ಸಾಮಾಜಿಕ ಜವಾಬ್ದಾರಿ ಇರುವ ಕಲಾವಿದ ಅಥವಾ ವಿದ್ಯಾವಂತ ಜಾನಪದ ಕಲೆಯನ್ನು ಬೆಳೆಸಬಹುದು.

ಸಣ್ಣ ವೀರಣ್ಣ ಹಾ. ದೊಡ್ಡಮನಿ
ಮಲಪ್ರಭಾ ವಸತಿ ನಿಲಯ, ರೂಂ. ನಂ. ೧೪, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೫೮೦ ೦೦೩



## ಒಳ್ಳೆಯ ಓದು

**ಜೀವಿ ಕಂಡ ಅಮೆರಿಕಾ** (ಪ್ರವಾಸ ಕಥನ)
*ಡಾ॥ 'ಜೀವಿ' ಕುಲಕರ್ಣಿ*
**ಪುಟ :** ೨೮೦ **ಬೆಲೆ :** ರೂ. ೧೨೦
**ಹರ್ಷವರ್ಧನ ಪ್ರಕಾಶನ,** ೮-ಅ, ೧೫, ಗೋವಿಂದ ನಗರ, ಬೊರಿವಲಿ. (ಪ), ಮುಂಬಯಿ - ೪೦೦ ೦೯೨

ಆಗಮಿಕರ ನಾಡೆಂದು ಪ್ರಸಿದ್ಧವಾದ ಅಮೆರಿಕಾ ಪ್ರವಾಸ ಕಥನಗಳು ಇಂದು ಬಹುಸಂಖ್ಯೆಯಲ್ಲಿ ಬರುತ್ತಿದ್ದರೂ ಜೀವಿ ಕುಲಕರ್ಣಿ ತಮ್ಮ ಪ್ರವಾಸವನ್ನು ವಿಶಿಷ್ಟ ರೀತಿಯಲ್ಲಿ ನಿರೂಪಿಸಿದ್ದಾರೆ. ಭೂಮಿಯ ಯಾವ ಭಾಗದಲ್ಲಿದ್ದರೂ ನಾವು ಕನ್ನಡಿಗರೆಂದು ಸಾರುವ ಸಹಸ್ರಮಾನ ವಿಶ್ವ ಕನ್ನಡ ಸಮ್ಮೇಳನದ ಪ್ರತ್ಯಕ್ಷ ವರದಿ ಹಾಗೂ ಅಲ್ಲಿಯ ಕನ್ನಡಿಗರ ಚಟುವಟಿಕೆಗಳನ್ನು ನೀವಿಲ್ಲಿ ಓದಬಹುದು. ಶ್ರೇಷ್ಠ ದರ್ಜೆಯ ಸಂಸ್ಕೃತಿ ಸಂಪತ್ತು ಅಲ್ಲಿ ವಿಜೃಂಭಿಸುತ್ತಿರುವುದು ವಿಶ್ವದ ಎಲ್ಲೆಡೆಯಿಂದ ಬಂದ ಕೊಡುಗೆ ಎಂದು ಗ್ರಹಿಸಬಹುದು.

**ಸಂಘರ್ಷ** (ಅಂಬೇಡ್ಕರ್ ಜೀವನ - ಸಾಧನೆ)
*ಸಂಗ್ರಹ : ಮಂಗ್ಳೂರ ವಿಜಯ*
**ಪುಟ :** ೪೯೨ **ಬೆಲೆ :** ರೂ. ೩೭೫
**ಸಂಬುದ್ಧ ಪ್ರಕಾಶನ,** ವಿದ್ಯಾ ಟ್ಯುಟೋರಿಯಲ್ಸ್ ಪಕ್ಕ, ವಿ. ನಾಗನಹಳ್ಳಿ , ಬೆಂಗಳೂರು - ೫೬೦ ೦೩೨



ದಲಿತೋದ್ಧಾರಕ್ಕಾಗಿ ಸಾಮಾಜಿಕ-ಸಾಂಸ್ಕೃತಿಕ ನೆಲೆಗಳಲ್ಲಿ ಪ್ರಾಮಾಣಿಕವಾಗಿ ದುಡಿದು ಬದುಕನ್ನೇ ಸಂಘರ್ಷಮಯ ವನ್ನಾಗಿಸಿದ ಭಾರತದ ಮಹಾನ್ ಕ್ರಾಂತಿಕಾರಿ ಚೇತನ ದಲಿತರ ಆಶಾಕಿರಣ ಬಿ. ಆರ್. ಅಂಬೇಡ್ಕರ್ ಅವರ ಜೀವನ-ಸಾಧನೆಯನ್ನು ತಿಳಿಸುವ ಕೃತಿ. ಅಂಬೇಡ್ಕರ್‌ರೊಂದಿಗೆ ಬಹುಕಾಲ ನಿಕಟವಾಗಿದ್ದು ಅವರನ್ನು ಕರಾರುವಾಕ್ಕಾಗಿ ಬಲ್ಲ ಧನಂಜಯ ಕೀರ್ ಬರೆದ ಇಂಗ್ಲಿಷ್ ಆವೃತ್ತಿಯ ಸಂಕ್ಷೇಪ ರೂಪವಿದು. ಶತಮಾನಗಳಿಂದ ಅವಮಾನಿತರಾದ ಜನರನ್ನು ಮುಖ್ಯವಾಹಿನಿಗೆ ಸೇರಿಸಿದ ಅವರ ಶ್ರಮದ ಚಿತ್ರಣ.

**ಹುಡುಕಾಟ** (ಕಥಾ ಸಂಕಲನ)
*ಅಬ್ಬಾಸ್ ಮೇಲಿನಮನಿ*
**ಪುಟ :** ೧೪೪ **ಬೆಲೆ :** ರೂ. ೬೦
**ಲೋಹಿಯಾ ಪ್ರಕಾಶನ,** ಕ್ಷಿತಿಜ, ಕಪ್ಪಗಲ್ಲು ರಸ್ತೆ, ಗಾಂಧಿನಗರ ಬಳ್ಳಾರಿ - ೫೮೩ ೧೦೩



ಕಣ್ಮುಂದೆ ನಡೆಯುವ ಎಲ್ಲ ಘಟನೆಗಳನ್ನು ಕಥೆಗಾರ ಅಬ್ಬಾಸ್ ತುಂಬ ಆಳವಾಗಿ ಎಚ್ಚರದಿಂದ ಗ್ರಹಿಸುತ್ತಲೇ ಕಥೆಗಳ ರೂಪು ಕೊಟ್ಟುಬಿಡುತ್ತಾರೆ. ಇವರ ಕಥೆಗಳಲ್ಲಿ ಬರುವ ಪಾತ್ರಗಳು ಎಲ್ಲೂ ಅಡಗಿಕೊಳ್ಳದೆ ದೈನಂದಿನ ಬದುಕಿನಲ್ಲಿ ನಿರಾಯಾಸವಾಗಿ ಗುರುತಿಸಲ್ಪಡು ವಂಥವು. ದಿಟ್ಟ ನಿಲುವು ತಳೆದ ಪಾತ್ರಗಳ ಮೂಲಕ ಚಾಟಿ ಏಟಿನಂತೆ ಬೀಸುವ ಮಾತುಗಳು ಸಾಕಷ್ಟು ಚುರುಕು ಮುಟ್ಟಿಸುತ್ತವೆ. ಸಂಕಲನದಲ್ಲಿ ಎಂಟು ಕಥೆಗಳಿದ್ದು ಸಾಮಾನ್ಯ ಜನರ ನೋವಿಗೆ ಸ್ಪಂದಿಸಿವೆ.



**ಮರೆತ ಮಾತು** (ಕವಿತೆಗಳು)
*ಡಿ. ಎಸ್. ರಾಮಸ್ವಾಮಿ*
**ಪುಟ :** ೬೮ **ಬೆಲೆ :** ರೂ. ೪೫
**ಸಂಚಯ,** ೧೦೦, ೨ನೇ ಮೈನ್, ೬ನೇ ಬ್ಲಾಕ್, ೩ನೇ ಹಂತ, ಬನಶಂಕರಿ, ಬೆಂಗಳೂರು - ೮೫

ಹೊಸ ಹುಮ್ಮಸ್ಸಿನ ಯುವ ಪ್ರತಿಭೆಯೊಂದರ ಲವಲವಿಕೆಯ ಪರಿಚಯ ಕವಿತೆಗಳ ಮೂಲಕ ನಿಮಗಾಗಬಹುದು. ಮಾತು-ಚಿಂತನೆ-ಗ್ರಹಿಕೆಯಲ್ಲಿ ಹೊಸತನವನ್ನು ಮೈಗೂಡಿಸಿಕೊಂಡು ಎಲ್ಲಿಯೂ ಹಿಂದೆ ಬೀಳದೆ ಅನುಭವಗಳನ್ನು ದಟ್ಟವಾಗಿ ಹೆಣೆದ ಕವಿತೆಗಳಿವು. ಹೊಸ ವಿಷಯಗಳತ್ತ ಮುನ್ನುಗ್ಗುವ ಮನಸ್ಸಿನ ವೇಗಕ್ಕೆ ತಕ್ಕ ನಡಿಗೆಯನ್ನು ಹೊಂದಿಸದೆ ಸೋಲುವ ಮನುಷ್ಯನ ಅಸಹಾಯಕತೆಯನ್ನು ಚಿತ್ರಿಸುತ್ತವೆ. ನೀರಿನ ಬುಗ್ಗೆ ಚಿಮ್ಮಿದಂತೆ ಕವಿಯ ಮನಸ್ಸಿನಿಂದ ನೇರ ಮಾತು ಮೂಡಿಬಂದಿದೆ.



**ಶರದದ ಮುಗಿಲು** (ಮುಕ್ತಕಗಳು)
*ಸಿ. ಪಿ. ಕೆ.*
**ಪುಟ :** ೭೨ **ಬೆಲೆ :** ರೂ. ೫೦
**ಚಿತ್ರಭಾನು ಪ್ರಕಾಶನ,** ೨೨೬೫ / ೧೯, ಭಾರತಿ, ೬ನೇ ತಿರುವು, ವಿನಾಯಕ ನಗರ, ಮೈಸೂರು - ೧೨

ಕೆಲವೇ ಸಾಲುಗಳಲ್ಲಿ ಮುಕ್ತಾಯಗೊಳ್ಳುವ ಮುಕ್ತಕವು ಬಹಳಷ್ಟು ಅರ್ಥವನ್ನು ಮೈದುಂಬಿಗೊಂಡ ಖನಿಯಂತೆ. ಕವನ-ವಚನ-ಮುಕ್ತಕಗಳಲ್ಲಿ ಸಮರ್ಥವಾಗಿ ಬದುಕನ್ನು ವಿಶ್ಲೇಷಿಸುತ್ತ ನಡೆದು ಸೈ ಎನ್ನಿಸಿಕೊಂಡ ಸಿ.ಪಿ.ಕೆ. ಅವರ ಇತ್ತೀಚಿನ ಕೊಡುಗೆ ಈ ಎಪ್ಪತ್ತೊಂಬತ್ತು ಮುಕ್ತಕಗಳ ಸಂಕಲನ. ಹೇಳಬೇಕಾದ್ದನ್ನು ಚಿಕ್ಕ-ಚೊಕ್ಕ ಹನಿಗವನಗಳ ಮೂಲಕ ಹೇಳುತ್ತ ನಮಗೊಂದು ಅದ್ಭುತ ಲೋಕವನ್ನು ಪರಿಚಯಿಸಿದ್ದಾರೆ. ಅಂಗೈಯಲ್ಲಿ ಅರಮನೆ ತೋರಿಸುವ ಕೈಚಳಕ.

**ನನಗೆ 'ಬೈ-ಪಾಸ್' ಆಯಿತು** (ಸ್ವಾನುಭವ ಕಥನ)
*ಡಾ॥ ಎಚ್. ಡಿ. ಚಂದ್ರಪ್ಪಗೌಡ*
**ಪುಟ :** ೧೨೦ **ಬೆಲೆ :** ರೂ. ೬೫
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧



ಇಂದು ಹೃದಯ ಸಂಬಂಧಿ ಕಾಯಿಲೆಗಳು ಹೆಚ್ಚುತ್ತಿದ್ದು ಹೃದಯಾಘಾತದಿಂದ ಅಸು ನೀಗುವವರ ಸಂಖ್ಯೆ ಗಣನೀಯ ವಾಗಿ ಏರಿದೆ. ಎಳೆಯ ವಯಸ್ಸಿನವರನ್ನೂ ಬಿಡದೆ ಕಾಡುತ್ತಿದೆ. ಈ ಕೃತಿಯ ಲೇಖಕರಾದ ಪ್ರಸಿದ್ಧ ಶಸ್ತ್ರವೈದ್ಯ ಡಾ॥ ಚಂದ್ರಪ್ಪಗೌಡರು ಬೈ-ಪಾಸ್ ಸರ್ಜರಿಗೊಳಪಟ್ಟು ಹೃದ್ರೋಗಿಯಾಗಿ ಸ್ವತಃ ಆತಂಕದ ಕ್ಷಣಗಳನ್ನೆದುರಿಸಿದ ಸ್ವಾನುಭವ ಕಥನವನ್ನು ನಿರೂಪಿಸಿದ್ದಾರೆ. ಹೃದಯಕ್ಕೆ ಸಂಬಂಧಿಸಿದ ವಿವರಗಳನ್ನು ಕೊಡುತ್ತ ಕಾಯಿಲೆ ಏಕೆ ಬರುತ್ತದೆಂದು ವಿಶ್ಲೇಷಿಸುತ್ತ ಕೃತಿಯನ್ನು ಒಂದು ಮಾಹಿತಿಯ ಆಕರವನ್ನಾಗಿಸಿದ್ದಾರೆ.

**ಪ್ರತಿ ಸಂಸ್ಕೃತಿ ಅಂತೋನಿ ಗ್ರಾಂಶ್ಚಿಯ ಚಿಂತನೆಗಳು**
*ಡಿ. ಮನೋಹರ ಚಂದ್ರ ಪ್ರಸಾದ್*
**ಪುಟ :** ೮೬ **ಬೆಲೆ :** ರೂ. ೩೫
**ರಚನ ಪ್ರಕಾಶನ ,** ನಂ. ೮೩೧, ಎಸ್. ಆರ್. ಎಸ್. ಡಬಲ್ ರೋಡ್, ಪೀಣ್ಯ, ಬೆಂಗಳೂರು - ೫೬೦ ೦೫೮



ಇಟಲಿಯ ಕ್ರಾಂತಿಕಾರಿ ಹೋರಾಟಗಾರ ಕಾಂ. ಅಂತೋನಿಯೋ ಗ್ರಾಂಶ್ಚಿಯ ಚಿಂತನೆಗಳು ಇಂದಿನ ಜಾಗತಿಕ ದಲಿತ ಸಮುದಾಯಕ್ಕೆ ತುಂಬ ಅವಶ್ಯವೆಂದು ಇಲ್ಲಿ ಮನವರಿಕೆ ಮಾಡಿಕೊಟ್ಟಿದೆ. ಅಸಮಾನತೆಯ ವಿರುದ್ಧ ಹೋರಾಟ ಚರಿತ್ರೆಯ ಎಲ್ಲ ಕಾಲದಲ್ಲೂ ನಡೆದಿದೆ. ಇಂದಿನ ಬಡಜನತೆಯ ಉದ್ಧಾರ ರಾಜಕೀಯ ಬಾಧದ ದಾರಿ ಹಿಡಿದಿದೆ. ಅಸಂಖ್ಯ ಅನ್ಯಾಯಗಳನ್ನೆದುರಿಸಲು ಪ್ರಬಲ ಸಂಘಟನೆಯ ಅಗತ್ಯವೊಂದನ್ನು ಇಲ್ಲಿ ಪ್ರತಿಪಾದಿಸಲಾಗಿದೆ. ಲೇಖಕರು ದಲಿತ ಕ್ರೈಸ್ತ ಹೋರಾಟ ಗಳೊಂದಿಗೆ ಜನರೊಡನೆ ನಿಕಟ ಸಂಪರ್ಕ ಸಾಧಿಸಿದ್ದು ಸೇವಾ ಮನೋಭಾವ ಹೊಂದಿದ್ದಾರೆ.



**ಗುತ್ತಿನಿಂದ ಸೈನಿಕ ಜಗತ್ತಿಗೆ**
*ಎಸ್. ಆರ್. ಹೆಗ್ಗಡೆ, ಇಂದಿರಾ ಹೆಗ್ಗಡೆ*
**ಪುಟ :** ೧೧೨ **ಬೆಲೆ :** ರೂ. ೫೦
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಚಿಕ್ಕ ಪ್ರಾಯದಲ್ಲಿ ಮನೆಗೆ ವಿದಾಯ ಹೇಳಿ ತನ್ನಷ್ಟಕ್ಕೆ ಸೈನ್ಯ ಸೇರಿಕೊಂಡ ಆಕಸ್ಮಿಕ ಘಟನೆಯೊಂದಿಗೆ ತಮ್ಮ ಜೀವನ ವೃತ್ತಾಂತವನ್ನು ಎಸ್. ಆರ್. ಹೆಗ್ಗಡೆ ಇಲ್ಲಿ ನಿರೂಪಿಸುತ್ತಾರೆ. ಅವರ ಸಹಧರ್ಮಿಣಿ 'ಬದಿ' ಕಾದಂಬರಿಯಿಂದ ಸುಪರಿಚಿತರಾದ ಇಂದಿರಾ ಹೆಗ್ಗಡೆ ಇಲ್ಲಿಯೂ ತಮ್ಮ ಪತಿಯೊಂದಿಗೆ ದನಿಗೂಡಿಸುತ್ತ ಬರವಣಿಗೆಯಲ್ಲಿ ಪಾಲುದಾರರಾಗಿ ಅರ್ಧ ನೋವನ್ನು ಹಂಚಿ ಕೊಂಡಿದ್ದಾರೆ. ಇಬ್ಬರೂ ತಮ್ಮ ಬಾಳ ದಾರಿಯಲ್ಲಿ ಬಂದು-ಸಂದು ಹೋದ ಘಟನೆಗಳನ್ನು ಹಿಂತಿರುಗಿ ನೋಡಿದ್ದಾರೆ.

**– ಇಂದಿರಾ ಕುಮಾರಿ**

# ನಾಲಿಗೆ ರುಚಿಯ ನಾನಾ ಮುಖಗಳು

**ಟಿ. ಸಿ. ಶ್ರಿಯಾನ್**

**ನಾ**ನು ಸಣ್ಣವನಿದ್ದಾಗ ನಮ್ಮ ಮನೆಯಲ್ಲಿ ಒಂದು ಹಸುವಿದ್ದಿತ್ತು. ಅದನ್ನು ನನ್ನ ತಾಯಿ ಮನೆ ಮಂದಿಯ ಹಾಲಿಗಾಗಿ, ಮಜ್ಜಿಗೆ, ಬೆಣ್ಣೆಗಾಗಿ ಸಾಕಿದ್ದಳು. ಹಸುವು ಕಂದು ಬಣ್ಣದ್ದಾಗಿದ್ದು ಮುದ್ದುಮುದ್ದಾಗಿತ್ತು. ಆ ಸಾಧುಪ್ರಾಣಿ ನಮ್ಮೆಲ್ಲರ ಪ್ರೀತ್ಯಾದರಗಳಿಗೆ ಪಾತ್ರವಾಗಿತ್ತು. ಸ್ವಲ್ಪ ಸಮಯದ ನಂತರ ಅದು ತೆನೆಯಾಗಿ ದಿನದಿಂದ ದಿನಕ್ಕೆ ಅದರ ಹೊಟ್ಟೆಯ ಗಾತ್ರ ದೊಡ್ಡದಾಗುತ್ತಾ ಬಳಲುತ್ತಿರುವುದನ್ನು ಗಮನಿಸಿ ಅದರ ಬಗ್ಗೆ ನಮಗಿರುವ ಅನುಕಂಪವು ಹೆಚ್ಚುತ್ತಾ, ಅದು ಕರು ಹಾಕುವ ದಿನವನ್ನು ಕುತೂಹಲಭರಿತರಾಗಿ ಇದಿರು ನೋಡುತ್ತಿದ್ದಂತೆ, ಒಂದು ದಿನ ಅದು ಒಂದು ಕರು ಹಾಕಿತು. ಕರುವೂ ತನ್ನ ತಾಯಿಯ ಮೈಬಣ್ಣ ಹೊಂದಿ, ಮುದ್ದು ಮುದ್ದಾಗಿತ್ತು. ಹುಟ್ಟಿದ ಕರುವಿಗೆ ತನ್ನ ಕೆಚ್ಚಲಿನ ಹಾಲುಣಿಸಲು ಹಸು ತುಂಬ ಪ್ರಯಾಸಪಡುತ್ತಿತ್ತು. ಕೆಚ್ಚಲನ್ನು ಕರುವಿನ ಬಾಯಿಯ ಹತ್ತಿರಕ್ಕೆ ತಂದರೂ, ತನ್ನ ಅಶಕ್ತ ಹಾಗೂ ಮುರುಟುಗಟ್ಟಿದ ಕಾಲುಗಳನ್ನು ನೆಟ್ಟಗಾಗಿಸಲು ಕರುವು ಶ್ರಮಿಸುತ್ತಿತ್ತು. ಆಗಾಗ ಬಿದ್ದೇಳುತ್ತಿತ್ತು; ಎದ್ದು ಬೀಳುತ್ತಿತ್ತು. ಆಗ ನಾವು ಕರುವನ್ನು ಎತ್ತಿ ಅದರ ಬಾಯಿಯನ್ನು ಕೆಚ್ಚಲಿನ ಹತ್ತಿರ ತಂದು ಹಾಲುಣಿಸಲು ಸಹಕರಿಸುತ್ತಿದ್ದೆವು. ಹಸು ಪ್ರೀತಿಯಿಂದ ಕರುವಿನ ಮೈಯನ್ನು ನೆಕ್ಕುತ್ತಿರುವಾಗ ನಾವು ಅದರ ಮೈಯನ್ನು ಸವರುತ್ತಿದ್ದೆವು. ಈ ರೀತಿ ನಮ್ಮ ಬಾಂಧವ್ಯವು ದಿನೇ ದಿನೇ ಹೆಚ್ಚುತ್ತಾ ಹೋಯಿತು. ಅದು ಸಾಧುತ್ವದ ಸಾಕಾರಮೂರ್ತಿಯಂತೆ ನಮಗೆ ಕಾಣುತ್ತಿತ್ತು. ನಮ್ಮ ಮನೆಯಲ್ಲಿ ಬೇರೆ ಬೇರೆ ಸಾಕು ಪ್ರಾಣಿಗಳಾದ ನಾಯಿ, ಬೆಕ್ಕು, ಕೋಳಿಗಳಿದ್ದರೂ ಈ ಹಸು ಮತ್ತು ಅದರ ಕರುವಿಗೆ ವಿಶಿಷ್ಟ ಸ್ಥಾನವನ್ನು ಕೊಡುತ್ತಿದ್ದೆವು. ಮಾನವನ ಅತಿ ದೊಡ್ಡ ಮಿತ್ರ ಹಾಗೂ ನಿಷ್ಠೆಯ ಸೇವೆಯನ್ನು ಸಲ್ಲಿಸುವ ಸಾಕುನಾಯಿಗೂ ಈ ಸ್ಥಾನ ನಮ್ಮಲ್ಲಿರಲಿಲ್ಲ. ಆ ಸಂಸ್ಕೃತಿ ಆಗ ನಮ್ಮಲ್ಲಿ ಬೆಳೆದಿರಲಿಲ್ಲ, ಅದರ ಪ್ರಜ್ಞೆ ನಮ್ಮಲ್ಲಿ ಇರಲಿಲ್ಲ. ಹಸು ಸಾಧು, ಸಸ್ಯಾಹಾರಿ ಪ್ರಾಣಿ. ಅದರ ಸೆಗಣಿಯನ್ನು ಬೆರಣಿ ತಟ್ಟುತ್ತಿದ್ದೆವು. ಸೆಗಣಿಯನ್ನು ಮನೆಯ ಒಳಕ್ಕೂ ಹೊರಗೂ ಸಾರಿಸುತ್ತಿದ್ದೆವು. ಸೆಗಣಿ ಸಾರಿಸುವುದು ಸ್ವಚ್ಛತೆಯ ಲಕ್ಷಣವಾಗಿತ್ತು.

ಮನೆ ಮಂದಿಗೆ ಕರುವಿನ ಮೇಲಿದ್ದ ಪ್ರೀತಿ ದಿನದಿಂದ ದಿನಕ್ಕೆ ಬೆಳೆಯುತ್ತಿದ್ದರೂ, ನಮ್ಮ ತಾಯಿಗೆ ಕರುವು ಒಂದು ಚಿಂತೆಯ ವಿಷಯವಾಗಿತ್ತು. ಅದು ಗಂಡಾಗಿತ್ತು, ಬೆಳೆದು ಬಸವನಾಗುವಂತಹುದು. ಹಾಲು ಕರೆಯುವ ದನವಾಗಲಾರದು. ಬಸವನನ್ನು ಗಾಡಿಗೆ ಕಟ್ಟುವ ಎಂದರೆ ನಮ್ಮಲ್ಲಿ ಗಾಡಿ ಇರಲಿಲ್ಲ. ಉಳಲಿಕ್ಕೆ ಹಾಕುವ ಎಂದರೆ ನಮಗೆ ಗದ್ದೆ ಇರಲಿಲ್ಲ. ಈ ಕಾರಣದಿಂದಾಗಿ ಬಸವನನ್ನು ಕಟ್ಟಿಕೊಂಡು ಸಾಕಿ ಸಲಹಿ ಮಾಡುವುದಾದರೂ ಏನು ? ಎಂದು ತಾಯಿಯು ಚಿಂತೆಯಿಂದಿದ್ದಳು.

ಒಂದು ದಿನ ಆ ಬಸವ ನಮ್ಮ ಮನೆಯ ಹಟ್ಟಿಯಿಂದ ಕಾಣೆಯಾದುದು ನನ್ನ ಅಣ್ಣನ ಗಮನಕ್ಕೆ ಬಂದಿತು. ಅತ್ತ ಇತ್ತ ನೋಡಿದರೂ ಇಲ್ಲ, ಅಂಬಾ ಎಂದು ಕರೆದರೂ ಓಡಿ ಬರಲಿಲ್ಲ. ಅಷ್ಟರವರೆಗೆ ಮೌನದಿಂದಿದ್ದ ತಾಯಿಯೊಡನೆ ವಿಚಾರಿಸಿದಾಗ ಕರು ಕಾಣೆಯಾದ ಗುಟ್ಟು ರಟ್ಟಾಯಿತು. ಅದನ್ನು ತಾಯಿಯು ನೆರೆಮನೆಯ ಕುಂಞ ಬ್ಯಾರಿಯವರಿಗೆ ಮಾರಿದ್ದಳು. ಅವರ ದೂರ ಸಂಬಂಧಿಕರೊಬ್ಬರಿಗೆ ಗಾಡಿಗೆ ಕಟ್ಟಲು ಜೋಡಿಗಾಗಿ ಒಂದು ಎತ್ತು ಬೇಕಿತ್ತಂತೆ. ಅದಕ್ಕಾಗಿ ನಮ್ಮ ಬಸವನನ್ನು ಖರೀದಿಸಿದರಂತೆ. ಆಗ ತಾಯಿಗೂ ಹಣದ ಅಗತ್ಯವಿತ್ತಂತೆ. ಆ ಮಾರಾಟಕ್ಕೆ ಅಣ್ಣನ ಪ್ರತಿಭಟನೆ ಆಗಲೇ ಆಗಿತ್ತು. ಅದನ್ನು ತಾನೇ ಸಲಹುತ್ತಿದ್ದ. ಅದು ಯಾವುದಾದರೊಂದು ಕೆಲಸಕ್ಕೆ ಬೀಳುತ್ತಿತ್ತು ಎಂಬುದು ಅವನ ವಾದವಾಗಿತ್ತು. ನಂತರ ಯಾವುದೋ ಒಂದು ಆಲೋಚನೆ ಅವನ ತಲೆ ಹೊಕ್ಕು, ನಿಂತಲ್ಲೇ ಚೀತ್ಕರಿಸಿದ. "ಅಮ್ಮ ಅವರು ನಮ್ಮ ಕರುವನ್ನು ಮಾಂಸಕ್ಕಾಗಿ ಕೊಂಡು ಹೋಗಿದ್ದಾರೆ. ಅವರ ಮನೆಯಲ್ಲಿ ಸದ್ಯದಲ್ಲೇ ಮದುವೆಯ ಪರವಾಗಿ ಒಂದು ಔತಣ ಕೂಟವಾಗುವುದಿದೆ ಎಂದು ನಾನು ತಿಳಿದಿದ್ದೇನೆ. ಅದನ್ನು ಈಗಲೇ ಮನೆಗೆ ಹಿಂದೆ ಕರೆದುಕೊಂಡು ಬರಬೇಕು. ತಡಮಾಡಿದರೆ ಅವರು ಅದನ್ನು 'ಹಲಾಲ್' ಮಾಡಿಯಾರು" ಎಂದು ಅಣ್ಣ ಆರ್ಭಟಿಸಿದ.

ಮಗನ ರೋದನವನ್ನು ತಡೆಯಲಾಗದೆ ತಾಯಿಯು ಅವನ ಜೊತೆಯಲ್ಲಿ ಕುಂಞ ಬ್ಯಾರಿಯ ಮನೆಗೆ ಹೋಗಿ ನೋಡಿದಾಗ ಆ ಕರುವು ಅಲ್ಲೇ ಒಂದು ಗೂಟಕ್ಕೆ ಕಟ್ಟಿದ್ದು ಕಂಡುಬಂದಿತು. ಆಗ ಸಾಹೇಬರು ಮನೆಯಲ್ಲಿರಲಿಲ್ಲ. ಕರುವನ್ನು ಅವರು ಮಾಂಸಕ್ಕಾಗಿಯೇ ಖರೀದಿಸಿದ್ದರೆಂಬುದು ಅವರ ಬೀವಿಯಿಂದ ತಿಳಿದುಬಂದಿತು. ಅಣ್ಣನ ಅಳುವನ್ನು ನೋಡಿ ಮನ ಕರಗಿದ ಅವರು, ಸಾಹೇಬರು ಮನೆಗೆ ಬಂದ ನಂತರ ಅವನ ಹತ್ತಿರ ಮಾತಾಡಿ ಅದನ್ನು ಹಿಂದೆ ಕಳುಹಿಸುತ್ತೇನೆ ಎಂದು ಭರವಸೆ ನೀಡಿ ತಾಯಿ-ಮಗನನ್ನು ಹಿಂದೆ ಕಳುಹಿಸಿದರು. ಮರುದಿನ ಬೆಳಿಗ್ಗೆ ಕುಂಞ ಬ್ಯಾರಿಯವರೇ ಹಗ್ಗ ಹಿಡಿದುಕೊಂಡು ಬಸವನನ್ನು ಮನೆ ಮುಟ್ಟಿಸಿದರು. "ಇಕೋ ನಿನ್ನ ಬಸವ, ನನ್ನ ಹಣ ನಂತರ ಹಿಂದಕ್ಕೆ ಕೊಟ್ಟರೆ ಸಾಕು" ಎಂದು ಆ ಮಾನವತಾವಾದಿ, ತಮ್ಮ ಸೌಹಾರ್ದತೆಯನ್ನು ತೋರಿಸಿ ಹೋದರು.

ನಾವು ಮನೆಮಂದಿಗಳು ಮೀನು ತಿನ್ನುತ್ತೇವೆ. ಅದನ್ನು ಕೊಯ್ಯುವಾಗ ನೆತ್ತರ ಸೋರಿಕೆಯಾಗುತ್ತದೆ. ಕೋಳಿಯ ಕತ್ತನ್ನು ಹಿಸುಕಿ ಅದರ ಮಾಂಸವನ್ನು ತಿನ್ನುತ್ತೇವೆ. ಬೇರೆ ಯಾವ ಪಶು ಪಕ್ಷಿಗಳ ಮಾಂಸ ಸಾಮಾನ್ಯವಾಗಿ ನಮ್ಮ ಪರಿಸರದಲ್ಲಿ ಸಿಗುತ್ತಿರಲಿಲ್ಲ. ಆ ಕಾರಣ ಅದಾವುದನ್ನೂ ನನಗೆ ತಿಂದು ಗೊತ್ತಿಲ್ಲ. ಒಮ್ಮೆ ಎಲ್ಲಿಂದಲೋ ಆಡಿನ ಮಾಂಸವನ್ನು ತಂದು ಮನೆಯಲ್ಲಿ ಅಡುಗೆ ಮಾಡಿದ್ದರು. ಅದೊಂದು ಬೇರೆಯೇ ವಾಸನೆಯದಾಗಿದ್ದು ನನಗೆ ಅದು ಹಿಡಿಸಲಿಲ್ಲ. ಆ ಕಾರಣ ಅದನ್ನು ನಾನು ತಿನ್ನಲಿಲ್ಲ, ತಿನ್ನಲು ಯಾರೂ ಬಲವಂತಪಡಿಸಲಿಲ್ಲ. ದನದ ಮಾಂಸದ ರುಚಿ ಹೇಗೆಂದು ಗೊತ್ತಿಲ್ಲ. ಅದಕ್ಕೆ ಮನೆಯಲ್ಲಿ ನಿಷೇಧವಾಗಿತ್ತು. ದನವು ಸಾಧು ಪ್ರಾಣಿ ಅಲ್ಲದೆ ಅದು ಪೂಜ್ಯವೆಂಬ ಅಂದಿನ ವಿಶ್ವಾಸವೂ ಆ ನಿಷೇಧಕ್ಕೆ ಕಾರಣವಾಗಿತ್ತು. ಕೋಳಿಯ ಕತ್ತನ್ನು ಹಿಸುಕಿದಾಗ ನಮ್ಮಲ್ಲಿದ್ದ ಪ್ರಾಣಿದಯೆ ಎಲ್ಲಿ ಅಡಗಿತ್ತೋ ತಿಳಿಯದು. ಅದು ಹಿಂಸೆ ಎಂಬ ಪ್ರಜ್ಞೆ ನಮಗಿರಲಿಲ್ಲ.

ಮಾಂಸಾಹಾರಿಗಳಲ್ಲಿ ಆಡಿನ ಮಾಂಸಭಕ್ಷಕರು ಸಾಮಾನ್ಯ. ಆದರೂ ಕೂಡ ನನಗೆ ಅದರ ಮಾಂಸ ಅಪಥ್ಯ ಎಂದಿದ್ದೇನಲ್ಲವೇ ? ಆದರೆ ಮೀನಿನ ಸಾರಿಲ್ಲದೆ ನನಗೆ ಊಟವೇ ಸಲ್ಲದು ಎಂಬಷ್ಟು ಮಟ್ಟಿಗೆ ನಾನು ಅದಕ್ಕಂಟಿಕೊಂಡಿದ್ದೇನೆ. ಇದಕ್ಕೆ ಕಾರಣ ಪ್ರಾಯಶಃ ನನ್ನ ತಾಯಿಯು ತನ್ನ ಮೊಲೆಹಾಲನ್ನು ನನ್ನಿಂದ ಬಿಡಿಸುವಾಗ, ಮೊತ್ತ ಮೊದಲ ಅನ್ನಪ್ರಾಶನದೊಂದಿಗೆ ಮೀನನ್ನೂ ಸೇರಿಸಿರಬೇಕು. ಅದು ನನಗೆ ಅಭ್ಯಾಸವಾಯಿತು. ರುಚಿ ಹಿಡಿಸಿತು. ಹಾಗಾಗಿ ಮೀನು ನನ್ನ ಆಹಾರವಾಯಿತು. ನನ್ನ ಆಹಾರ ಮಿಶ್ರ ಆಹಾರವಾದರೂ ಅದು ಮಾಂಸಾಹಾರವೆಂದೇ ಪರಿಗಣಿಸಲ್ಪಡುತ್ತದೆ. ಮೀನಿನ ಬದಲಿಗೆ ಅಥವಾ ಅದರ ಒಟ್ಟಿಗೇನೇ ಆಡಿನ ಮಾಂಸವನ್ನೂ ಉಣಿಸುತ್ತಿದ್ದರೆ ಆ ಮಾಂಸ ನನಗೆ ಇಂದು ಅಪಥ್ಯವಾಗುತ್ತಿದ್ದಿಲ್ಲ. ಹಾಗೇನೇ ಹುಟ್ಟಿದಾರಭ್ಯದಿಂದ ಶುದ್ಧ ಸಸ್ಯಾಹಾರವನ್ನೇ ಉಣಿಸುತ್ತಿದ್ದರೆ ನಾನು ಅಪ್ಪಟ ಸಸ್ಯಾಹಾರಿಯಾಗಿ ಆಗುತ್ತಿದ್ದೆನೋ ಏನೋ? ವ್ಯಕ್ತಿಯೋರ್ವನು ಸಸ್ಯಾಹಾರಿಯಾಗಿದ್ದು ಮಾಂಸಾಹಾರಿಯಾಗುವುದು ಅಥವಾ ಮಾಂಸಾಹಾರಿ ಸಸ್ಯಾಹಾರಿಯಾಗುವುದು ಸಾಮಾನ್ಯವಾದರೂ ಈ ರೀತಿ ಪರಿವರ್ತನೆಗೊಳ್ಳುವವರ ಸಂಖ್ಯೆ ಗಣನೀಯವಾದುದಲ್ಲ ಎಂಬುದು ನನ್ನ ಎಣಿಕೆ. ಹುಟ್ಟು ಅಭ್ಯಾಸವೇ ಪ್ರಧಾನ.

ನನಗೆ ಅಪಥ್ಯವಾಗುವ ಆಹಾರದ ಗುಂಪಿಗೆ ಹಂದಿ, ಮೇಕೆ, ಇನ್ನಿತರ ಪಶು-ಪಕ್ಷಿಗಳು ಕೂಡಿವೆ. ದೇಶದ ಇನ್ನಿತರ ಪ್ರಾಂತಗಳಲ್ಲಿ ಮನುಷ್ಯನು ತಿನ್ನುವ ಪ್ರಾಣಿ-ಪಕ್ಷಿಗಳ, ಜೀವ-ಜಂತುಗಳ ವಿವರಗಳು ಕಂಡುಬರುವಾಗ ಅವನು ತಿನ್ನದೇ ಇರುವ ಚರಜೀವಿಗಳು ಇಲ್ಲವೇ ಇಲ್ಲ ಎಂದು ಭಾಸವಾಗುತ್ತದೆ. ಅವುಗಳ ಪಟ್ಟಿಯನ್ನು ನಾನಿಲ್ಲಿ ಮಾಡುವುದೂ ಅಸಹ್ಯವೆನಿಸುತ್ತದೆ. ನಮ್ಮ ದೇಶದ ಅವಿಭಾಜ್ಯ ಅಂಗವಾದ ನಾಗಾಲ್ಯಾಂಡ್‌ನಲ್ಲಿ ನಾಯಿಗಳು

ದಾರಿಯಲ್ಲಿ ಕಾಣಸಿಗುವುದು ಅಪರೂಪವೆನ್ನುತ್ತಿದ್ದಾರೆ 'ಪ್ರಾಣಿಪರ ನಾಗರಿಕರು' (ಪೀಪಲ್ ಫಾರ್ ಎನಿಮಲ್ಸ್) ಸಂಸ್ಥೆಯ ಮುಖ್ಯಸ್ಥೆ ಮನೇಕಾ ಗಾಂಧಿಯವರು. ನಾಯಿಗಳು ಕಟುಕರ ಕಣ್ಣಿಗೆ ಬಿದ್ದ ಕೂಡಲೇ ಅದನ್ನು ಅವರು ಕೊಂಡೊಯ್ದು ಕೊಂದು ತಿನ್ನುತ್ತಾರಂತೆ! ಈ ದೃಶ್ಯವನ್ನು 'ತಲೆಗಳು ಮತ್ತು ಬಾಲಗಳು' (ಹೆಡ್ಸ್ ಅಂಡ್ ಟೈಲ್ಸ್) ಎಂಬ ಅವರ ಟಿ.ವಿ. ಸಂಕಲನದ ಚಿತ್ರಣದಲ್ಲಿ ಕಂಡು ನಾನು ದಂಗುಬಡಿಸದವನಾದೆ. ನಾಗಾಲ್ಯಾಂಡಿನ ಜನರೂ ನಮ್ಮ ದೇಶದ ನಾಗರಿಕರಲ್ಲವೇ. ನಾಯಿ ಮಾಂಸವನ್ನು ತಿನ್ನುವ ಅವರೊಂದಿಗೆ ನಾವೂ ಬೆರೆತಿರಬೇಕಾದ ದುರ್ದೈವ ನಮಗೆ ಸಂಭವಿಸಿತೇ ಎಂದಂದುಕೊಂಡೆ.

ಅದೊಂದು ದಿನ ದೂರದರ್ಶನದಲ್ಲಿ ಅಸಹ್ಯವಾದ ದೃಶ್ಯ ಕಾಣಸಿಕ್ಕಿತು. ದಕ್ಷಿಣ ಅಮೇರಿಕಾದ ಒಂದು ದೇಶದ ಮಾಂಸದ ಅಂಗಡಿಯಲ್ಲಿ ವಿವಿಧ ಜಾತಿಯ ಹಾವುಗಳು ನೇತುಹಾಕಲ್ಪಟ್ಟದ್ದುವು. ಅವುಗಳಲ್ಲಿ ಹಲವು ಜಾತಿಯ ವಿಷ ಸರ್ಪಗಳೂ ಇದ್ದವು ಎಂಬ ವಿವರಣೆಯನ್ನು ಒಟ್ಟಿಗೇ ನೀಡಲಾಗಿತ್ತು. ಹಾವುಗಳ ಶಿರಚ್ಛೇದ ಮಾಡಲಾಗಿತ್ತು. ಮಗ್ಗುಲಿನ ಹೋಟೆಲಿನಲ್ಲಿ ಈ ಹಾವುಗಳಿಂದ ತಯಾರಿಸಲ್ಪಟ್ಟಿದ್ದ ಖಾದ್ಯಾನ್ನ ಮಾರಾಟಕ್ಕಿಡಲಾಗಿತ್ತು! ಇದನ್ನು ನೋಡಿ ನಾನು ಬೆಕ್ಕಸ ಬೆರಗಾದೆ. ಟಿ.ವಿ.ಯನ್ನು ಆರಿಸಿ ಆಸನಕ್ಕೊರಗಿ ಭಾವುಕನಾದೆ. ವಿಚಾರ ಪರವಶನಾದೆ. ಮಾನವನು ಇಷ್ಟು ಕೊಳಕು ಮತ್ತು ನೋಟಕ್ಕೆ ಅಸಹ್ಯವಾದ ಜೀವಜಂತುಗಳನ್ನು ಕೊಂದು ತಿನ್ನುವನೇ? ಆಹಾರ ಅಭಾವದಿಂದಾಗಿ ಅವನು ಈ ದಾರಿಯನ್ನು ಅನುಸರಿಸಿದ್ದಾನೆಂಬಂತೆ ಕಂಡುಬರುತ್ತಿದ್ದಿಲ್ಲ. ವಿನೋದಕ್ಕಾಗಿಯೋ, ಆಟಕ್ಕಾಗಿಯೋ, ಸ್ವೇಚ್ಛಾಹಾರಿಯಾಗಿ ತನ್ನ ಶಕ್ತಿಯ ಪ್ರದರ್ಶನ ಮಾಡುತ್ತಿದ್ದಾನೆ; ಅದರ ದುರ್ಬಳಕೆ ಮಾಡುತ್ತಿದ್ದಾನೆ. ಮಾನವತೆಯ ಮತ್ತು ಸುಸಂಸ್ಕೃತಿಯ ಕಲ್ಪನೆಯೇ ಇಲ್ಲದವನಾಗಿ ಕಕ್ಕಾಬಿಕ್ಕಿಯಾಗಿ ವರ್ತಿಸುತ್ತಿದ್ದಾನೆ. ಈ ಭೂಮಿಯಲ್ಲಿ ಮಾನವನ ಜೀವಿತವು ಅರ್ಥಹೀನವಾದದ್ದೇ? ಈ ತರಹ ಹತಾಶನಾಗಿ ಚಿಂತನೆಗೆ ಒಳಗಾಗಿದ್ದ ನಾನು ನನ್ನನ್ನೇ ಪ್ರಶ್ನಿಸಿ ಆತ್ಮಾವಲೋಕನಕ್ಕೆ ತೊಡಗಿದೆನು. ನಾನಾದರೂ ಏನು ಮಾಡುತ್ತಿದ್ದೇನೆ? ನನ್ನ ಆಚಾರ ವಿಚಾರ ಇದಕ್ಕೆ ಭಿನ್ನವಾಗಿದೆಯೇ? ಇಲ್ಲ ಎಂಬುದು ಕಟುಸತ್ಯ ಎಂದು ತೋರಿಬಂತು.

ಮೀನು ತಿನ್ನುವ ನಾನೂ ಮಾಂಸಾಹಾರಿಯಲ್ಲವೇ! ಅದೆಷ್ಟೋ ಮಂದಿಗೆ ಮೀನು ಎಂದರೆ ಅಪಥ್ಯ, ಅಸಹ್ಯ. ಮಾರುಕಟ್ಟೆಯಲ್ಲಿ ಮಾಂಸದ ಸ್ಟಾಲುಗಳನ್ನು ಹಾದು ಹೋಗುವಾಗ ಮೂಗಿಗೆ ಬಡಿಯುವ ವಾಸನೆಯನ್ನಾದರೂ ಸಹಿಸಬಹುದು, ಮೀನಿನ ದುರ್ಗಂಧವನ್ನಲ್ಲ ಎನ್ನುವವರನೇಕರು. ಅದೆಷ್ಟೋ ಮಂದಿ ಕುರಿ, ದನಗಳ ಮಾಂಸ ತಿನ್ನುವವರಿಗೆ ಮೀನು ಅಪಥ್ಯ.

ರಜಾ ದಿನದಲ್ಲೊಮ್ಮೆ ನನ್ನ ಆಫೀಸಿನಲ್ಲಿ ಒಬ್ಬಂಟಿಗನಾಗಿ 'ಓವರ್ ಟೈಂ' ಕೆಲಸ ಮಾಡುವ ಪ್ರಸಂಗ ಬಂದಿತ್ತು. ಮಧ್ಯಾಹ್ನ ಊಟದ ಸಮಯವಾದಾಗ ಅಲ್ಲಿಂದ ಹೊರಬೀಳುತ್ತಿರುವಾಗ ನನಗಾಗಿ ಹಾಜರಿದ್ದು ಆಫೀಸನ್ನು ತೆರೆದಿಟ್ಟು ಬಾಗಿಲನ್ನು ಕಾಯುತ್ತಿದ್ದ ಪಠಾಣ ನಾಸೀರ್ ಖಾನ್ ಚುರುಕಾಗಿ ಸಲಾಮ್ ಹೊಡೆದ. ಅವನನ್ನು ಕಂಡು ನಾನಂದೆ: ''ಖಾನ್, ಇಂದು ನಾವಿಬ್ಬರೂ ಒಟ್ಟಿಗೆ ಊಟ ಮಾಡುವ, ಬಾ ನನ್ನೊಂದಿಗೆ.'' ಹಾಗೆಂದಾಗ ಸಂತೋಷಗೊಂಡ ಅವನನ್ನು ನಾನು ನಿತ್ಯ ಊಟ ಮಾಡುವ ಮಂಗಳೂರಿನವರ ಹೋಟೆಲೊಂದಕ್ಕೆ ಕರೆದುಕೊಂಡು ಹೋಗಿ, ನಮ್ಮಿಬ್ಬರಿಗಾಗಿ ಅನ್ನ ಮತ್ತು ವಿಶೇಷ ಮೀನಿನ ಪಲ್ಯ, ಹುರಿದ ಮೀನಿಗಾಗಿ ಆದೇಶವನ್ನಿತ್ತೆ. ಆಗ ಆ ಪಠಾಣನು ''ನಾನು ಮೀನು ತಿನ್ನುವುದಿಲ್ಲ'' ಎಂದುದನ್ನು ಕೇಳಿ ನನಗೆ ಆಶ್ಚರ್ಯವಾಯಿತು. ತನಗೆ ರೊಟ್ಟಿ ಮಾಂಸ ಆದೀತೆಂದ. ಅವನ ಊರಿನಲ್ಲಿ ಯಾರೂ ಮೀನು ತಿನ್ನುವವರಿಲ್ಲವಂತೆ. ಕುರಿ ದನದ ಮಾಂಸವೇ ಅವರ ನಿತ್ಯ ಆಹಾರವಂತೆ. ಮುಂಬೈ ನಗರದಲ್ಲಿ ತನ್ನ ಜೀವನದ ಬಹುಪಾಲು ಕಳೆದವನಾದರೂ ಮೀನು ಅವನಿಗೆ ಅಪಥ್ಯವಾಗುತ್ತಿತ್ತಂತೆ. ನನಗೆ ರುಚಿಸಿದ ಮೀನು ಅವನು ಯಾಕೆ ಇಚ್ಛಿಸುವುದಿಲ್ಲ? ಇದು ತಿಂದು ಅಭ್ಯಾಸವಿಲ್ಲ ಎಂದು ನನಗೆ ಆಗ ಹೊಳೆಯಿತು.

ಶ್ರೀ ಕೆ. ಎಮ್. ಪಣಿಕ್ಕರ್‌ರವರು ಚೀನಾ ದೇಶದ ರಾಯಭಾರಿಯಾಗಿದ್ದ ದಿನಗಳವು. ಅವರ ಕಾರ್ಯ ವ್ಯಾಪ್ತಿಗೆ ಚೀನಾದ ನೆರೆ ರಾಜ್ಯವಾದ ಮಂಗೋಲಿಯಾ ದೇಶವನ್ನು ಸೇರಿಸಲಾಯಿತು. ಮಂಗೋಲಿಯಾದ ರಾಜಧಾನಿಯನ್ನು ನೆಲಮಾರ್ಗವಾಗಿ ಸೇರಲು ನಿರ್ಧರಿಸಿ, ಅವರು ತಮ್ಮ ಬಳಗದ ಕೆಲವು ಉತ್ಸಾಹಿ ತರುಣರನ್ನು ಸೇರಿಸಿಕೊಂಡು ಕಾಶ್ಮೀರ ಮತ್ತು ಪಾಮೀರ ಪರ್ವತಶ್ರೇಣಿಗಳ ಕಣಿವೆಯ ಮೂಲಕ ವ್ಯಾಪಾರಿಗಳು ಶತಮಾನಗಳ ಕಾಲದಿಂದ ತುಳಿಯುತ್ತಿದ್ದ ಮಾರ್ಗವನ್ನನುಸರಿಸಿ ಕುದುರೆ, ಯಾಕ್ ಮೃಗಗಳಿಂದ ಎಳೆಯಲ್ಪಡುವ ವಾಹನಗಳನ್ನೇರಿಕೊಂಡು ಪ್ರಯಾಣ ಮಾಡುತ್ತಿದ್ದಾಗ ಅಲ್ಲಿ ತಾನು ಕಂಡ ಜನಜೀವನ ರೀತಿಯನ್ನು ತನ್ನ ಪ್ರವಾಸ ಕಥನದಲ್ಲಿ ಬರೆದಿಟ್ಟಿದ್ದರು. ಅಲ್ಲಿಯ ಜನರಿಗೆ ಯಾಕ್ ಮೃಗದ ಹಾಲಿನಿಂದ ಮಾಡಿದ ಮಜ್ಜಿಗೆ ತುಂಬಾ ಇಷ್ಟವಾದ ಪೇಯವಾಗಿತ್ತಂತೆ. ಆ ಮಜ್ಜಿಗೆಗೆ ಅವರು ಆ ಮೃಗದ ಮೂತ್ರವನ್ನೂ ಧಾರಾಳವಾಗಿ ಬೆರೆಸುತ್ತಿದ್ದರಂತೆ. ಎಂದಾದರೂ ಈ ಮಾರ್ಗವಾಗಿ ಪಯಣಿಸುವ ಸಂದರ್ಭ ನನಗೆ ಒದಗಿದರೆ, ನಾನೂ ಈ ಮೃಗದ ಮೂತ್ರವನ್ನು ಕುಡಿಯುವ ಪ್ರಸಂಗವೇಳಬಹುದೆಂದು ಆ ಪ್ರವಾಸ ಕಥನವನ್ನು ಓದಿದ ನಾನು ಬೆಚ್ಚಿಬಿದ್ದೆ.

ನಾನು ಹೈಸ್ಕೂಲ್ ಮುಗಿಸಿದ ನಂತರ ಬೆರಳಚ್ಚು ಬರಹ ಕಲಿಯಲಿಕ್ಕಾಗಿ ಒಂದು ಸಂಸ್ಥೆಯನ್ನು ಸೇರಿಕೊಂಡೆ. ಅದರ ವ್ಯವಸ್ಥಾಪಕರಾದ ಜಾನ್ ಎಂಬುವರು ಒಮ್ಮೆ ತಮ್ಮ ಮುಂಬೈ ಪ್ರವಾಸದ ಕಥನವನ್ನು ಬಣ್ಣಿಸುತ್ತಿದ್ದರು. ಅವರು ಪಯಣಿಸುತ್ತಿದ್ದ ಬಸ್ಸು ತೀರ್ಥಹಳ್ಳಿಯ ಹತ್ತಿರ ಅವಘಡಕ್ಕೀಡಾಯಿತಂತೆ. ಪ್ರಯಾಣಿಕರು ಇನ್ನೊಂದು ಬಸ್ಸಿಗಾಗಿ ಕಾಯುತ್ತಿದ್ದಾಗ ಊಟದ ಸಮಯವಾಗಿ ಹತ್ತಿರವೇ ಇದ್ದ ಒಂದು ಬ್ರಾಹ್ಮಣರ ಮನೆಯಲ್ಲಿ ಊಟದ ಏರ್ಪಾಡಾಯಿತಂತೆ. ಊಟ ಆದ ನಂತರ ಮನೆಯ ಯಜಮಾನ್ತಿ, ಹತ್ತಿರವೇ ಇಟ್ಟಿದ್ದ ಸೆಗಣಿಯ ಮುದ್ದೆಯತ್ತ ಬೊಟ್ಟು ಮಾಡುತ್ತಾ ಊಟ ಮಾಡಿದ ಜಾಗವನ್ನು ಸೆಗಣಿ ಸಾರಿಸಿ ಶುದ್ಧೀಕರಿಸಬೇಕೆಂದು ಜಾನ್‌ರವರಿಗೆ ಹೇಳಿದಳಂತೆ. ಜಾನ್‌ರವರು ಕ್ರಿಶ್ಚಿಯನ್ನರು ಆಗಿದ್ದರೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಉಪಾಯವಿಲ್ಲದೇ ಅವರು ಆ ಕ್ರಿಯೆಗೆ ತೊಡಗಿದಾಗ ಅದು ಅವರಿಗೆ ಅಸಹ್ಯವಾಗಿ ಕಂಡುಬಂದು, ಉಂಡ ಅನ್ನ ಬಾಯಿಗೆ ಬಂದಂತಾಯಿತಂತೆ. ಹಿಂದುಗಳ ವಿಚಿತ್ರ ಸಂಪ್ರದಾಯಗಳನ್ನು ಬಣ್ಣಿಸುತ್ತಾ ಅವರೆನ್ನುತ್ತಿದ್ದರು: ದೇವರ ಪೂಜೆ ಮಾಡಿದ ನಂತರ ಪ್ರಸಾದವಾಗಿ ತೀರ್ಥವನ್ನು ಭಕ್ತರ ಕೈಗೆ ಇಕ್ಕುತ್ತಾರೆ. ಆ ತೀರ್ಥದಲ್ಲಿ ದನದ ಮೂತ್ರ ಮತ್ತು ಸೆಗಣಿ ಸೇರಿಸುತ್ತಾರೆ. ಅದನ್ನೂ ಅವರು ಸೇವಿಸಬೇಕು! ಅಂದು ಹಿಂದುವಾಗಿದ್ದ ತನ್ನ ಮುತ್ತಜ್ಜ ಕ್ರಿಶ್ಚಿಯನ್ನನಾಗಿ ಮತಾಂತರಗೊಳ್ಳದಿದ್ದರೆ ಇಂದು ತಾನೂ ಈ ಗೊಡ್ಡು ಸಂಪ್ರದಾಯಕ್ಕೆ ತಲೆಯೊಡ್ಡಬೇಕಾಗಿತ್ತು ಎಂದುಕೊಂಡು ಕೂತಲ್ಲೇ ಏಸುವನ್ನು ಸ್ತುತಿಸಿ ಮುತ್ತಜ್ಜನಿಗೆ ಕೃತಜ್ಞತೆಯನ್ನು ಸಲ್ಲಿಸಿದರು.

ನಮ್ಮ ದೇಶದಲ್ಲಿಯೇ ಬೆರಗುಗೊಳಿಸುವ ವಿಚಿತ್ರ ಆಹಾರ ಪದ್ಧತಿಗಳು ಕಂಡುಬರುತ್ತಿರುವಾಗ ನಾವು ಬೇರೆ ದೇಶಗಳ ಪದ್ಧತಿಗಳ ಕಡೆ ಬೊಟ್ಟು ಮಾಡುವುದು ಅವಹೇಳನವಾದೀತು. ಸ್ಮಶಾನದಲ್ಲಿ ಹೂಳಿಟ್ಟಿದ್ದ ಹೆಣವನ್ನು ಅಗೆದು ಅದರ ಯಾವುದೋ ಒಂದು ಅಂಗವನ್ನು ಸೀಳಿ ತೆಗೆದು ತಮ್ಮ ಮಾಂತ್ರಿಕ ಶಕ್ತಿಯನ್ನು ವೃದ್ಧಿಸಲು ತಿನ್ನುವ ಮಾಂತ್ರಿಕರು ನಮ್ಮ ದೇಶದಲ್ಲಿಯೇ ಇದ್ದಾರೆಂಬುದನ್ನು ನಾನು ದೂರದರ್ಶನದ ಬಿ.ಬಿ.ಸಿ. ಚಾನಲ್‌ನಲ್ಲಿ ಕಂಡಿದ್ದೇನೆ. ಗುಂಪು ಘರ್ಷಣೆಯಾದಾಗ ಮಡಿದ ಯೋಧರ ಹೆಣವನ್ನು ಆಹಾರಕ್ಕಾಗಿ ಕೊಂಡುಕೊಳ್ಳುವ ಮೂಲ ನಿವಾಸಿಗಳು ನಮ್ಮ ದೇಶದ ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳಲ್ಲಿ ವಾಸವಾಗಿದ್ದಾರೆಂದರೆ ಆಶ್ಚರ್ಯವಾಗುವುದಿಲ್ಲವೇ?

ಈ ವಿಪರೀತ ಪ್ರವೃತ್ತಿಗಳು ಅಪವಾದಗಳಾದರೂ ಮಾನವನು ತನ್ನ ಆಹಾರದ ವಿಚಾರದಲ್ಲಿ ಪ್ರಾಣಿದಯೆಯ ಪ್ರಜ್ಞೆಯನ್ನು ಕಳೆದುಕೊಂಡವನಾಗಿದ್ದಾನೆ. ''ಜೀವೋ ಜೀವಸ್ಯ ಜೀವನಂ'' (ಒಂದು ಜೀವವನ್ನು ತಿಂದು ಇನ್ನೊಂದು ಜೀವ ಬದುಕುವುದು) ಎಂಬುದು ಪ್ರಕೃತಿಯ ನಿಯಮವಾದರೂ, ಬುದ್ಧಿವಂತ ಮಾನವನು ಎಲ್ಲಾ ಪ್ರಕೃತಿ ನಿಯಮಗಳಿಗೆ ತಲೆಯೊಡ್ಡಬೇಕಾಗಿಲ್ಲ. ಮನುಷ್ಯನಲ್ಲಿ ಅರ್ಧ ಪಶು, ಅರ್ಧ ಮಾನವನೆಂಬ ಗುಣಗಳಿವೆ. ಪಶುವೆಂಬ ಪ್ರಕೃತಿ ಗುಣವನ್ನು ಜಯಿಸಿ ಅವನು ಪೂರ್ಣ ಮಾನವನಾಗಲು ಶ್ರಮಿಸಬೇಕು. ಪ್ರಾಣಿದಯೆಯೆಂಬ ಉದಾತ್ತ ಮನೋವೃತ್ತಿಯನ್ನು ಹೊಂದಿದ ಸಂಸ್ಕೃತಿಯನ್ನು ತನ್ನದಾಗಿಸಿಕೊಳ್ಳಬೇಕು.

ದೇಶದ ಸಂಸ್ಕೃತಿಯಲ್ಲಿರುವ ಅನೇಕತೆಯಲ್ಲಿ ಏಕತೆಯನ್ನು ಗುರುತಿಸಬೇಕಾಗಿದೆ. ಅದನ್ನೇ ಆಧಾರಸ್ತಂಭವನ್ನಾಗಿರಿಸಿಕೊಂಡು ನಾವು ಅನ್ಯೋನ್ಯವಾಗಿ ಬಾಳಬೇಕಾಗುತ್ತದೆ. ಆಹಾರದ ವಿಚಾರದಲ್ಲಿ ಅನೇಕತೆ ಕಂಡುಬರುವುದು ಅವರವರ ಜಿಹ್ವಾ ಚಾಪಲ್ಯದಲ್ಲಿ; ಏಕತೆ ಹಸಿವಿನಲ್ಲಿ, ಎಂದು ಅಂದುಕೊಳ್ಳೋಣವೇ? ಈಗ, ಈ ಆಚಾರವೇ ಮಾನವನ ಜೀವನ ಶೈಲಿಯನ್ನು ರೂಢಿಸುತ್ತಿದೆ ಎನ್ನಬಹುದೇ?

ಟಿ. ಸಿ. ಕ್ರಿಯಾನ್
ಮಾರಿಗುಡಿ ಹಳೇ ರಸ್ತೆ
ಸುರತ್ಕಲ್ - ೫೭೪ ೧೫೮

# ಏಷಿಯಾ ಸಾಮಾಜಿಕ ವೇದಿಕೆ ಕುರಿತು...

**ಕ**ಳೆದ ವರ್ಷ 'ಮತ್ತೊಂದು ಪ್ರಪಂಚ ಸಾಧ್ಯ' ಎನ್ನುವ ಘನಘೋಷಣೆಯಡಿ ಜಾಗತಿಕ ಸಾಮಾಜಿಕ ವೇದಿಕೆ (ಡಬ್ಲ್ಯು.ಎಸ್.ಎಫ್.) ಆರಂಭವಾಗಿದೆ. ಅದರ ಏಷಿಯಾ ಸ್ಥಾಯಿ ಸಮಾವೇಶ (ಏಷಿಯಾ ಸಾಮಾಜಿಕ ವೇದಿಕೆ, ಎ.ಎಸ್.ಎಫ್.) ಜನವರಿ ೨ರಿಂದ ೭ರವರೆಗೆ ಹೈದರಾಬಾದ್‌ನಲ್ಲಿ ನಡೆಯಿತು. ಈ ಕಾರ್ಯಕ್ರಮದಲ್ಲಿ ಸಾಮ್ರಾಜ್ಯವಾದ, ಜಾಗತೀಕರಣ ಮತ್ತು ಧರ್ಮದ ಹೆಸರಿನಲ್ಲಿ ನಡೆಯುವ ಹಿಂಸೆಯನ್ನು ವಿರೋಧಿಸುವ ಯಾರಾದರೂ ಪಾಲ್ಗೊಳ್ಳಬಹುದೆಂದು ಕರೆ ನೀಡಲಾಗಿತ್ತು. ಈ ಸಂದರ್ಭದಲ್ಲಿ ಎ.ಎಸ್.ಎಫ್.ಗೆ ಸಾಮ್ರಾಜ್ಯವಾದ, ಹಿಂದೂ ಕೋಮುವಾದ ಕುರಿತು ಇರುವ ದೃಷ್ಟಿಕೋನ, ಹೋರಾಟ ವಿಧಾನ ಮುಂತಾದ ಮೂಲಭೂತ ವಿಚಾರಗಳ ಕುರಿತು ಬಹಳಷ್ಟು ಪ್ರಶ್ನೆಗಳನ್ನು ನೈಜ ಸಾಮ್ರಾಜ್ಯವಾದ ವಿರೋಧಿ ಹೋರಾಟಗಾರರು ಎತ್ತಿದ್ದರು.

ಸಾಮ್ರಾಜ್ಯವಾದವು ಇಡೀ ಪ್ರಪಂಚವನ್ನು ತನ್ನ ಆಕ್ಟೋಪಸ್‌ನಂಥ ಹಿಡಿತದಲ್ಲಿ ಇಟ್ಟುಕೊಂಡು ಜನತೆಯನ್ನು ನಿರಂತರವಾಗಿ ಶೋಷಿಸುತ್ತಾ ಬರುತ್ತಿದೆ. ಈ ಸಾಮ್ರಾಜ್ಯಶಾಹಿಗಳ ಮೋಸ, ವಂಚನೆ, ಲೂಟಿಯನ್ನು ಪ್ರಜೆಗಳು ಅರ್ಥಮಾಡಿಕೊಳ್ಳುತ್ತಾ ಅವರ ವಿರುದ್ಧ ಹೋರಾಡುತ್ತಲೇ ಬರುತ್ತಿದ್ದಾರೆ. ಈ ರೀತಿ ಹೋರಾಡುವ ಪ್ರಜೆಗಳ ನಡುವೆ ಐಕ್ಯತೆ ಸಾಧಿಸಬೇಕಾಗಿದೆ. ಆದರೆ ಈ ಐಕ್ಯತೆ ತಮ್ಮ ಆಗ್ರಹವನ್ನು ಪ್ರದರ್ಶಿಸಲು ಕೇವಲ ನಾಲ್ಕೈದು ದಿನ ಮಾತ್ರವೇ ಇದ್ದರೆ ಸಾಲದು. ಅದು ನಿತ್ಯ ಬದುಕಿನ ಕಾರ್ಯಾಚರಣೆಯಾಗಬೇಕು. ಆದರೆ ಸಾಮಾಜಿಕ ವೇದಿಕೆ "ಆ ಕಾರ್ಯಾಚರಣೆಗೆ ಸಂಬಂಧಿಸಿದ ಪ್ರತಿಪಾದನೆ ಕುರಿತಾಗಲಿ, ಪ್ರಕಟಣೆಯ ಕುರಿತಾಗಲಿ, ನಿರ್ಣಯಗಳನ್ನು ತೆಗೆದುಕೊಳ್ಳಲಿಕ್ಕೆ ಅವಕಾಶವಿಲ್ಲ" ಎಂದು ತನ್ನ ನಿಬಂಧನೆಗಳನ್ನು ಪ್ರಕಟಿಸಿದೆ. ಕಾರ್ಯಾಚರಣೆ ಏನಿದ್ದರೂ ಆಯಾ ಸಂಸ್ಥೆಗಳದ್ದೆಂದು ಹೇಳುತ್ತದೆ. ಇದು ಕಾರ್ಯಾಚರಣೆಯನ್ನು ಮಾತಿನಲ್ಲಿ ವಿರೋಧಿಸದಿದ್ದರೂ, ಕೃತಿಯಲ್ಲಿ ವಿರೋಧಿಸುವ ದೃಷ್ಟಿಕೋನ ಹೊಂದಿದೆ.

ಸಾಮ್ರಾಜ್ಯವಾದದ ವಿರುದ್ಧದ ಹೋರಾಟದಲ್ಲಿ ಪ್ರದರ್ಶನಗಳು, ಐಕ್ಯತಾ ಪ್ರಕಟಣೆಗಳು ಉಪಯೋಗಕರ ಅಲ್ಲವೆಂದಲ್ಲ, ಆದರೆ ಪ್ರದರ್ಶನಗಳಿಗೆ, ಬಹಿರಂಗ ಐಕ್ಯತಾ ಪ್ರಕಟಣೆಗಳಿಗೆ ಇರುವ ಗುರಿಯೇನೆಂಬುದು ಮುಖ್ಯ ಪ್ರಶ್ನೆ. ಈ ರೀತಿಯ ಐಕ್ಯತಾ ಪ್ರದರ್ಶನಗಳು ಶತ್ರುವಿನಲ್ಲಿ ಭಯವನ್ನು ಹುಟ್ಟಿಸಬೇಕು, ಪಾಲ್ಗೊಳ್ಳುವ ಜನರಲ್ಲಿ ಉತ್ಸಾಹ, ದೃಢನಿಶ್ಚಲತೆಯನ್ನು ಬೆಳೆಸಬೇಕು. ಆದರೆ ಸಾಮಾಜಿಕ ವೇದಿಕೆಯ ಹತ್ತಿರ ಜನರಲ್ಲಿ ಐಕ್ಯತೆಯನ್ನೂ, ಆತ್ಮವಿಶ್ವಾಸವನ್ನೂ ಬೆಳೆಸುವ ಕಾರ್ಯಾಚರಣೆ ನಿರ್ಮಾಣ ಪ್ರಣಾಳಿಕೆ ಇಲ್ಲವಾದ್ದರಿಂದ ಈ ಸಮಾವೇಶಗಳು ನಿರ್ದಿಷ್ಟ ಗುರಿಯನ್ನು ತಲುಪಲಾರವು.

**ಮೂಲಭೂತ ಸಮಸ್ಯೆ**

ಈ ಸಮಾವೇಶಕ್ಕೆ ಸಂಬಂಧಿಸಿದ ಅಥವಾ ಈ ಸಮಾವೇಶದಲ್ಲಿ ಪಾಲ್ಗೊಳ್ಳುವ ಬಹಳಷ್ಟು ಸಂಘಟನೆಗಳು ಸ್ವಯಂಸೇವಾ ಅಥವಾ ಸರ್ಕಾರೇತರ ಸಂಘಟನೆಗಳಾಗಿವೆ. ಅವನ್ನೇ ಎನ್‌ಜೀಓ ಎನ್ನುತ್ತಾರೆ. ಈ ಸಂಘಟನೆಗಳಿಗೆ ಸಾಮ್ರಾಜ್ಯವಾದ ಕುರಿತು ಸೈದ್ಧಾಂತಿಕ, ರಾಜಕೀಯ, ಆರ್ಥಿಕ ದೃಷ್ಟಿಕೋನದ ಸಮಸ್ಯೆ ಮುಖ್ಯವಾಗಿ ಇದೆ. ಬೋಲ್ಷೆವಿಕ್ ಕ್ರಾಂತಿ (ರಷ್ಯಾಕ್ರಾಂತಿ)ಯ ನಂತರ ಪ್ರಪಂಚಾದ್ಯಂತ ಸಾಮ್ರಾಜ್ಯವಾದವು ಊಳಿಗಮಾನ್ಯದೊಂದಿಗೆ ಜೊತೆಗೂಡಿ ಲೂಟಿಯನ್ನು ಮುಂದುವರಿಸಿದೆ. ಹಾಗಾಗಿ ಈ ಯುಗದಲ್ಲಿ ಊಳಿಗಮಾನ್ಯತೆ ವಿರೋಧದೊಂದಿಗೆ ಸಂಬಂಧವಿಲ್ಲದ ಸಾಮ್ರಾಜ್ಯವಾದ ವಿರೋಧಕ್ಕೆ ಅರ್ಥವಿಲ್ಲ. ನಿಜವಾದ ಸಾಮ್ರಾಜ್ಯವಾದ ವಿರೋಧಿ ಹೋರಾಟಗಳು ಸ್ಥಳೀಯ ಶತ್ರುಗಳೊಂದಿಗೆ (ಭಾರತದಲ್ಲಿ ಊಳಿಗಮಾನ್ಯತೆಯೊಂದಿಗೆ) ಹೋರಾಟವನ್ನು ಸ್ಪಷ್ಟವಾಗಿ ಪ್ರಕಟಿಸಬೇಕಾಗಿದೆ, ನಡೆಸಬೇಕಾಗಿದೆ. ಆದರೆ ಈ ಸಮಾವೇಶ ನಿರ್ವಹಣೆಯಲ್ಲಿ ಭಾಗವಾಗಿ ಇರುವ ಬಹಳಷ್ಟು ಸಂಘಟನೆಗಳು ಈ ದೇಶದಲ್ಲಿ ಊಳಿಗಮಾನ್ಯತೆಯನ್ನೇ ಗುರ್ತಿಸುತ್ತಿಲ್ಲ. ತೋರಿಕೆಗೆ ಮಾತ್ರ 'ಧರ್ಮದ ಹೆಸರಿನಲ್ಲಿ ನಡೆಯುವ ಹಿಂಸೆಯನ್ನು (ಹಿಂದೂ ಕೋಮುವಾದ ಎಂದು ಸ್ಪಷ್ಟವಾಗಿ ಹೇಳುತ್ತಿಲ್ಲ!) ವಿರೋಧಿಸುತ್ತೇವೆ'ಂದು ಘೋಷಿಸಿದ್ದಾಗಲೂ ಅದು ಊಳಿಗಮಾನ್ಯತೆಗೆ ವಿರೋಧವಲ್ಲವೆಂದೂ, ಕಾರ್ಯಾಚರಣೆ ಅಸಲೇ ಅಲ್ಲವೆಂದು ಗುರ್ತಿಸಬಹುದು. ಭಾರತದಲ್ಲಿ ಜಾಗತೀಕರಣದ ಜೈತ್ರಯಾತ್ರೆಗೆ ಹಿಂದೂ ಕೋಮುವಾದವು ರಥವಾಗಲು ಹೊರಟಿರುವಾಗ ಜಾಗತೀಕರಣಕ್ಕೂ, ಹಿಂದೂ ಕೋಮುವಾದಕ್ಕೂ ನಡುವಿನ ಸಂಬಂಧವನ್ನು ಗುರ್ತಿಸದೇ ಬೇರೆ-ಬೇರೆ ಎನ್ನುವ ರೀತಿ ನೋಡಲಾಗುತ್ತಿದೆ. ಹಿಂದೂ ಕೋಮುವಾದಕ್ಕೆ ಬಿಜೆಪಿ-ಸಂಘ ಪರಿವಾರ ಮಾತ್ರವೇ ಕಾರಣವೆಂದು ನೋಡಲಾಗುತ್ತಿದೆ.

ಜಾಗತಿಕ ಸಾಮಾಜಿಕ ವೇದಿಕೆಯ ಇಂಡಿಯಾ ನಿಬಂಧನೆಗಳಲ್ಲಿ ಪ್ರಕಟಿಸಿದ ೧೮ ಅಂಶಗಳಲ್ಲಾಗಲಿ, ಹೈದರಾಬಾದ್ ಸಮಾವೇಶಕ್ಕಾಗಿ ಇಂಡಿಯಾ ಕಾರ್ಯಕ್ರಮ ಸಮಿತಿ ರೂಪಿಸಿದ ಆರು ಪ್ರಧಾನ ವಿಷಯಗಳಲ್ಲಾಗಲಿ, ಭಾರತ ದೇಶದ ಜನರ ಪ್ರಧಾನ ಸಮಸ್ಯೆಯಾದ "ಭೂಮಿ" ಕುರಿತು ಪ್ರಸ್ತಾಪವಿಲ್ಲ. ಭೂಮಿಗಾಗಿ ಜನರು ನಡೆಸುತ್ತಿರುವ ಹೋರಾಟಗಳ ಕುರಿತು, ಸರ್ಕಾರವು ಆಡುತ್ತಿರುವ ಭೂ ಹಂಚಿಕೆಯ ನಾಟಕ ಕುರಿತಾಗಿ, ಮಾತಿಗಾದರೂ ಪ್ರಸ್ತಾಪವಿಲ್ಲ. ಒಂದು ವೇಳೆ ಜಾಗತೀಕರಣ ಕ್ರಮಕ್ಕೂ ಭೂ ಸಮಸ್ಯೆಗೂ ಸಂಬಂಧ ಇಲ್ಲವೆಂದು ಸಾಮಾಜಿಕ ವೇದಿಕೆ ಭಾವಿಸಿದೆಯೇ ? ಹಾಗಾದಲ್ಲಿ ಜಾಗತೀಕರಣ ನಿಜವಾಗಿಯೂ ಯಾವ-ಯಾವ ರಂಗಗಳಲ್ಲಿ ನಡೆಯುತ್ತಿದೆ ಎಂಬುದನ್ನು ಅದು ಅರ್ಥಮಾಡಿಕೊಂಡಿಲ್ಲ ಎಂದು ತಿಳಿಯಬೇಕಾಗುತ್ತದೆ. ದೇಶಾದ್ಯಂತ ಲಕ್ಷಾಂತರ ಎಕರೆ ಭೂಮಿಯನ್ನು ಬಹುರಾಷ್ಟ್ರೀಯ ಕಂಪೆನಿಗಳಿಗೆ ನೀಡುತ್ತಿರುವುದು, ವ್ಯವಸಾಯ ರಂಗವು ಅಂತಾರಾಷ್ಟ್ರೀಯ ಮಾರುಕಟ್ಟೆಯನ್ನು ಪ್ರವೇಶಿಸಿರುವುದು, ರೈತರಿಗೆ ಕನಿಷ್ಠ ಬೆಂಬಲ ಬೆಲೆ ಕೂಡಾ ದೊರಕದಿರುವುದು, ರೈತರು ಆತ್ಮಹತ್ಯೆಯ ದಾರಿ ಹಿಡಿದಿರುವುದು, ಭೂಮಿಯಿಲ್ಲದ ರೈತ-ಕೂಲಿಗಳಿಗೆ ವ್ಯವಸಾಯ ಕೂಲಿ ಕೆಲಸಗಳೂ ಕಡಿಮೆಯಾಗಿರುವುದು, ಹಸಿವಿನಿಂದ ಸಾಯುತ್ತಿರುವುದು ಜಾಗತೀಕರಣದ ನೇರ ಪರಿಣಾಮಗಳಾಗಿವೆ. ಜಾಗತೀಕರಣದಿಂದಲೇ ಆದಿವಾಸಿ ಮತ್ತು ಗಿರಿಜನರ ಭೂಮಿಯ ಪರಿರಕ್ಷಣೆ ಕಾಯ್ದೆಯನ್ನು ರದ್ದುಮಾಡಿ ಆ ಭೂಮಿಯನ್ನು ಬಹುರಾಷ್ಟ್ರೀಯ ಕಂಪೆನಿಗಳಿಗೆ, ಅವರ ದಲ್ಲಾಳಿಗಳಿಗೆ ನೀಡುವ ಪ್ರಯತ್ನ ನಡೆಯುತ್ತಿದೆ. ಜಾಗತೀಕರಣ ಕ್ರಮದಲ್ಲಿ ಅಂತಾರಾಷ್ಟ್ರೀಯ ಹಣಕಾಸು ಸಲಹಾ ಸಂಸ್ಥೆಗಳು ಪ್ರಕಟಿಸಿದ ಸುಮಾರು ಪತ್ರಗಳಲ್ಲಿ ಭೂ ಹಂಚಿಕೆಗೆ ವಿರೋಧವಾದ ದೃಷ್ಟಿಕೋನವಿದೆ.

ಇವೆಲ್ಲಾ ಇದ್ದಾಗಲೂ ಜಾಗತೀಕರಣವನ್ನು ವಿರೋಧಿಸುತ್ತೇವೆಂದು ಹೇಳಿಕೊಳ್ಳುವ ಸಾಮಾಜಿಕ ವೇದಿಕೆ ಕನಿಷ್ಠ ಹೈದರಾಬಾದ್ ಸಮಾವೇಶ ಸಂದರ್ಭದಲ್ಲಾದರೂ ಭೂ-ಸಮಸ್ಯೆಯನ್ನು ಪ್ರಸ್ತಾಪಕ್ಕೆ ತರಲಿಲ್ಲವೆಂದರೆ ಅದರ ಅರ್ಥವೇನು ? ಯಾವ ನೆಲದ ಮೇಲೆ ಒಂದು ಚಾರಿತ್ರಿಕ ಭೂ ಹೋರಾಟದಲ್ಲಿ ನಾಲ್ಕು ಸಾವಿರ ಜನರು ಪ್ರಾಣವನ್ನು ಅರ್ಪಿಸಿ "ಉಳುವವನಿಗೆ ಭೂಮಿ" ಘೋಷಣೆಯನ್ನು ಬೆಳಕಿಗೆ ತಂದರೋ, ಯಾವ ನೆಲದ ಮೇಲೆ ಈ ದಿನ ಉಜ್ವಲವಾದ ಭೂಮಿ-ಭುಕ್ತಿ-ವಿಮುಕ್ತಿಗಾಗಿ ಹೋರಾಟ ನಡೆಯುತ್ತಿದೆಯೋ ಅದೇ ನೆಲದ ಮೇಲೆ ಭೂ ಸಮಸ್ಯೆಯೊಂದಿಗೆ ಸಂಬಂಧವಿಲ್ಲದ ಸಾಮಾಜಿಕ ವೇದಿಕೆಯ ಸಭೆ ಜರುಗಿತು !

**ದಾರಿ ತಪ್ಪಿಸುತ್ತಿರುವ ಎನ್.ಜೀ.ಓ.ಗಳು**

ಜಾಗತೀಕರಣದ ಭಾಗವಾಗಿ ಸರ್ಕಾರಕ್ಕೆ ಸುಧಾರಣಾ ಪ್ರಕ್ರಿಯೆಗಳನ್ನು ಕೈಬಿಟ್ಟು, ಅನೇಕ ಸಾರ್ವಜನಿಕ ರಂಗಗಳನ್ನು ಖಾಸಗೀಕರಣಗೊಳಿಸಬೇಕೆಂದು ಸಾಮ್ರಾಜ್ಯಶಾಹಿ ಶಕ್ತಿಗಳು ವಿಶ್ವಬ್ಯಾಂಕ್ ಮೂಲಕ ಆದೇಶಿಸುತ್ತಿವೆ. ಈ

**ಸಾಮ್ರಾಜ್ಯವಾದದ ವಿರುದ್ಧದ ಹೋರಾಟದಲ್ಲಿ ಪ್ರದರ್ಶನಗಳು, ಐಕ್ಯತಾ ಪ್ರಕಟಣೆಗಳು ಉಪಯೋಗಕರ ಅಲ್ಲವೆಂದಲ್ಲ. ಆದರೆ ಪ್ರದರ್ಶನಗಳಿಗೆ, ಬಹಿರಂಗ ಐಕ್ಯತಾ ಪ್ರಕಟಣೆಗಳಿಗೆ ಇರುವ ಗುರಿಯೇನೆಂಬುದು ಮುಖ್ಯ ಪ್ರಶ್ನೆ. ಈ ರೀತಿಯ ಐಕ್ಯತಾ ಪ್ರದರ್ಶನಗಳು ಶತ್ರುವಿನಲ್ಲಿ ಭಯವನ್ನು ಹುಟ್ಟಿಸಬೇಕು, ಪಾಲ್ಗೊಳ್ಳುವ ಜನರಲ್ಲಿ ಉತ್ಸಾಹ, ದೃಢ ನಿಶ್ಚಲತೆಯನ್ನು ಬೆಳೆಸಬೇಕು. ಆದರೆ ಸಾಮಾಜಿಕ ವೇದಿಕೆಯ ಹತ್ತಿರ ಜನರಲ್ಲಿ ಐಕ್ಯತೆಯನ್ನೂ, ಆತ್ಮವಿಶ್ವಾಸವನ್ನೂ ಬೆಳೆಸುವ ಕಾರ್ಯಾಚರಣೆ ನಿರ್ಮಾಣ ಪ್ರಣಾಳಿಕೆ ಇಲ್ಲವಾದ್ದರಿಂದ ಈ ಸಮಾವೇಶಗಳು ನಿರ್ದಿಷ್ಟ ಗುರಿಯನ್ನು ತಲುಪಲಾರವು.**

**ಮನೋಹರ** (ಆರ್. ಸಿ. ಎಸ್.)

ಸಮಯದಲ್ಲಿ ಎನ್.ಜೀ.ಓ.ಗಳೂ ಸಹ ಅದೇ ವಿಷಯವನ್ನು ಇನ್ನೊಂದು ಭಾಷೆಯಲ್ಲಿ ಹೇಳುತ್ತಿವೆ. ಜನರು ಸರ್ಕಾರದ ಕಡೆ ನೋಡಬಾರದೆನ್ನುತ್ತಾ, 'ಸ್ವ-ಸಹಾಯ' ಮಾಡಿಕೊಳ್ಳಬೇಕೆಂಬ ಆಕರ್ಷಣೀಯವಾದ ಘೋಷಣೆಯೊಂದಿಗೆ ಜನರು ಸರ್ಕಾರವನ್ನು ದೂಷಿಸಬಾರದೆಂದು ಬೋಧಿಸುತ್ತಿವೆ. ಜನತೆಯ ಹೋರಾಟದ ಚೈತನ್ಯವನ್ನು ಸಾಮ್ರಾಜ್ಯಶಾಹಿ ಸಂಸ್ಥೆಗಳು ನಿಧಿಯ ಸಹಾಯದಿಂದ ದಾರಿತಪ್ಪಿಸುತ್ತಿವೆ. ಈ ಸಂದರ್ಭದಲ್ಲಿ ಎನ್.ಜಿ.ಓ.ಗಳ ಕುರಿತು ಒಬ್ಬ ಪ್ರಗತಿಪರ ಹೋರಾಟಗಾರ್ತಿ ಹೀಗೆ ಹೇಳಿದ್ದಾರೆ: ''ಈ ಎನ್.ಜಿ.ಓ.ಗಳು ಮಾಡುತ್ತಿರುವುದೆಲ್ಲಾ ಯುದ್ಧವೊಂದರಲ್ಲಿ ಗಾಯಗೊಂಡವರಿಗೆ ಬ್ಯಾಂಡೇಜು ಹಾಕುವಂತಹ 'ಸೇವೆ'ಯನ್ನಷ್ಟೇ. ಅತ್ತ ಯುದ್ಧ ಮಾತ್ರ ಮುಂದುವರಿದೇ ಇರುತ್ತದೆ. ಇವು ಇದನ್ನೆಲ್ಲ ತಮಗೆ ಹಣ ನೀಡುವ ಏಜೆನ್ಸಿಯ ಸ್ವಭಾವಕ್ಕೆ ಅನುಗುಣವಾಗಿ, ಸರಳ ಬುದ್ಧಿಯಿಂದಾಗಲಿ ಅಥವಾ ನೀಚ ಕುತಂತ್ರದ ಬುದ್ಧಿಯಿಂದಾಗಲಿ, ಯಾವುದರಿಂದಲೇ ಮಾಡುತ್ತಿರಲಿ ಅದರ ಅಪಾಯವೇನೆಂದರೆ, ಅದು ಕೇವಲ ಗಾಯಗೊಂಡವರ ಅಥವಾ ಸತ್ತವರ ಕಡೆಗಷ್ಟೇ ಜನರ ಗಮನ ಸೆಳೆಯುತ್ತದೆಯೇ ಹೊರತು, ಇಡೀ ಯುದ್ಧದ ರಾಜಕೀಯದ ಕಡೆಗಲ್ಲ; ಗಾಯಗೊಂಡವರಿಗೆ ಸೇವೆ ಸಲ್ಲಿಸುವುದರ ಕಡೆಗೆ ಹೊರತೂ, ಯುದ್ಧವನ್ನೇ ನಿಲ್ಲಿಸುವ ಯಾವುದೇ ಪ್ರಯತ್ನದ ಕಡೆಗಲ್ಲ. ಹೀಗೆ ಅವುಗಳ ಚಟುವಟಿಕೆಗಳು ಕೆಲವೇ ವ್ಯಕ್ತಿಗಳನ್ನು ಅಥವಾ ಕೆಲವೇ ಸಮಸ್ಯೆಗಳನ್ನು ತಮ್ಮ ಗುರಿಯಾಗಿಸಿಕೊಂಡಿರುತ್ತವೆ. ಇಡೀ ಶೋಷಕ ವ್ಯವಸ್ಥೆ ಯಾವುದೇ ಅಪಾಯವಿಲ್ಲದೇ ಉಳಿದುಕೊಳ್ಳುತ್ತದೆ.''

ಈ ಎನ್.ಜೀ.ಓ.ಗಳ ಮತ್ತೊಂದು ಸಮಸ್ಯೆ ಅವರಿಗೆ ಬರುವ ನಿಧಿ ಕುರಿತು. ಆ ಹಣವನ್ನು ನೀಡುವವರು, ಅವರು ಖರ್ಚು ಮಾಡುವ ರೀತಿ, ಅವರ ಜೀವನ ವಿಧಾನದಿಂದ ಎನ್.ಜೀ.ಓ. ಕುರಿತು ಇನ್ನಷ್ಟು ಸ್ಪಷ್ಟವಾಗುತ್ತದೆ. ಸಾಮ್ರಾಜ್ಯಶಾಹಿ ಸಂಸ್ಥೆಗಳು, ಸಾಮ್ರಾಜ್ಯಶಾಹಿ ದೇಶಗಳ ಸರ್ಕಾರಗಳು, ಬಹುರಾಷ್ಟ್ರೀಯ ಕಂಪೆನಿಗಳು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಎನ್.ಜೀ.ಓ.ಗಳಿಗೆ ನಿಧಿ ಒದಗಿಸುತ್ತವೆ. (ಉದಾ : ಫೋರ್ಡ್ ಕಂಪೆನಿ ಫೋರ್ಡ್ ಫೌಂಡೇಶನ್ ಮೂಲಕ ನೀಡುತ್ತಿರುವುದು). ಸಾಮಾಜಿಕ ವೇದಿಕೆಯ ಸಮಾವೇಶಕ್ಕೂ ಸಹ ಇದೇ ಶತ್ರುಗಳೇ ನಿಧಿ ನೀಡಿರುವುದು ಗಮನಾರ್ಹ! ಈ ಸಮಾವೇಶಕ್ಕೆ ಹಾಜರಾದ, ಪ್ರಾಯೋಜಕರಲ್ಲೊಬ್ಬರಾದ ಹಿರಿಯ 'ಕಮ್ಯುನಿಸ್ಟ್' ನಾಯಕ ತಾನೂ ಸನ್ಯಾಲ್‌ರವರನ್ನು ವರದಿಗಾರರು ಈ ಕುರಿತು ಕೇಳಿದಾಗ ''ಸಾಮ್ರಾಜ್ಯಶಾಹಿಗಳಿಂದ ಹಣ ತೆಗೆದುಕೊಂಡು ಸಾಮ್ರಾಜ್ಯವಾದವನ್ನು ವಿರೋಧಿಸಬಹುದು'' ಎಂದಿದ್ದಾರೆ. ಈ ನಿಧಿಯನ್ನು ಯಾವ ಉದ್ದೇಶದಿಂದ ನೀಡುತ್ತಿವೆ ಎಂದು ತುಂಬಾ ಚರ್ಚೆ ನಡೆಯುತ್ತಿದೆ.

ಈ ಎನ್.ಜೀ.ಓ.ಗಳಲ್ಲಿ ಕೆಲಸಮಾಡುವ ಕೆಳಸ್ತರ ಉದ್ಯೋಗಿಗಳಿಗೆ, ಕಡೇಪಕ್ಷ ಮ್ಯಾನೇಜರ್‌ವರೆಗೂ ಈ ನಿಧಿಯ ತಳ-ಬುಡವೇನೆಂದು, ಉದ್ದೇಶವೇನೆಂದು ತಿಳಿಯದಿರಬಹುದು. ತಿಳಿದಿದ್ದರೂ ಕೂಡಾ 'ಸಮಾಜ ಸೇವೆ' ಎಂದು ಅಮಾಯಕವಾಗಿ ನಂಬುತ್ತಿರಬಹುದು. ಆದರೆ ನಿಧಿಯನ್ನು ನೀಡುತ್ತಿರುವವರಿಗೆ ಸ್ಪಷ್ಟವಾದ ಉದ್ದೇಶ, ಗುರಿಗಳಿವೆ. ಈ ನಿಧಿಯನ್ನು ಪ್ರಜೆಗಳ




ಹೋರಾಟದ ಚೈತನ್ಯವನ್ನು ಅಂದಾಜು ಮಾಡುವ ಪರಿಶೋಧನೆಗೆ, ಹೋರಾಟದಲ್ಲಿ ಪಾಲ್ಗೊಂಡು ಹಿಂದಕ್ಕೆ ಸರಿದಿರುವವರಿಗೆ, ಸರ್ಕಾರ ಜವಾಬ್ದಾರಿಯನ್ನು ನಿರ್ವಹಿಸದಿರುವುದನ್ನು ಪ್ರಶ್ನಿಸದೇ ಇರಲು, ವ್ಯವಸ್ಥೆಯ ಬದಲಾವಣೆ ಅವಶ್ಯಕತೆಯಿಲ್ಲವೆಂದು, ಸುಧಾರಣೆಗಳಿಂದ, ದಾನ-ಧರ್ಮಗಳಿಂದ ಸಮಸ್ಯೆಗಳು ಪರಿಷ್ಕಾರವಾಗುತ್ತವೆ ಎಂದು ಭ್ರಮೆಯನ್ನು ಹುಟ್ಟಿಸಲು, ಶಿಕ್ಷಣ, ಆರೋಗ್ಯ, ಕುಡಿಯುವ ನೀರು, ವ್ಯವಸಾಯದಂತಹ ಕ್ಷೇತ್ರಗಳಿಗೆ, ಪ್ರಗತಿಪರವಾಗಿ ಕಂಡುಬರುತ್ತಲೇ ಹೋರಾಟದ ಅನಿವಾರ್ಯತೆಯನ್ನು ಮರೆಮಾಚುವ ಪ್ರಚಾರ ಕಾರ್ಯಕ್ರಮಗಳಿಗೆ, ಈ ರೀತಿಯ ಕಾರ್ಯಕ್ರಮಗಳಿಗೆ ಒದಗಿಸಲಾಗುತ್ತದೆ. ಇದೆಲ್ಲಾ ಒಂದು ವಿಷ ಜಾಲ. ಬಲಗೈಯಲ್ಲಿ ಜಾಗತೀಕರಣ ಶಕ್ತಿಗಳು ಮಾಡುತ್ತಿರುವ ಕೆಲಸಗಳನ್ನು ಎನ್.ಜೀ.ಓ.ಗಳು ಎಡಗೈಯಲ್ಲಿ ಮಾಡುತ್ತಿವೆ. ಎನ್.ಜೀ.ಓ.ಗಳಲ್ಲಿ ಕೆಲವೇ ಕೆಲವು ಈ ರೀತಿಯ ನಿಧಿ ಇಲ್ಲದೆ ಕೆಲಸ ಮಾಡುತ್ತಿರಬಹುದು. ಅವುಗಳನ್ನು ಬಿಟ್ಟು ಶೇ. ೯೮ರಷ್ಟು ಎನ್.ಜೀ.ಓ.ಗಳು ಸಾಮ್ರಾಜ್ಯಶಾಹಿಗಳಿಂದ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಿಧಿಯನ್ನು ಪಡೆಯುತ್ತಿವೆ.

ಈ ರೀತಿಯ ಎನ್.ಜೀ.ಓ.ಗಳ ಮೇಲೆ ಭರವಸೆಯಿಟ್ಟು ಜಾಗತೀಕರಣವನ್ನು ವಿರೋಧಿಸುವ ಕಾರ್ಯಕ್ರಮವನ್ನು ಏರ್ಪಡಿಸುವುದು ಹಾಸ್ಯಾಸ್ಪದವಾದರೂ ಆಗಿರಬೇಕು. ಇಲ್ಲವಾದರೆ ಮೋಸಪೂರಿತವಾದರೂ ಆಗಿರಬೇಕು. ಈ ರೀತಿ ಆಳುವ ವರ್ಗದ ಭಾಗವಾಗಿದ್ದು ಸಾಮ್ರಾಜ್ಯವಾದವನ್ನು ವಿರೋಧಿಸುವುದರಲ್ಲಿ ಯಾವುದೇ ಅರ್ಥವಿಲ್ಲ.

**ನೈಜ ಹೋರಾಟವನ್ನು ವಿರೋಧಿಸುವ ವೈಖರಿ**

ಸಾಮಾಜಿಕ ವೇದಿಕೆಯ ಸಮಾವೇಶದಲ್ಲಿ ಕಾಶ್ಮೀರ ಸಮಸ್ಯೆ ಕುರಿತು ಚರ್ಚಿಸಲಾಗಿದೆ. ಕಾಶ್ಮೀರದ ಪ್ರಶ್ನೆ ಒಂದು ಉಗ್ರವಾದ ದೊಡ್ಡ ಸಮಸ್ಯೆ ಎಂದು ಬಿಂಬಿಸಲಾಗಿದೆ. ಉಗ್ರವಾದದಿಂದಾಗಿ ಅಲ್ಲಿನ ಜನಜೀವನ ಅಸ್ತವ್ಯಸ್ತವಾಗಿದೆ ಎನ್ನಲಾಗುತ್ತಿದೆ. ಅಲ್ಲಿ ನಡೆಯುತ್ತಿರುವ ಮಾನವ ಹಕ್ಕುಗಳ ಉಲ್ಲಂಘನೆಗೆ ಉಗ್ರವಾದಿಗಳು ಹಾಗೂ ಮಿಲಿಟರಿ ಎರಡೂ ಕಾರಣಗಳಾಗಿವೆ ಎಂದು ತೀರ್ಮಾನಿಸಿದೆ. ಆದರೆ ಕಾಶ್ಮೀರ ಸಮಸ್ಯೆಗೆ ವಾಸ್ತವಿಕ ಕಾರಣಗಳನ್ನು ಹುಡುಕಲಾಗಿಲ್ಲ. ಆ ಸಮಸ್ಯೆಗೆ ಮುಖ್ಯ ಕಾರಣವಾದ ಭಾರತ ಸರ್ಕಾರದ ವೈಖರಿಯ ಕುರಿತು ಮಾತನಾಡಲಾಗಿಲ್ಲ. ಒಟ್ಟಾರೆಯಾಗಿ ಸ್ವತಂತ್ರ ಕಾಶ್ಮೀರಕ್ಕಾಗಿ ನಡೆಸುತ್ತಿರುವ ಹೋರಾಟವನ್ನು, ಜನರು ತಮ್ಮ ಹಕ್ಕುಗಳಿಗಾಗಿ ಹೋರಾಡುವುದನ್ನು ಈ ವೇದಿಕೆ ಸಮರ್ಥಿಸಿಲ್ಲ.

ಅದೇ ರೀತಿ ನೇಪಾಳದಲ್ಲಿ ನೈಜ ಪ್ರಜಾತಂತ್ರಕ್ಕಾಗಿ ಹೋರಾಡುತ್ತಿರುವ ಮಾವೋವಾದಿಗಳನ್ನು ಬಂಡುಕೋರರಾಗಿ, ವಿಚ್ಛಿದ್ರಕಾರಿ ಶಕ್ತಿಗಳಾಗಿ ಚಿತ್ರಿಸಲಾಗಿದೆ. ನೇಪಾಳ ಜನರ ಕಷ್ಟ-ಕಾರ್ಪಣ್ಯಗಳಿಗೆ ಅಲ್ಲಿನ ಊಳಿಗಮಾನ್ಯತೆ, ಅದನ್ನು ಕಾಪಾಡುತ್ತಿರುವ ಸರ್ಕಾರವೇ ಕಾರಣವಾಗಿದೆ. ಅದನ್ನು ಹೋಗಲಾಡಿಸಲು ಅಲ್ಲಿನ ಬಡಜನರ ಪರವಾಗಿ ಮಾವೋವಾದಿಗಳು ನಿಂತಿದ್ದಾರೆ. ಈ ಹೋರಾಟವನ್ನು ಉಕ್ಕಿನ ಪಾದದಡಿ ಹತ್ತಿಕ್ಕಲಾಗುತ್ತಿದೆ. ಈ ಹೋರಾಟವನ್ನು ಹತ್ತಿಕ್ಕಲು ಸಾಮ್ರಾಜ್ಯಶಾಹಿ ದೇಶವಾದ ಅಮೆರಿಕಾ ಹಾಗೂ ಭಾರತ ಆಯುಧಗಳನ್ನು ಒಳಗೊಂಡಂತೆ ವಿವಿಧ ಸಹಾಯಗಳನ್ನು ನೀಡುತ್ತಿವೆ. ಭಾರತವು ಅವಶ್ಯವಿದ್ದಲ್ಲಿ ಸೈನ್ಯವನ್ನು ಕಳಿಸುತ್ತೇನೆಂದು ಹೇಳಿದೆ. ಇದು ಭಾರತದ ವಿಸ್ತರಣಾವಾದಿ ಆಕಾಂಕ್ಷೆಗೆ ನಿದರ್ಶನವಾಗಿದೆ. ಇದರಿಂದಲೇ ಮಾವೋವಾದಿಗಳು ಯಾರ ಪರ - ಏತಕ್ಕಾಗಿ ಹೋರಾಡುತ್ತಿದ್ದಾರೆ ಎಂದು ಅರ್ಥವಾಗುತ್ತದೆ. ಹಾಗಾಗಿ ಅಲ್ಲಿ ನಡೆಯುತ್ತಿರುವ ಹಿಂಸೆಗೆ ಸರ್ಕಾರವು ನೇರ ಕಾರಣವಾಗಿದೆ. ಅದನ್ನು ಬಿಟ್ಟು ಸಾಮಾಜಿಕ ವೇದಿಕೆ ''ಸರ್ಕಾರ ಮತ್ತು ಮಾವೋವಾದಿಗಳ ನಡುವೆ ಸಾಮಾನ್ಯ ಜನರು ಬಲಿಯಾಗುತ್ತಿದ್ದಾರೆ'' ಎಂದು ಸರಳ ಅಭಿಪ್ರಾಯಕ್ಕೆ ಬಂದಿರುವುದು ಸರಿಯಲ್ಲ. ನಾವು ಸಾಮ್ರಾಜ್ಯವಾದವನ್ನು ವಿರೋಧಿಸಿದ್ದೇ ಆದಲ್ಲಿ ನೇಪಾಳದ ಮಾವೋವಾದಿಗಳ ಹೋರಾಟವನ್ನು ಬೆಂಬಲಿಸಬೇಕು. ಇಲ್ಲವಾದಲ್ಲಿ ಅದು ಆಳುವ ಸರ್ಕಾರಗಳಿಗೆ ನೈಜ ಹೋರಾಟವನ್ನು ಹತ್ತಿಕ್ಕಲು ಒಂದು ''ಆಯುಧ'' ಸಹ ಆಗುತ್ತದೆ.

ಆದ್ದರಿಂದಲೇ ಸಾಮ್ರಾಜ್ಯವಾದವನ್ನು ಸರಿಯಾದ ದೃಷ್ಟಿಕೋನದಿಂದ ಅರ್ಥೈಸಿಕೊಂಡು ನಿರ್ಮಾಣಾತ್ಮಕ ಹೋರಾಟ ನಡೆಸುತ್ತಿರುವ ಸಂಘಟನೆಗಳು ಈ ವೇದಿಕೆಯಲ್ಲಿ ಇಲ್ಲ. ಆದರೂ ಕೆಲವು ಪ್ರಗತಿಪರ ಶಕ್ತಿಗಳು ಈ ವೇದಿಕೆಯಲ್ಲಿ ಇದ್ದಾರೆ. ಅವರು ಅಮಾಯಕತನದಿಂದಲೋ ಅಥವಾ ತಿಳಿದಿದ್ದೂ ಸಹ ಆ ವೇದಿಕೆಯನ್ನು ಸರಿಯಾದ ದಾರಿಯಲ್ಲಿ ಬೆಳೆಸೋಣವೆಂದೋ ಅಥವಾ ಬೇರೆ ದಾರಿ ಕಾಣದೆ ಅವಕಾಶವಾದಿತನದಿಂದ ವೇದಿಕೆಯಲ್ಲಿ ಪಾಲು ಹಂಚಿಕೊಂಡಿರಬಹುದು. ಆದರೆ ವಾಸ್ತವತೆಯನ್ನು ಅರಿತು ''ಮತ್ತೊಂದು ಪ್ರಪಂಚ ಸಾಧ್ಯ'' ಎನ್ನುವ ಘೋಷಣೆಗಿಂತ ಸಾಮ್ರಾಜ್ಯವಾದವನ್ನು ಸೋಲಿಸಿ ಸಮಾಜವಾದವನ್ನು ಸ್ಥಾಪಿಸಬೇಕಾಗಿರುವುದರಿಂದ ಸ್ಪಷ್ಟವಾಗಿ ''ಸಮಾಜವಾದ ಸಾಧ್ಯ'' ಎನ್ನುವ ಘೋಷಣೆಯಡಿ ಒಂದುಗೂಡಬೇಕಾಗಿದೆ. ಈಗ್ಗೆ ೧೫೦ ವರ್ಷಗಳ ಹಿಂದೆ ಮಾರ್ಕ್ಸ್, ಏಂಗೆಲ್ಸ್‌ರು ''ವಿಶ್ವ ಕಾರ್ಮಿಕರೇ ಒಂದಾಗಿ'' ಎಂದು ಕರೆ ನೀಡಿರುವ ರಣ ಘೋಷಣೆಯನ್ನು ಗಟ್ಟಿಯಾಗಿ ಕೂಗಿ ಜನರ ಶತ್ರುಗಳನ್ನು ಪ್ರತ್ಯೇಕಗೊಳಿಸಬೇಕಾಗಿದೆ. ಪ್ರಪಂಚದ ನೈಜ ಸಾಮ್ರಾಜ್ಯಶಾಹಿ ವಿರೋಧಿಶಕ್ತಿಗಳು ಒಗ್ಗೂಡಿ ಸಾಮ್ರಾಜ್ಯವಾದವನ್ನು ಸೋಲಿಸಿ ನವಸಮಾಜವನ್ನು ನಿರ್ಮಿಸುವತ್ತ ಹೆಜ್ಜೆ ಹಾಕಬೇಕಾಗಿದೆ.

**ಮನೋಹರ (ಆರ್. ಓ. ಎಸ್.)**
ಯುಟಿ ನಂ. ೧೫೭೦, ಚರ್ಲಾಪಲ್ಲಿ ಕೇಂದ್ರೀಯ ಕಾರಾಗೃಹ,
ರಂಗಾರೆಡ್ಡಿ ಜಿಲ್ಲೆ, ಆಂಧ್ರಪ್ರದೇಶ - ೫೦೧ ೩೦೧

# ಎಲ್ಲೆಡೆ ಗುಲ್ಲೆಬ್ಬಿಸಿರುವ ಎಬೋಲ

ಡಾ॥ ಕರವೀರಪ್ರಭು ಕ್ಯಾಲಕೊಂಡ

**ಎಬೋಲ !**

ಜಗದ ಜನರನ್ನು ತಲ್ಲಣಗೊಳಿಸಿದೆ, ಆಗಿದೆ ಎಲ್ಲೆಡೆ ಅಲ್ಲೋಲ ಕಲ್ಲೋಲ !!

ಏನೀ ಎಬೋಲ !!!

ಇದೊಂದು ನದಿಯ ಹೆಸರು.

ದಕ್ಷಿಣ ಆಫ್ರಿಕಾದ ಕಿಕ್ವಿಟ್ ಎಂಬ ಪಟ್ಟಣದ ಬಳಿ ಹರಿಯುತ್ತದೆ. ಇದು ನಮ್ಮ ನಿಮ್ಮ ಊರುಗಳಂತೆ ನೀರಿಲ್ಲದ, ಕಣ್ಣು ಮುಚ್ಚಾಲೆ ಆಡುವ ವಿದ್ಯುದ್ದೀಪದ, ಸರಿಯಾದ ಒಳಚರಂಡಿ ವ್ಯವಸ್ಥೆಯಿಲ್ಲದ, ಕೊಳೆಗೇರಿಗಳಿಂದ ತುಂಬಿದ ನಗರ. ಇಲ್ಲಿಯವರೆಗೆ ಯಾರ ಗಮನವನ್ನೂ ಸೆಳೆಯದೆ, ಹತ್ತರ ಕೂಡ ಹನ್ನೊಂದಾಗಿ ಇದ್ದ ಈ ಊರು ಇದ್ದಕ್ಕಿದ್ದಂತೆ ಜಗತ್ತಿನ ಲಕ್ಷ್ಯವನ್ನು ತನ್ನತ್ತ ಸೆಳೆದುಕೊಂಡಿದೆ. ವಿಚಿತ್ರ, ವಿಕ್ಷಿಪ್ತ, ವಿನಾಶಕಾರೀ ಕಾಯಿಲೆಯೊಂದರ ತವರೂರು ಎಂಬ ಕುಖ್ಯಾತಿಗೆ ಪಾತ್ರವಾಗಿದೆ! ಎಬೋಲ ನದಿಯ ದಂಡೆಯ ಪ್ರದೇಶದಲ್ಲಿ ಈ ರೋಗದ ಹಾವಳಿ ಕಾಣಿಸಿಕೊಂಡಿದ್ದರಿಂದ ಈ ರೋಗಕ್ಕೆ ಎಬೋಲ ಎಂತಲೇ ಕರೆಯಲಾಗಿದೆ!! ಏಡ್ಸ್‌ನ ಉಗಮ ಸ್ಥಾನವೆಂದು ನಂಬಲಾದ ಜೈರೆಯೇ ಎಬೋಲಕ್ಕೂ ತವರೂರಾಗಿರುವುದು ದುರಂತವೇ ಸೈ !!

ಕೆಲವು ಸ್ಥಳಗಳಿಗೆ ಮಾತ್ರ ಸೀಮಿತವಾಗಿದ್ದ ತೀವ್ರ ಸ್ವರೂಪದ ಜ್ವರದಿಂದ ರಕ್ತೋದ್ರೇಕವನ್ನುಂಟುಮಾಡುವ ಕೆಲವು ವೈರಸ್ ರೋಗಗಳು ಇಂದು ಸೀಮೆಯ ಸೀಮೋಲ್ಲಂಘನ ಮಾಡಿವೆ. ಇದಕ್ಕೆ ಕಾರಣ ಸಂಪರ್ಕ ಮಾಧ್ಯಮಗಳ ಸೌಲಭ್ಯದಿಂದ ಜಗತ್ತು ಸಣ್ಣದಾಗಿರುವುದು. ಪ್ರಪಂಚದ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಕ್ಷಣದಲ್ಲಿ ಹೋಗಬಹುದಾಗಿದೆ. ಹೀಗಾಗಿ ಈ ರೋಗಗಳು ಇಂದು ಸಾರ್ವತ್ರಿಕವಾಗುವ ಸಾಧ್ಯತೆ ಇದೆ. ಮಾರ್ಬರ್ಗ್ (ಜರ್ಮನಿ), ಎಬೋಲ (ಜೈರೆ, ಸುಡಾನ್), ಕ್ರಿಮಿಯ (ರಶಿಯಾ), ಸೇಬಿಯ ಮಾಚುಪೋ, ಹಂಟಾ ಮತ್ತು ಕಾಂಗೋ ವೈರಸ್ ರೋಗಗಳು ರಕ್ತೋದ್ರೇಕ ಜ್ವರದ ಕೆಲವು ಪ್ರಮುಖ ಉದಾಹರಣೆಗಳು. ಬುದ್ಧಿ ಜೀವಿ ಮಾನವ ನಿಸರ್ಗದ ಗುಟ್ಟನ್ನು ರಟ್ಟಾಗಿಸುತ್ತ ಸವಾಲಾಗಿದ್ದ ರೋಗಗಳ ವಿರುದ್ಧ ಸಮರ ಸಾರಿ ವಿಜಯ ಸಾಧಿಸಿದ್ದೇನೆಂದು ಹೆಮ್ಮೆಯಿಂದ ಬೀಗುವ ಹೊತ್ತಿಗೆ ಪ್ಲೇಗ್ ಬಂತು. ಇತಿಹಾಸ ಮರುಕಳಿಸಿತು. ಈಗ ಎಬೋಲ ಮರುಕಳಿಸಿದೆ. ಜಗದ ಗಂಡೆದೆಗಳ ಗುಂಡಿಗೆಗಳನ್ನೇ ಗಡಗಡ ನಡುಗಿಸಿದೆ.

**ಮರುಕಳಿಸಿದ ಮಾರಿ**

೧೯೯೫ರ ಮಾರ್ಚ್ ೨೫ರಂದು ವ್ಯಕ್ತಿಯೊಬ್ಬ ಕಿಕ್ವಿಟ್ ಸರಕಾರಿ ಆಸ್ಪತ್ರೆಗೆ ಬಂದ, ದಾಖಲಾದ, ವೈದ್ಯರಿಗೆ ದಿಗಿಲು ಹಿಡಿಸಿದ. ರೋಗ ಪತ್ತೆಯಾಗುವ ಮೊದಲು ಈ ಲೋಕದ ಯಾತ್ರೆ ಮುಗಿಸಿದ. ಈ ರೋಗಿ ಸದ್ದಿಲ್ಲದೆ ಸತ್ತುಹೋದ; ಎಲ್ಲೂ ಸುದ್ದಿಯಾಗಲಿಲ್ಲ. ವಾರ ಕಳೆಯಿತು. ಆಸ್ಪತ್ರೆಯಲ್ಲಿ ರೋಗಿಯ ರಕ್ತ ಪರೀಕ್ಷೆ ಮಾಡಿದ ಪ್ರಯೋಗಾಲಯದ ಸಿಬ್ಬಂದಿ ಸುಸ್ತಿನಿಂದ ಹಾಸಿಗೆ ಹಿಡಿದ. ಜ್ವರದಿಂದ ಬಳಲಿದ, ವೈದ್ಯರು ಚಿಕಿತ್ಸೆ ನೀಡಿದರು. ಹೊಟ್ಟೆ ನಗಾರಿ ಆಯಿತು. ವಿಷಮಜ್ವರದಿಂದ ಕರುಳಲ್ಲಿ ಕಿಂಡಿ ಬಿದ್ದು ಹೀಗಾಗಿರಬೇಕೆಂದು ವೈದ್ಯರು ತರ್ಕಿಸಿದರು. ಶಸ್ತ್ರಚಿಕಿತ್ಸೆ ಮಾಡಿದರು. ಪ್ರಯೋಜನವಾಗಲಿಲ್ಲ. ಮತ್ತೆ ಶಸ್ತ್ರಚಿಕಿತ್ಸೆ ಮಾಡಲು ರೋಗಿಯ ಹೊಟ್ಟೆ ಹರಿದರು, ದಿಗ್ಭ್ರಮೆಗೊಂಡರು...

ಜೀವಂತ ಹೆಣವಾಗಿದ್ದ ರೋಗಿಯ ಪ್ರತಿ ಅಂಗದಿಂದಲೂ ಕಪ್ಪು ದ್ರವ ಒಸರುತ್ತಿತ್ತು. ವೈದ್ಯರು ನಿಸ್ಸಹಾಯಕರಾದರು. ರೋಗಿಯ ಪ್ರಾಣಪಕ್ಷಿ ಹಾರಿಹೋಯಿತು. ಪತ್ರಿಕೆಗಳಿಗೆಲ್ಲ ಹೊಸ ಸುದ್ದಿಯಾಯಿತು. ವಾರದ ನಂತರ ಇವನನ್ನು ತಪಾಸು ಮಾಡಿದ ವೈದ್ಯರು, ವೈದ್ಯರಿಗೆ ನೆರವು ನೀಡಿದ ನರ್ಸ್, ಶಸ್ತ್ರಚಿಕಿತ್ಸೆಗಾಗಿ ಅನಸ್ತೇಸಿಯಾ ಕೊಟ್ಟವರು, ಶಸ್ತ್ರಚಿಕಿತ್ಸೆಗೆ ಸಹಾಯ ಮಾಡಿದ ದಾದಿಯರು, ಪತ್ತೆಯಾಗದ ಇದೇ ಕಾಯಿಲೆಗೆ ತುತ್ತಾಗಿ ಸತ್ತಾಗ ಜೈರೆಯ ವೈದ್ಯಕೀಯ ಕ್ಷೇತ್ರ ತಬ್ಬಿಬ್ಬಾಯಿತು. ಈ ದುರ್ಘಟನೆ ಅಂತರರಾಷ್ಟ್ರೀಯ ವೈದ್ಯಕೀಯ ಮಹಾಮಂಡಳಿಯ ಗಮನ ಸೆಳೆಯಿತು.

ಮೇ ೫ರಂದು ಆಸ್ಪತ್ರೆಯ ಸಿಬ್ಬಂದಿಯನ್ನು ಬಲಿ ತೆಗೆದುಕೊಂಡ ಈ ಕಾಯಿಲೆಯ ರಹಸ್ಯ ಭೇದಿಸಲು ಡಾ॥ ಮುಯೆಂಬೆ ನೇತೃತ್ವದ ಒಂದು ತಂಡ ಕಿಕ್ವಿಟ್‌ಗೆ ಬಂದಿಳಿಯಿತು. ಆ ಹೊತ್ತಿಗೆ ಅಳಿದುಳಿದಿದ್ದ ಸಿಬ್ಬಂದಿ ಆಸ್ಪತ್ರೆಯನ್ನು ತೊರೆದು ಹೊರಟುಹೋಗಿದ್ದರು. ಜೊತೆಗೆ ಪತ್ತೆಯಾಗದ ಈ ಕಾಯಿಲೆಯ ರೋಗಾಣುಗಳನ್ನು ಹೊತ್ತೊಯ್ದಿದ್ದರು. ಡಾ॥ ಮುಯೆಂಬೆ ವಿಷಯ ಸಂಗ್ರಹಿಸಿದರು; ವಿಶ್ಲೇಷಿಸಿದರು. ವಿಮರ್ಶಿಸಿ ನಿರ್ಧಾರಕ್ಕೆ ಬಂದರು. ಜೈರೆಯಲ್ಲಿ ಗುಲ್ಲೆಬ್ಬಿಸಿರುವ ಕಾಯಿಲೆ ಹೊಸದೇನೂ ಅಲ್ಲ, ಅದು ಹಿಂದೆ ಹಾವಳಿ ಎಬ್ಬಿಸಿ, ನಿರ್ನಾಮವಾಗಿದೆಯೆಂದು ನಂಬಲಾಗಿದ್ದ ಎಬೋಲ ಎಂದು ಜಾಗತಿಕ ಆರೋಗ್ಯ ಸಂಸ್ಥೆಗೆ ವರದಿ ಒಪ್ಪಿಸಿದರು.

ಡಾ॥ ಮುಯೆಂಬೆ ವರದಿಯ ಮೇರೆಗೆ ಜಾಗತಿಕ ಆರೋಗ್ಯ ಸಂಸ್ಥೆ, ಜೈರೆಯ ಸಾರ್ವಜನಿಕ ಆರೋಗ್ಯ ಸಚಿವಾಲಯ, ದಕ್ಷಿಣ ಆಫ್ರಿಕಾದ ರಾಷ್ಟ್ರೀಯ ರೋಗಾಣು ಪತ್ತೆ ಸಂಸ್ಥೆ, ಪ್ಯಾರಿಸ್‌ನ ಲೂಯಿ ಪಾಶ್ಚರ್ ಸಂಸ್ಥೆ ಮೊದಲಾದ ಸಂಘಟನೆಗಳಲ್ಲದೆ, ಗಡಿಭೇದವಿಲ್ಲದ ಸಮಾಜ ಸೇವಾಸಕ್ತ ವೈದ್ಯರನ್ನೊಳಗೊಂಡ ತಂಡ ರೋಗ ಪ್ರತಿಬಂಧಕೋಪಾಯಗಳನ್ನು ಅನುಷ್ಠಾನಕ್ಕೆ ತರಲು, ರೋಗಿಗಳಿಗೆ ಚಿಕಿತ್ಸೆ ನೀಡಲು, ಜನರಿಗೆ ರೋಗದ ಬಗ್ಗೆ ತಿಳಿಹೇಳಲು ಬಂದರು.

**ಇತಿಹಾಸ**

೧೯೬೭ರಲ್ಲಿ ಜರ್ಮನಿಯ ಮಾರ್ಬರ್ಗ್‌ನಲ್ಲಿ ಹೊಸ ಕಾಯಿಲೆಯೊಂದು ಕಾಣಿಸಿತು. 'ಮಾರ್ಬರ್ಗ್ ವೈರಸ್' ಎಂದು ನಾಮಕರಣ ಪಡೆಯಿತು. ೧೯೭೬ರಲ್ಲಿ ಹೆಚ್ಚು ಕಡಿಮೆ ಈ ರೋಗದ ಲಕ್ಷಣಗಳನ್ನೇ ಹೊಂದಿದ ರೋಗವೊಂದು ಸುಡಾನ್ ಮತ್ತು ಜೈರೆಯಲ್ಲಿ ಸ್ಫೋಟಗೊಂಡಿತು. ಇದಕ್ಕೂ ವೈರಸ್‌ವೊಂದು ಕಾರಣವಾಗಿತ್ತು. ಇದು ನೋಡಲು 'ಮಾರ್ಬರ್ಗ್ ವೈರಸ್'ನ್ನೇ ಹೋಲುತ್ತಿತ್ತು. ರೋಗ ಕಾಣಿಸಿಕೊಂಡ ಪ್ರದೇಶ ಎಬೋಲ ನದಿಯ ದಡದ ಊರುಗಳಲ್ಲಾಗಿತ್ತು. ಹೀಗಾಗಿ ವಿಜ್ಞಾನಿಗಳು ಇದಕ್ಕೆ 'ಎಬೋಲ ವೈರಸ್' ಎಂದು ಹೆಸರಿಟ್ಟರು.

ಹಾಗೆ ನೋಡಿದರೆ ಎಬೋಲ ತನ್ನ ಇರುವಿಕೆಯ ಸುಳಿವನ್ನು ೧೯೭೨ರಲ್ಲಿಯೇ ನೀಡಿತ್ತು. ಆ ವರ್ಷ ವಿದ್ಯಾರ್ಥಿಯೊಬ್ಬರು ಜ್ವರದಿಂದ ಮಿಶನರಿ ಆಸ್ಪತ್ರೆಗೆ ದಾಖಲಾಗಿದ್ದರು. 'ಹಳದಿ ಜ್ವರ' ಎಂದೇ ವೈದ್ಯರು ಚಿಕಿತ್ಸೆ ನೀಡಿದರು; ಫಲಕಾರಿಯಾಗಲಿಲ್ಲ. ಮೈತುಂಬ ಬೊಬ್ಬೆಗಳೆದ್ದು, ರಕ್ತಸ್ರಾವವಾಗಿ ರೋಗಿ ಸಾವನ್ನಪ್ಪಿದ. ವೈದ್ಯರು ಕುತೂಹಲಕ್ಕಾಗಿ ಮರಣೋತ್ತರ ಪರೀಕ್ಷೆ ಮಾಡಿದರು. ಕಂಡ ಬದಲಾವಣೆಗಳನ್ನೆಲ್ಲ ದಾಖಲಿಸಿದರು. ಅವೆಲ್ಲ ಈಗಿನ ಎಬೋಲ ರೋಗದಲ್ಲಿಯ ಬದಲಾವಣೆಗಳಿಗೆ ಹೋಲಿಕೆ ಪಡೆದಿರುವುದರಿಂದಾಗಿ, ವಿಜ್ಞಾನಿಗಳು ಎಬೋಲ ೧೯೭೨ರಲ್ಲಿಯೇ ಇತ್ತೆಂದು ಒಪ್ಪಿದ್ದಾರೆ.

೧೯೭೬ರಲ್ಲಿ ೫೦೦ಕ್ಕೂ ಹೆಚ್ಚು ರೋಗಿಗಳು ಅಧಿಕೃತವಾಗಿ ದಾಖಲಾಗಿದ್ದರು. ಸಾವಿನ ಪ್ರಮಾಣ ಶೇ. ೭೦. ಮನುಕುಲಕ್ಕೆ ಅತ್ಯಂತ ಮಾರಕವಾಗಿರುವ ರೇಬಿಸ್ ಅಗ್ರಸ್ಥಾನದಲ್ಲಿದ್ದರೆ ನಂತರದ ಸ್ಥಾನವನ್ನು ಎಬೋಲ ಪಡೆದಿದೆ. ಆದರೆ, ಇತ್ತೀಚೆಗೆ ಪತ್ರಿಕೆಗಳಲ್ಲಿ ಎಬೋಲ ಏಡ್ಸ್‌ಗಿಂತ ಕ್ರೂರಿ, ಏಡ್ಸ್‌ಗಿಂತ ಭಯಂಕರವಾದ ಕಾಯಿಲೆ ಎಂದು ದಾಖಲಾಗಿದೆ. ಇವೆಲ್ಲಾ ಉತ್ಪ್ರೇಕ್ಷಿತ ಬರವಣಿಗೆಗಳಷ್ಟೇ.

**ರೋಗಕಾರಕ**

ಎಬೋಲ ರೋಗಕಾರಕವಾದ ಒಂದು ವೈರಸ್. ಇದು 'ಫಿಲೊವೈರಿಡಿಯೆ' ಕುಟುಂಬಕ್ಕೆ ಸೇರಿದ ರಾಬ್ಡೊವೈರಸ್ ಸಮೂಹದ ಸದಸ್ಯ. ೬೦ ಡಿಗ್ರಿ ಸೆಂ. ಉಷ್ಣತೆಯಲ್ಲಿ ಒಂದು ತಾಸಿನವರೆಗೆ ಕಾಸಿದಾಗ ವೈರಸ್ ತನ್ನ ಸೋಂಕು ಗುಣವನ್ನು ಕಳೆದುಕೊಳ್ಳುವುದು. ಹೆಚ್ಚು ಆಮ್ಲೀಯ ದ್ರಾವಣದಲ್ಲಿ ಈಥರ್‌ನಲ್ಲಿ ಅದ್ದಿದಾಗಲೂ ಇದು ನಾಶವಾಗುವುದು.

**ಪಿಡುಗು ಶಾಸ್ತ್ರ**

ಸೋಂಕಿನ ಮೂಲ ಇನ್ನೂ ನಿಗೂಢವಾಗಿಯೇ ಇದೆ. ಜರ್ಮನಿಯ ಮಾರ್ಬರ್ಗ್‌ದ ಸ್ಫೋಟಕ್ಕೆ ಆಫ್ರಿಕಾದಿಂದ ತರಿಸಿಕೊಂಡಿದ್ದ ಹಸಿರು ಕಪಿಗಳೇ ಕಾರಣವೆಂಬುದು ಸ್ಪಷ್ಟವಾಗಿದೆ. ಲಸಿಕೆ ತಯಾರಿಕೆಗಾಗಿ ಈ ಕಪಿಗಳನ್ನು ತರಿಸಿದ್ದರು. ಅಲ್ಲಿಂದ ಬರುವಾಗ ಅವುಗಳಿಗೆ ಸೋಂಕು ತಗುಲಿತ್ತು. ಹೀಗಾಗಿ ಪ್ರಯೋಗಶಾಲೆಯಲ್ಲಿ ಕಾರ್ಯ ನಿರ್ವಹಿಸುವವರಿಗೆ ಇದರ ಉಡುಗೊರೆ ದೊರೆತಿತ್ತು. ಈಗ ರೋಗ ಮಂಗಗಳಿಗೆಲ್ಲಾ ಮಾರಣಾಂತಿಕವಾಗಿತ್ತು.

# ಆಕಾಶ ಹರಾಜಾಗಿದೆ

ಮುವತ್ತು ಮೂರು ಕೋಟಿ ದೇವರು
ದುಪ್ಪಟ್ಟು ದೂತರು
ಒಂದು, ಒಂದೇ ಒಂದು ಭೂಮಿಯ
ಹಂಚದೆ ಹೋದರು

ಅನ್ನ ಉಣ್ಣುತ್ತಿರಲ್ಲಿಲ್ಲ ದೇವರು
ಹೊಲ ಗೆಯ್ಯುತ್ತಿರಲಿಲ್ಲ ದೂತರು
ಇವರ ನೆಚ್ಚಿದವರಿಗೆ ಭೂಮಿ ಚೂರಲ್ಲ
ಸಿಗಲಿಲ್ಲ ರೊಟ್ಟಿ ಚೂರು

ಕಾಲ ಕಸವಾಯಿತು ಕಾಲ
ಜನಮನವಾಗಿ
ತಮಗೆ ತಾವೆ ಅರಿವಾಗಿ
ಆಳ ಅನುಭವದಿಂದ

ಮೇಲೆ ನೋಡಿದರೆ
ಅಲ್ಲೊಂದು ಫಲವತ್ತಾದ ಆಕಾಶ
ಹಂಚಿಕೊಳ್ಳಬಹುದೆ
ಆಕಾಶವನ್ನು ?



ಜನಕ್ಕೆ ಜನ ಜನವಾಗುತ್ತ
ಜನರೆ ಏಣಿಯಾಗುತ್ತ
ಉಳುಮೆಗಣಿಯಾಗುತ್ತ
ಮೇಲೆ ಮೇಲಕ್ಕೆ ಚಿಗುರೊಡೆಯುತ್ತ

ಆಕಾಶಕ್ಕೆ ಕೈಚಾಚುತ್ತಿದ್ದರೆ,
ಕಣ್ಣು ಉಂಡದ್ದೇನು
ಉರಿಪೈರು ಅಣುಗಾಳು
ಅಲ್ಲಿಗಾಗಲೇ ದಾಳಿ

ಅನಂತ ಆಕಾಶಕ್ಕೆ
ಬರಸಿಡಿಲು ಬೇಲಿ
ಆಕಾಶ ಹರಾಜಾಗಿದೆ
ಯಾರು ಕೂಗಿದವರು

ಭೂಮಿ ಕದ್ದವರು
ಸೂರ್ಯ ಚಂದ್ರಾದಿಗಳು
ಕಳ್ಳಕಾಕರ ಆಳು

**ಕೃಷ್ಣಮೂರ್ತಿ ಬಿಳಿಗೆರೆ**
ಬಿಳಿಗೆರೆ - ೫೭೨ ೧೧೪, ತಿಪಟೂರು.

ರೋಗದ ನಿಶ್ಚಿತ ವೈರಸ್ ಪ್ರತಿಕಾಯಗಳು ಅವುಗಳಲ್ಲಿ ಪತ್ತೆಯಾಗಲಿಲ್ಲವಾದ್ದರಿಂದ ಮಂಗಗಳೂ ಈ ಸೋಂಕಿನ ಮೂಲಗಳಾಗಲಿಕ್ಕಿಲ್ಲ ಎಂದು ವಿಜ್ಞಾನಿಗಳು ತರ್ಕಿಸಿದರು. ಸುಡಾನ್ ಮತ್ತು ಜೈರೆಗಳಲ್ಲಿ ವಿಜ್ಞಾನಿಗಳು ಎಲ್ಲ ಕಶೇರುಕಗಳಲ್ಲಿ ಆಳವಾದ ಅಧ್ಯಯನ ಮಾಡಿದ್ದರೂ ಎಬೊಲ ವೈರಸ್ ಮೂಲವನ್ನು ಪತ್ತೆ ಹಚ್ಚುವಲ್ಲಿ ವಿಫಲರಾಗಿದ್ದಾರೆ. ಏಡ್ಸ್‌ನಂತಹ ಮಾರಕ ಕಾಯಿಲೆ ಹುಟ್ಟಿದ ನಾಡಿನಲ್ಲೇ ಎಬೊಲ ಉಗಮವಾಗಿರುವುದು ವಿಜ್ಞಾನಿಗಳ ನಿದ್ದೆಗೆ ಭಂಗ ತಂದಿದೆ. ಅವರನ್ನು ಹಗಲು ರಾತ್ರಿ ಚಿಂತನೆಗೆ ಹಚ್ಚಿದೆ.

**ರೋಗ ಪ್ರಸಾರ**

ಎಬೊಲ ವೈರಸ್‌ಗಳ ನೈಸರ್ಗಿಕ ಸಂಗ್ರಹಾಗಾರ ಏನೆಂದು ತಿಳಿಯದು. ಅದರ ಮೂಲ ಬಹುಶಃ ಮೂಷಕಗಳಿರಬೇಕೆಂದು ಭಾವಿಸಲಾಗಿದೆ. ಒಂದೆಡೆ ಈ ರೋಗ ನೆಲೆಯೂರಿದರೆ ಅದು ಹರಡುವುದು ಸುಲಭ. ಅದು ಒಬ್ಬರಿಂದ ಇನ್ನೊಬ್ಬರಿಗೆ ಹೇಗೆ ಹರಡುತ್ತದೆಂಬುದೂ ಅಸ್ಪಷ್ಟ. ಆದರೂ ರೋಗಿಷ್ಠ ವ್ಯಕ್ತಿಗಳ ಸಾಮೀಪ್ಯ, ಅವರ ದೇಹದ ಒಸರಿಕೆ, ದೇಹದ್ರವ ಈ ಸೋಂಕನ್ನು ತಗುಲಿಸಬಲ್ಲದು. ರೋಗಿಗಳಿಗೆ ಇಂಜೆಕ್ಷನ್ ಕೊಡಲು ಬಳಸಿದ ಸೂಜಿಗಳನ್ನು, ಶಸ್ತ್ರಚಿಕಿತ್ಸೆಗೆ ಬಳಸಿದ ಉಪಕರಣಗಳನ್ನು ಜೀವಶುದ್ಧಿ ಮಾಡದೆ ಮತ್ತೊಬ್ಬರ ಚಿಕಿತ್ಸೆಯಲ್ಲಿ ಉಪಯೋಗಿಸಿದಲ್ಲಿ ಅವರಿಗೆ ಈ ರೋಗದ ಬಳುವಳಿ ಸಿಗಬಹುದಾಗಿದೆ.

**ರೋಗದ ಲಕ್ಷಣಗಳು**

ಈ ವೈರಸ್ ದೇಹ ಸೇರಿದ ೪-೧೬ ದಿನಗಳಲ್ಲಿ ರೋಗದ ಲಕ್ಷಣಗಳು ಪ್ರಕಟಗೊಳ್ಳುವುವು. ಇದಕ್ಕೆ ರೋಗದ ಅಧಿಶಯನ ಕಾಲ ಎಂದು ಕರೆಯುವರು. ನಂತರ ಅಲ್ಲಿ ಅಭಿವೃದ್ಧಿಗೊಂಡು ರೋಗಿಯ ದೇಹವನ್ನೇ ಹೈಜಾಕ್ ಮಾಡಿ ಆಸ್ಪತ್ರೆಗೆ ತರುವುವು.

ಭಾರೀ ಜ್ವರ, ಸಿಡಿಯುವಂಥ ತಲೆನೋವು, ಮೈಕೈ ನೋವು, ಕೀಲು ನೋವು, ಉಬ್ಬಳಿಕೆ, ಸುದೀರ್ಘ ಬಿಕ್ಕಳಿಕೆ ಈ ಕಾಯಿಲೆಯ ಪ್ರಾರಂಭಿಕ ಲಕ್ಷಣಗಳು. ಸುಸ್ತು, ಬಲಹೀನತೆ, ಅತಿಭೇದಿ, ಹೊಟ್ಟೆ ನೋವು, ವಾಂತಿ ಇವು ರೋಗಿಯ ಸುತ್ತ ಗಸ್ತು ಹೊಡೆಯುವವು. ರೋಗದ ಲಕ್ಷಣಗಳು ಕಾಣಿಸಿಕೊಂಡ ಐದನೇ ದಿನ ಮುಖದ ಮೇಲೆ ತುರಿಕೆ, ಕೆಂಪಡರಿದ ಗುಳ್ಳೆಗಳು ಗೋಚರಿಸಿ, ನಂತರ ದೇಹದ ಎಲ್ಲ ಕಡೆ ಹರಡುತ್ತವೆ. ರೋಗಿಯಲ್ಲಿ ಪಕ್ಕಡೆಯ ಪುಪ್ಪುಸ ಪೊರೆಯುರಿತದಿಂದ ಎದೆನೋವು ಮತ್ತು ಒಣಕೆಮ್ಮು ಕಾಣಿಸಿಕೊಳ್ಳುವುವು.

ಆರನೇ ದಿನ ಗುಳ್ಳೆಗಳು ಒಡೆದು ಸೋರಿದರೆ, ನವರಂಧ್ರಗಳಿಂದಲೂ ರಕ್ತಸ್ರಾವ ಪ್ರಾರಂಭವಾಗುತ್ತದೆ. ರಕ್ತಭೇದಿ, ರಕ್ತವಾಂತಿ, ರಕ್ತಕೆಮ್ಮು ರೋಗಿಯಲ್ಲಿ ಭಯ ಭೀತಿಯನ್ನು ಹುಟ್ಟಿಸುವುವು. ಮೂಗು ವಸಡುಗಳಿಂದ ರಕ್ತಸ್ರಾವ ಉಂಟಾಗುವುದು. ಗರ್ಭಿಣಿಯಲ್ಲಾಗುವ ರಕ್ತಸ್ರಾವ ಗರ್ಭಪಾತದಲ್ಲಿ ಅಂತ್ಯಗೊಳ್ಳುವುದು. ಅತಿಭೇದಿಯಿಂದಾಗುವ ನಿರ್ಜಲೀಕರಣ ಮತ್ತು ವಿಪರೀತ ರಕ್ತಸ್ರಾವದ ಪರಿಣಾಮದಿಂದ ರೋಗಿಯ ದೇಹ ತಲ್ಲಣಿಸಿ ಕುಸಿಯುವುದು. ಯಕೃತ್ ಮತ್ತು ಮೂತ್ರಪಿಂಡಗಳು ಕಾರ್ಯವಿಮುಖವಾಗುವುದರಿಂದ ರೋಗಿಗಳು ಸಾವಿನತ್ತ ಸದ್ದಿಲ್ಲದೆ ಹೆಜ್ಜೆ ಹಾಕುವರು.

**ಚಿಕಿತ್ಸೆ**

ಸದ್ಯಕ್ಕೆ ಎಬೊಲಕ್ಕೆ ಯಾವುದೇ ಔಷಧಿ ಇಲ್ಲದಿರುವುದರಿಂದ ರೋಗಿ ದಯನೀಯವಾಗಿ ಸಾಯುವುದನ್ನು ವೈದ್ಯರು, ಸಂಬಂಧಿಕರು ಅಸಹಾಯಕರಾಗಿ ನೋಡಬೇಕಾಗಿದೆ. ಎಂಥ ಹೃದಯ ಕಲಕುವ ಸನ್ನಿವೇಶ ! ಎಬೊಲ ವೈರಸ್ ತಡೆಗಟ್ಟುವ ಯಾವ ಲಸಿಕೆಯೂ ಇದುವರೆವಿಗೂ ಲಭ್ಯವಿಲ್ಲದಾಗಿದೆ. ಗುಣಲಕ್ಷಣಗಳಿಗನುಗುಣವಾಗಿ ಅವುಗಳನ್ನು ದೂರ ಮಾಡುವ ಚಿಕಿತ್ಸೆಯನ್ನು ನೀಡಬೇಕಾಗುತ್ತದೆ. ರೋಗಿಯನ್ನು ಪ್ರತ್ಯೇಕವಾಗಿರಿಸಿ ಸುಮಾರು ಮೂರು ವಾರಗಳ ಪರ್ಯಂತ ಶುಶ್ರೂಷೆ ಮಾಡಬೇಕು. ರೋಗಿಯ ಶುಶ್ರೂಷೆಯಲ್ಲಿ ನಿರತರಾದವರು ರೋಗ ರಕ್ಷಣೆಯ ಉಡುಪು, ಗವಸಣಿಕೆಯನ್ನು ಮತ್ತು ಮುಖವಾಡಗಳನ್ನು ಧರಿಸಬೇಕು.

ತಲೆನೋವು, ಜ್ವರದಂಥ ಸಾಮಾನ್ಯ ಕಾಯಿಲೆ ಬಂದವರನ್ನು ಜೈರೆಯ ಜನರೀಗ ಸಂಶಯದಿಂದ ನೋಡುತ್ತಿದ್ದಾರೆ. ಹೆದರಿದವರ ಮೇಲೆ ಕಪ್ಪೆಯನ್ನೆಸೆದಂತೆ ಭಿತ್ತಿಪತ್ರಗಳೂ ಕೂಡ 'ಕಾಯಿಲೆ ಇದ್ದವರನ್ನು ಮುಟ್ಟಬೇಡಿ', 'ಶವಗಳತ್ತ ಹೋಗಬೇಡಿ' ಎಂದು ಸಾರುತ್ತಿವೆ. ಧಾರ್ಮಿಕ ವಿಧಿ ವಿಧಾನಗಳೂ ವೈದ್ಯರನ್ನು ಕಂಗೆಡಿಸಿವೆಯೆಂದರೆ ತಪ್ಪಾಗಲಾರದು. ಎಬೊಲದಿಂದ ಸತ್ತವರನ್ನು ಸಾಮೂಹಿಕವಾಗಿ ಸುಡಲು ಕೆಲವು ಸಂಬಂಧಿಕರು ಒಪ್ಪುತ್ತಿಲ್ಲ. ಇನ್ನು ಕೆಲವೆಡೆ ಹೂಳಿದ ಹೆಣಗಳಿಂದ ರಕ್ತದ ಸ್ಯಾಂಪಲ್ ತೆಗೆದುಕೊಳ್ಳಲು ವೈದ್ಯರು ಜನರಿಂದ ಅಡ್ಡಿ ಎದುರಿಸಬೇಕಾಗಿದೆ. ತಪಾಸಣೆ ಮಾಡಿಕೊಂಡರೆ ಆಸ್ಪತ್ರೆ ಉಪಕರಣಗಳ ಮೂಲಕ ತಮಗೂ ಸೋಂಕು ತಗಲಬಹುದು ಎಂದು ಹೆದರಿದವರೆಷ್ಟೋ ? ತನ್ನಲ್ಲಿಗೆ ಎಬೊಲ ರೋಗಿ ಬಂದಾನೆಂದು ಆಸ್ಪತ್ರೆಗೆ ಹೋಗದೆ ಮನೆಯಲ್ಲಿಯೇ ಉಳಿದ ವೈದ್ಯರೆಷ್ಟೋ ? ಒಟ್ಟಿನಲ್ಲಿ ಎಬೊಲ ಯಾರು ಯಾರನ್ನೂ ನಂಬದಂಥ ಭಯಾನಕ ಪರಿಸ್ಥಿತಿಯನ್ನು ಸೃಷ್ಟಿಸಿದೆ.

**ಡಾ|| ಕರವೀರಪ್ರಭು ಕ್ಯಾಲಕೊಂಡ**
ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ, ಬಾದಾಮಿ - ೫೮೭ ೨೦೧ ಬಾಗಲಕೋಟೆ ಜಿಲ್ಲೆ

# ಎರಡು ಮಹಾನ್ ಭಾರತೀಯ ಪ್ರತಿಭೆಗಳು

**ಡಾ|| ಎಂ. ಎಸ್. ಎಸ್. ಮೂರ್ತಿ**

''ಬಹುಶಃ ಡಾಕ್ಟರ್ ಯಲ್ಲಾಪ್ರಗಡ ಸುಬ್ಬರಾವ್ ಅವರ ಹೆಸರನ್ನು ನೀವೆಂದೂ ಕೇಳಿರಲಾರಿರಿ. ಆದರೆ, ಅಂಥವರೊಬ್ಬರು ಇದ್ದುದರಿಂದಲೇ ಇಂದು ನೀವೆಲ್ಲಾ ಬದುಕಿ ಆರೋಗ್ಯವಂತರಾಗಿರುವುದು. ಹಾಗೂ ಅವರು ಇದ್ದುದರಿಂದಲೇ ನೀವೆಲ್ಲಾ ಇನ್ನೂ ದೀರ್ಘಾಯುಷಿಗಳಾಗಿ ಬದುಕಿ ಉಳಿಯಬಹುದಾಗಿದೆ.''

''ಪ್ರಿನ್ಸ್‌ಟನ್ ಸಂಸ್ಥೆ ಒಂದು ಅಮೂಲ್ಯ ರತ್ನವನ್ನು ಕಳೆದುಕೊಂಡಿತು; ಭಾರತ ಒಬ್ಬ ಮೇಧಾವಿ ಪುತ್ರನನ್ನು ಕಳೆದುಕೊಂಡಿತು.''

ಮೇಲಿನ ಎರಡೂ ಹೇಳಿಕೆಗಳು ಇಪ್ಪತ್ತನೇ ಶತಮಾನದ ಇಬ್ಬರು ಖ್ಯಾತ ಭಾರತೀಯ ಸಂಜಾತ ವಿಜ್ಞಾನಿಗಳಿಗೆ ಅವರ ಸಂಗಾತಿಗಳು ಅರ್ಪಿಸಿದ ಶ್ರದ್ಧಾಂಜಲಿ. ಮೊದಲನೆಯವರು ಡಾ|| ಯಲ್ಲಾಪ್ರಗಡ ಸುಬ್ಬರಾವ್. ಎರಡನೆಯವರು ಪ್ರೊ|| ಹರಿಶ್‌ಚಂದ್ರ. ಒಬ್ಬರು ವೈದ್ಯ ವಿಜ್ಞಾನಿ. ಮತ್ತೊಬ್ಬರು ಖ್ಯಾತ ಗಣಿತಜ್ಞ. ಇಬ್ಬರು ದಿಗ್ಗಜಗಳೂ ಮೊಳೆತದ್ದು, ಚಿಗುರಿದ್ದು ಭಾರತದಲ್ಲಿ. ಆದರೆ ಅವರ ಪ್ರತಿಭೆ ಅರಳಿದ್ದು ದೂರದ ಅಮೇರಿಕದಲ್ಲಿ. ಇಬ್ಬರೂ ಭಾರತದ ಜನಸಾಮಾನ್ಯನಿಗೆ ಹೆಚ್ಚು ಕಡಿಮೆ ಅಪರಿಚಿತರೇ. ಅವರ ಬಾಲ್ಯ, ವಿದ್ಯಾಭ್ಯಾಸ, ವ್ಯಕ್ತಿತ್ವ, ಕಾರ್ಯಶೈಲಿ, ಜೀವನ ಶೈಲಿ, ಇವೆಲ್ಲದರಲ್ಲೂ ಅದೆಷ್ಟು ಭಿನ್ನತೆ; ಅದೆಷ್ಟು ಸಾಮ್ಯ!

ಆಂಧ್ರಪ್ರದೇಶದ ಪೂರ್ವ ಗೋದಾವರಿ ಜಿಲ್ಲೆಯ ಭೀಮಾವರಂನಲ್ಲಿ ಸುಬ್ಬರಾಯರು ಜನವರಿ ೧೨, ೧೮೯೫ರಂದು ಜನಿಸಿದರು. ತಂದೆ ಜಗನ್ನಾಥಂ ತಾಲ್ಲೂಕ್ ಕಛೇರಿಯ ಗುಮಾಸ್ತ. ತಾಯಿ ವೆಂಕಮ್ಮ. ಏಳು ಮಕ್ಕಳ ಆ ಸಂಸಾರಕ್ಕೆ ಬಡತನ ಎಂಬುದು ಎಂಟನೇ ಮಗುವಾಗಿತ್ತು!

ಅಕ್ಟೋಬರ್ ೧೧, ೧೯೨೩ರಂದು ಕಾನ್‌ಪುರದಲ್ಲಿ ಹರಿಶ್‌ಚಂದ್ರರ ಜನನ. ನಾಲ್ಕು ಮಕ್ಕಳ ಆ ಸಂಸಾರ ಸಾಕಷ್ಟು ಅನುಕೂಲವಾಗಿದ್ದಿತು. ತಂದೆ ಚಂದ್ರಕಿಶೋರ್ ವೃತ್ತಿಯಲ್ಲಿ ಸಿವಿಲ್ ಇಂಜಿನಿಯರ್. ತಾಯಿ ಸತ್ಯವತಿದೇವಿ.

ಎರಡೂ ಕುಟುಂಬಗಳಲ್ಲಿ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಆದ್ಯತೆ. ಸುಬ್ಬರಾಯರ ಅಜ್ಜ ತಮ್ಮ ಊರಿನಲ್ಲಿ ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲಗಳಿಲ್ಲವೆಂದು, ಶಾನುಭೋಗಿಕೆಯನ್ನು ತ್ಯಜಿಸಿ ಬೇರೊಂದು ಊರಿಗೆ ವಲಸೆ ಹೋದರು. ಹರಿಶ್‌ಚಂದ್ರರ ಅಜ್ಜ ರೈಲ್ವೆ ಇಲಾಖೆಯಲ್ಲಿ ಹಿರಿಯ ದರ್ಜೆ ಗುಮಾಸ್ತರು. ಮಗನನ್ನು (ಹರಿಶ್‌ಚಂದ್ರರ ತಂದೆ) ಇಂಜಿನಿಯರಿಂಗ್ ಕಾಲೇಜಿಗೆ ಸೇರಿಸಲು ದೊಡ್ಡ ಮೊಬಲಗಿನ ಹಣ ಬೇಕಾಗಿತ್ತು. ಒಳ್ಳೆ ವೃತ್ತಿಯಲ್ಲಿದ್ದರೂ, ಅಕಾಲ ನಿವೃತ್ತಿ ಪಡೆದು ಬಂದ ಹಣದಿಂದ ಮಗನ ವಿದ್ಯಾಭ್ಯಾಸಕ್ಕೆ ನೆರವಾದರು. ಅನಂತರ ಅದೇ ಕಛೇರಿಯಲ್ಲಿ ಕೆಳದರ್ಜೆಯ ಕೆಲಸಕ್ಕೆ ಸೇರಿದರು. ಹುದ್ದೆಯ ಹಿರಿತನಕ್ಕಿಂತ ಮಗನ ವಿದ್ಯಾಭ್ಯಾಸ ಮುಖ್ಯವಾಗಿತ್ತು. ಸುಬ್ಬರಾಯರ ತಾಯಿಯವರು ಒಡವೆಗಳನ್ನು ಮಾರಿ ಮಗನ ಮೆಟ್ರಿಕ್ ಪರೀಕ್ಷೆಗೆ ಹಣ ಒದಗಿಸಿದರು.

ಆದರೆ ವಿದ್ಯಾಭ್ಯಾಸದಲ್ಲಿ ಅವರಿಬ್ಬರ ನಡುವೆ ಅಷ್ಟೇ ಭಿನ್ನತೆ. ಬಾಲಕ ಸುಬ್ಬರಾಯನಿಗೆ ಪ್ರಾರಂಭದಲ್ಲಿ ವಿದ್ಯಾಭ್ಯಾಸದ ಬಗ್ಗೆ ಆಸಕ್ತಿಯೇ ಇರಲಿಲ್ಲ. ಬಡತನ ಮತ್ತು ತಾಯಿಯ ಕಟ್ಟುನಿಟ್ಟುಗಳಿಂದ ಬೇಸತ್ತು ೧೨ನೇ ವರ್ಷದಲ್ಲಿಯೇ ಮನೆಬಿಟ್ಟು ಓಡಿ ಹೋಗಿ, ಕಾಶಿಯಲ್ಲಿ ದೇವಸ್ಥಾನದ ಮುಂದೆ ಹೂ-ಹಣ್ಣು ಮಾರಿ ಜೀವನ ಮಾಡಬೇಕೆಂದು ಸನ್ನಾಹ ಮಾಡಿದ್ದ. ಮೆಟ್ರಿಕ್‌ನಲ್ಲಿ ಎರಡು ಬಾರಿ ಫೇಲಾದ. ಮುಂದೆ ಆತ ''ಶತಮಾನದ ಶ್ರೇಷ್ಠ ವಿಜ್ಞಾನಿ'' ಯಾಗಬಹುದೆಂಬ ಯಾವ ಕುರುಹೂ ಬಾಲ್ಯದಲ್ಲಿ ಇರಲಿಲ್ಲ.

ಹರಿಶ್‌ಚಂದ್ರರು ಬೆಳೆದ ವಾತಾವರಣ ಬೇರೆಯೇ ಆಗಿದ್ದಿತು. ತಂದೆಯವರು ಪದೇ ಪದೇ ಪ್ರವಾಸ ಹೋಗುತ್ತಿದ್ದುದರಿಂದ ಬಾಲ್ಯವೆಲ್ಲಾ ತಾತನ ಮನೆ (ತಾಯಿಯ ತಂದೆ)ಯಲ್ಲೇ ಕಳೆಯಿತು. ಮನೆಯಲ್ಲಿ ಪ್ರಚಲಿತವಿದ್ದ ಸಂಗೀತ, ಚಿತ್ರಕಲೆಗಳ ವಾತಾವರಣ ಹುಡುಗನ ಮೇಲೆ ಪ್ರಬಲವಾದ ಪರಿಣಾಮವನ್ನುಂಟುಮಾಡಿದುವು. ''ಬೆಳೆಯುವ ಸುಳಿ ಮೊಳಕೆಯಲ್ಲೇ'' ಎಂಬ ನಾಣ್ಣುಡಿ ಇಲ್ಲಿ ಹುಸಿಯಾಗಲಿಲ್ಲ. ಆತನಲ್ಲಿ ವಯಸ್ಸಿಗೆ ಮೀರಿದ ಪ್ರೌಢಿಮೆ ಕಾಣುತ್ತಿತ್ತು. ಶಾಲೆಯಲ್ಲಿ ಇತರ ವಿದ್ಯಾರ್ಥಿಗಳಿಗಿಂತಲೂ ಎರಡು ವರ್ಷ ಮುಂದಿದ್ದ. ಹದಿನಾಲ್ಕನೇ ವಯಸ್ಸಿಗೇ ಮೆಟ್ರಿಕ್ ಮುಗಿಸಿದ್ದ!

ಮೆಟ್ರಿಕ್ ಆದನಂತರ ಸುಬ್ಬರಾಯರು ಇಂಟರ್ ಮಿಡಿಯೆಟ್ (ಇಂದಿನ ಪಿ.ಯು.ಸಿ.) ಓದಲು ಮದ್ರಾಸಿನ ಪ್ರೆಸಿಡೆನ್ಸಿ ಕಾಲೇಜು ಸೇರಿದರು. ಆಗ ಅವರಿಗೆ ವಿದ್ಯಾಭ್ಯಾಸದಲ್ಲಿ ಸ್ವಲ್ಪ ಆಸಕ್ತಿ ತೋರಿತು. ಗಣಿತದಲ್ಲಿ ಉತ್ತಮ ಅಂಕಗಳನ್ನು ಪಡೆದು ಮೊದಲನೇ ಬಾರಿಗೇ ತೇರ್ಗಡೆಯಾದರು. ಮುಂದೆ ಸುಬ್ಬರಾಯರು ಗಣಿತವನ್ನೇ ಆಯ್ಕೆ ಮಾಡುತ್ತಾರೆಂದು ಅವರ ಸಹಪಾಠಿಗಳು, ಉಪಾಧ್ಯಾಯರು ನಂಬಿದ್ದರು. ಆದರೆ ಆದದ್ದು ಬೇರೆಯೇ. ಯುವ ಸುಬ್ಬರಾಯರ ಮನಸ್ಸು ಡೋಲಾಯಮಾನದಲ್ಲಿತ್ತು. ಸುತ್ತಲಿನ ಬಡತನ, ಅನಾರೋಗ್ಯ, ಸಾವು, ನೋವುಗಳನ್ನು ನೋಡಿ, ಅವರು ಎಲ್ಲವನ್ನೂ ತ್ಯಜಿಸಿ ಸನ್ಯಾಸಿಯಾಗಬೇಕೆಂದು ತೀರ್ಮಾನಿಸಿದರು. ಆದರೆ ಅದಕ್ಕೆ ತಾಯಿಯ ಅನುಮತಿ ಅವಶ್ಯಕವಿದ್ದು, ಅದು ದೊರೆಯಲಿಲ್ಲ. ಆಗ ರಾಮಕೃಷ್ಣ ಆಶ್ರಮದ ಸ್ವಾಮೀಜಿಯವರ ಸಲಹೆಯಂತೆ ಜನಸೇವೆ ಮಾಡಲು ವೈದ್ಯಕೀಯ ವೃತ್ತಿಯನ್ನು ಅವಲಂಬಿಸಬೇಕೆಂದು ನಿರ್ಧರಿಸಿ, ಮದ್ರಾಸ್ ವೈದ್ಯಕೀಯ ಕಾಲೇಜು ಸೇರಿದರು. ಅಂತಿಮ ಪರೀಕ್ಷೆಯಲ್ಲಿ ಎಂ.ಬಿ.ಬಿ.ಎಸ್. ಸರ್ಜರಿಯ ವಿಭಾಗದಲ್ಲಿ ಸಾಕಷ್ಟು ಅಂಕಗಳು ದೊರೆಯದೇ ಇದ್ದುದರಿಂದ ಅವರಿಗೆ ಎಂ.ಬಿ.ಬಿ.ಎಸ್. ಡಿಗ್ರಿ ಲಭ್ಯವಾಗಲಿಲ್ಲ. ಬದಲಾಗಿ ಎಲ್.ಎಮ್.ಎಸ್. ಡಿಪ್ಲೊಮಾ ದೊರೆಯಿತು.

ಮೆಟ್ರಿಕ್ ಮುಗಿದ ನಂತರ ಹರಿಶ್‌ಚಂದ್ರ ಅಲಹಾಬಾದ್ ವಿಶ್ವವಿದ್ಯಾಲಯ ಸೇರಿ ೧೮ನೇ ವಯಸ್ಸಿಗೆ ಬಿ.ಎಸ್‌ಸಿ. ಮತ್ತು ೨೦ನೇ ವಯಸ್ಸಿಗೆ ಎಂ.ಎಸ್‌ಸಿ. (ಭೌತಶಾಸ್ತ್ರ) ಪದವಿ ಗಳಿಸಿದರು. ಕಾಲೇಜು ಸೇರಿದ ಪ್ರಾರಂಭದಲ್ಲಿ ಭೌತಶಾಸ್ತ್ರದಲ್ಲಿ ನೊಬೆಲ್ ಪ್ರಶಸ್ತಿ ಪಡೆದ ಪಿ.ಎ.ಎಂ.ಡಿರಾಕ್ ಬರೆದ 'ಕ್ವಾಂಟಮ್ ಮೆಕಾನಿಕ್ಸ್ ತತ್ವಗಳು' ಎಂಬ ಪುಸ್ತಕವನ್ನು ಓದಿ, ತಾವೂ ಸೈದ್ಧಾಂತಿಕ ಭೌತಶಾಸ್ತ್ರ ಕಲಿಯಬೇಕೆಂದು ನಿರ್ಧರಿಸಿದರು. ಅದಕ್ಕೆ ಪೂರಕವಾಗಿ ಅಂದಿನ ಖ್ಯಾತ ವಿಜ್ಞಾನಿಗಳ ಪರಿಚಯವೂ ಆಯಿತು. ಭೌತಶಾಸ್ತ್ರದ ಪ್ರಾಧ್ಯಾಪಕರಾಗಿದ್ದ ಕೆ. ಎಸ್. ಕೃಷ್ಣನ್, ಯುವ ಹರಿಶ್‌ಚಂದ್ರನ ಪ್ರತಿಭೆಯನ್ನು ಗುರುತಿಸಿ ಎಲ್ಲ ರೀತಿಯಲ್ಲೂ ಮಾರ್ಗದರ್ಶನ ಮಾಡಿದರು. ಅವರ ಎಂ.ಎಸ್‌ಸಿ. ಪರೀಕ್ಷೆಯಲ್ಲಿ ಒಂದು ಸ್ವಾರಸ್ಯಕರ ಸಂಗತಿ ನಡೆಯಿತು. ಅವರ ಪರೀಕ್ಷಕರು ಪ್ರೊ|| ಸಿ. ವಿ. ರಾಮನ್ ಆಗಿದ್ದರು! ಪ್ರಶ್ನಪತ್ರಿಕೆಯಲ್ಲಿ, ಭಾರತೀಯ ವಾದ್ಯ ಉಪಕರಣವಾದ ಮೃದಂಗದಲ್ಲಿ ಶಬ್ದ ತರಂಗಗಳು ಉಂಟಾಗುವ ಬಗ್ಗೆ ಪ್ರಶ್ನೆ ಇತ್ತು. ಅದನ್ನು ಹರಿಶ್‌ಚಂದ್ರ ಮಾತ್ರ ಬಿಡಿಸಿದುದನ್ನು ಕಂಡು ರಾಮನ್ ಬಹಳ ಮೆಚ್ಚಿದರು. ಹರಿಶ್‌ಚಂದ್ರ ಅದೊಂದೇ ಪ್ರಶ್ನೆಯನ್ನು ಉತ್ತರಿಸಿದ್ದರೂ, ರಾಮನ್ ನೂರಕ್ಕೆ ನೂರು ಅಂಕ ಕೊಟ್ಟರು! ''ಯಾರೂ ಉತ್ತರಿಸದ ಪ್ರಶ್ನೆಯನ್ನು ಈ ಹುಡುಗ ಉತ್ತರಿಸಿದ್ದಾನೆ - ಅದೂ ತನ್ನದೇ ಆದ ವಿಶಿಷ್ಟ ರೀತಿಯಲ್ಲಿ. ಅವನಿಗೆ ಸಾಕಷ್ಟು ಕಾಲಾವಕಾಶವಿದ್ದಿದ್ದರೆ ಎಲ್ಲ ಪ್ರಶ್ನೆಗಳನ್ನೂ ಉತ್ತರಿಸುತ್ತಿದ್ದನು. ಅದರ ಬಗ್ಗೆ ನನಗೆ ವಿಶ್ವಾಸವಿದೆ'' ಎಂದು ಅವರು ಅಭಿಪ್ರಾಯಪಟ್ಟಿದ್ದರು.

ವೈದ್ಯಕೀಯ ವೃತ್ತಿಯಿಂದ ಸುಖ ಜೀವನ ನಡೆಸಲು ಎಲ್.ಎಂ.ಎಸ್. ಡಿಪ್ಲೊಮಾ ಸಾಕಾಗಿದ್ದಿತು. ಆದರೆ ಸುಬ್ಬರಾಯರ ಜೀವನದಲ್ಲಿ ಜರುಗಿದ ಮತ್ತೊಂದು ಘಟನೆ ಅದಕ್ಕೆ ಬೇರೊಂದು ತಿರುವನ್ನು ಕೊಟ್ಟಿತು. ಉಷ್ಣವಲಯದ ಪ್ರದೇಶದಲ್ಲಿ ಜನರನ್ನು ಕಾಡುತ್ತಿದ್ದ ಅತಿಸಾರ ರೋಗ ಅವರ ಇಬ್ಬರು ಸಹೋದರರನ್ನು ಬಲಿ ತೆಗೆದುಕೊಂಡಿತು. ಆ ರೋಗಕ್ಕೆ ಸೂಕ್ತವಾದ ಮದ್ದು ಆಗ ಅಲೋಪತಿಯಲ್ಲಿ ಇರಲಿಲ್ಲ. ಅದರಿಂದ ಬಹಳ ನೊಂದ ಸುಬ್ಬರಾಯರು ಬಡಜನರನ್ನು ಕಾಡುತ್ತಿದ್ದ ಅತಿಸಾರ ಮತ್ತು ಇತರ ರೋಗಗಳ ಬಗ್ಗೆ ಸಂಶೋಧನೆ ನಡೆಸಿ ಪರಿಣಾಮಕಾರಿ ಮದ್ದನ್ನು ಕಂಡುಹಿಡಿಯಬೇಕೆಂದು ನಿರ್ಧರಿಸಿದರು. ಅದಕ್ಕಾಗಿ ಅಮೆರಿಕಾದಲ್ಲಿ ಬಾಸ್ಟನ್ ನಗರದ ಹಾರ್ವರ್ಡ್ ಸ್ಕೂಲ್ ಆಫ್ ಟ್ರಾಪಿಕಲ್ ಮೆಡಿಸಿನ್ ಎಂಬ ಸಂಸ್ಥೆಗೆ ಹೋಗಲು ತೀರ್ಮಾನಿಸಿದರು. ಅದಕ್ಕೆ ಅವಕಾಶ ದೊರೆತರೂ, ಹಣದ ಅಭಾವದಿಂದ ಅಲ್ಲಿಗೇ ಆ ಆಸೆಯನ್ನು ಬದಿಗಿರಿಸಿ, ಮದ್ರಾಸಿನಲ್ಲಿ ಆಗ ತಾನೆ ತೆರೆದಿದ್ದ ಆಯುರ್ವೇದ ಕಾಲೇಜಿನಲ್ಲಿ ಬೋಧಕರಾಗಿ ನೇಮಕಗೊಂಡರು. ಮೂರು ವರ್ಷಗಳ ನಂತರ ಮಾವನವರ ಮತ್ತು ಇತರರ ಸಹಾಯದಿಂದ ಹಣ ದೊರೆತು, ೧೯೨೨ರಲ್ಲಿ ಸುಬ್ಬರಾಯರಿಗೆ ಬಾಸ್ಟನ್‌ಗೆ ಹೋಗಲು ಸಾಧ್ಯವಾಯಿತು.

ಹರಿಶ್‌ಚಂದ್ರರ ವಿದ್ಯಾಭ್ಯಾಸ ಮಾತ್ರ ತುಂಬಿದ ಗಂಗೆಯಂತೆ ತಡೆ ಇಲ್ಲದೆ ಅವಿಚ್ಛಿನ್ನವಾಗಿ ಹರಿಯುತ್ತಿತ್ತು. ಎಂ.ಎಸ್‌ಸಿ. ಮುಗಿದನಂತರ ಅವರು ಬೆಂಗಳೂರಿನ ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಅದೇ ತಾನೆ

ಕೇಂಬ್ರಿಜ್‌ನಿಂದ ವಾಪಸ್ಸಾಗಿದ್ದ ಪ್ರೊ|| ಹೋಮಿ ಭಾಭಾ ಅವರೊಡನೆ ಭೌತವಿಜ್ಞಾನದಲ್ಲಿ ಸಂಶೋಧನೆ ನಡೆಸಲು ಪ್ರಾರಂಭಿಸಿದರು. ಅದೇ ಕಾಲದಲ್ಲಿ ಪ್ರೊ|| ರಾಮನ್ ಸಂಸ್ಥೆಯ ನಿರ್ದೇಶಕರಾಗಿದ್ದರು. ಬೆಣ್ಣೆ ಜಾರಿ ರೊಟ್ಟಿಯ ಮೇಲೆ ಬಿದ್ದಿತ್ತು! ಅಲ್ಲಿ ಎರಡು ವರ್ಷಗಳ ಸಂಶೋಧನೆಯ ನಂತರ ಪ್ರೊ|| ಭಾಭಾ ಅವರ ಸಲಹೆಯ ಮೇರೆಗೆ, ಡಿರಾಕ್‌ರ ಮಾರ್ಗದರ್ಶನದಲ್ಲಿ ಪಿಹೆಚ್.ಡಿ. ಮಾಡಲು, ೧೯೪೫ರಲ್ಲಿ ಕೇಂಬ್ರಿಜ್‌ಗೆ ತೆರಳಲು ಅವಕಾಶ ದೊರಕಿ, ಅವರ ಕನಸು ನನಸಾಯಿತು.

ಸುಬ್ಬರಾಯರ ಜೊತೆ ಬಾಸ್ಟನ್‌ಗೆ ಅವರ ಬಡತನವೂ ಹೊರಟಿತ್ತು! ಅಲ್ಲಿ ತಲುಪಿದಾಗ, ಅವರಲ್ಲಿದ್ದುದ್ದು ಕೇವಲ ೧೦೦ ಡಾಲರ್‌ಗಳು. ಅದರಲ್ಲಿ ವಿದ್ಯಾಭ್ಯಾಸ, ವಸತಿ, ಊಟ, ಚಳಿ ಪ್ರದೇಶಕ್ಕೆ ಬೇಕಾಗುವ ಬೆಚ್ಚಗಿನ ಉಡುಪು ಇವನ್ನೆಲ್ಲಾ ನಿಭಾಯಿಸಲು ಅಸಾಧ್ಯವಾಗಿತ್ತು. ಹಾಗಾಗಿ ಜೀವನಕ್ಕೆ ಏನಾದರೂ ಮಾಡಲೇಬೇಕಾಗಿತ್ತು. ಅದಕ್ಕಾಗಿ ಅವರಿಗೆ ಲಭ್ಯವಾದದ್ದು ಆಸ್ಪತ್ರೆಯೊಂದರಲ್ಲಿ ರಾತ್ರಿ ಪಾಳಿಯ ಜಾಡಮಾಲಿ ಕೆಲಸ ! ಅದು ಕೀಳೆಂದು ಪರಿಗಣಿಸದೆ, ಶ್ರದ್ಧೆಯಿಂದ ಮಾಡಿ, ಬೆಳಗ್ಗೆ ಕಾಲೇಜಿಗೆ ಹೋಗುತ್ತಿದ್ದರು. ಜ್ಞಾನಾರ್ಜನೆಗಾಗಿ ದೂರದ ಭಾರತದಿಂದ ಬಂದು ಶ್ರಮಪಡುತ್ತಿದ್ದ ಸುಬ್ಬರಾಯರನ್ನು ಕಂಡು, ಅನಾಮಿಕ ಅಮೆರಿಕನ್ ಒಬ್ಬರಿಗೆ ಮನ ಕರಗಿ, ತಿಂಗಳಿಗೆ ೩೦ ಡಾಲರ್‌ಗಳು ಸಂದಾಯವಾಗುವಂತೆ ವ್ಯವಸ್ಥೆ ಮಾಡಿದ್ದರಂತೆ! ಎಂಟು ತಿಂಗಳ ಸತತ ಪ್ರಯತ್ನದಿಂದ ಅವರಿಗೆ ''ಡಿಪ್ಲೊಮಾ ಇನ್ ಟ್ರಾಪಿಕಲ್ ಮೆಡಿಸನ್'' ದೊರೆಯಿತು. ಅದಾದನಂತರ ವೈದ್ಯಕೀಯ ಸಂಶೋಧನೆ ಕ್ಷೇತ್ರದ ಬಾಗಿಲು ಸುಬ್ಬರಾಯರಿಗೆ ತೆರೆಯಿತು. ಪಿಹೆಚ್.ಡಿ. ಪದವಿಯೂ ದೊರೆಯಿತು.


ಡಾ|| ಯಲ್ಲಾಪ್ರಗಡ ಸುಬ್ಬರಾವ್

ಕೇಂಬ್ರಿಜ್ ಸೇರಿದ ಹರಿಶ್‌ಚಂದ್ರ ಎರಡು ವರ್ಷಗಳ ಸತತ ಪ್ರಯತ್ನದಿಂದ 'ಸ್ಪೆಷಲ್ ಥಿಯರಿ ಆಫ್ ರಿಲೆಟಿವಿಟಿ'ಗೆ ಸಂಬಂಧಿಸಿದ ಲಾರೆಂಟ್ ಗ್ರೂಪ್ ಎಂಬ ವಿಷಯದ ಮೇಲೆ ಅಧ್ಯಯನ ನಡೆಸಿ ೧೯೪೭ರಲ್ಲಿ ಡಾಕ್ಟರೇಟ್ ಪಡೆದರು. ಇದೇ ಸಮಯಕ್ಕೆ ಅವರಲ್ಲಿ ಒಂದು ಸೂಕ್ಷ್ಮ ಬದಲಾವಣೆ ಕಾಣಿಸಿಕೊಂಡು, ಕ್ರಮೇಣ ಹೆಮ್ಮರವಾಗಿ ಬೆಳೆದು ಅವರ ವೃತ್ತಿಜೀವನದ ಮಾರ್ಗವನ್ನೇ ಬದಲಿಸಿತು. ಇದುವರೆಗೂ ಹರಿಶ್‌ಚಂದ್ರ ಒಬ್ಬ ಭೌತಶಾಸ್ತ್ರ ವಿಜ್ಞಾನಿ ಎನಿಸಿಕೊಂಡಿದ್ದರು. ಆದರೆ ಅದು ಅವರಿಗೆ ಸಾಕಷ್ಟು ಪ್ರಚೋದನಕಾರಿ ಎನಿಸಿರಲಿಲ್ಲ. ಭೌತ ವಿಜ್ಞಾನ ಒಂದು ''ಪ್ರಯೋಗಸಿದ್ಧ ವಿಜ್ಞಾನ. ಅದರಲ್ಲಿ ತೀವ್ರತೆ ಇಲ್ಲ'' ಎಂಬ ಸಂಶಯ ಅವರನ್ನು ಕಾಡಲಾರಂಭಿಸಿತು. ಹಾಗಾಗಿ ಅವರ ಮನಸ್ಸು ಶುದ್ಧ ಗಣಿತದ ಕಡೆಗೆ ತಿರುಗಿತು. ಗಣಿತ ವಿಜ್ಞಾನಕ್ಕೆ ತಮ್ಮನ್ನು ಸಮರ್ಪಿಸಿಕೊಳ್ಳಲು ನಿರ್ಧರಿಸಿದರು. ಗಣಿತದಲ್ಲಿ ಪಾಂಡಿತ್ಯ ಪಡೆಯಲು ಅಮೆರಿಕದ ಹಾರ್‌ವರ್ಡ್ ವಿಶ್ವವಿದ್ಯಾ ಲಯದಿಂದ ಫೆಲೋಶಿಪ್ ದೊರೆಯಿತು. ಅನಂತರ ಕೊಲಂಬಿಯಾ ವಿಶ್ವವಿದ್ಯಾಲಯದಲ್ಲಿ ೧೯೫೦ರಲ್ಲಿ ಗಣಿತದ ಪ್ರಾಧ್ಯಾಪಕರಾಗಿ ಹುದ್ದೆಯೂ ಲಭ್ಯವಾಯಿತು. ಅಲ್ಲಿ ಹದಿಮೂರು ವರ್ಷಗಳು ಸೇವೆ ಸಲ್ಲಿಸಿದ ನಂತರ, ೧೯೬೩ರಲ್ಲಿ ಪ್ರಿನ್ಸ್‌ಟನ್‌ನ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್‌ಸ್ಡ್ ಸ್ಟಡಿ ಎಂಬ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿ ನೇಮಕರಾದರು. ಅವರ ಜೀವನದಲ್ಲಿ ಅದೊಂದು ಮುಖ್ಯ ಘಟಕ.

ಹಾರ್‌ವರ್ಡ್ ಮೆಡಿಕಲ್ ಸ್ಕೂಲಿನಲ್ಲಿ ಪ್ರಾಧ್ಯಾಪಕರಾಗಿದ್ದ ಪ್ರೊ|| ಸೈರಸ್ ಫಿಸ್ಕ್ ಅವರ ನಾಯಕತ್ವದಲ್ಲಿ ಸುಬ್ಬರಾಯರ ಸಂಶೋಧನಾ ಕಾರ್ಯ ಆರಂಭವಾಯಿತು. ಊತಕ, ರಕ್ತ, ಮೂತ್ರದಲ್ಲಿ ರಂಜಕದ ಮೊತ್ತವನ್ನು ಅಳೆಯುವುದು ರೋಗ ನಿದಾನದ ಒಂದು ಪದ್ಧತಿ. ಅದಕ್ಕಾಗಿ ಆಗ ಪ್ರಚಲಿತವಿದ್ದ ಕ್ರಮ ದಕ್ಷವಾಗಿರಲಿಲ್ಲ. ಹಾಗಾಗಿ ಒಂದು ಶೀಘ್ರ ಮತ್ತು ಸಂವೇದನಾಶೀಲ ಕ್ರಮದ ಅವಶ್ಯಕತೆ ಇತ್ತು. ನಾಲ್ಕು ತಿಂಗಳ ಸತತ ಪ್ರಯತ್ನದಿಂದ ಸುಬ್ಬರಾಯರು ೧, ೨, ೪ ಆಸಿಡ್ ಎಂಬ ರಾಸಾಯನಿಕ ಕಾರಕವನ್ನು ಕಂಡುಹಿಡಿದರು. ಅದು ರಕ್ತ, ಮೂತ್ರಗಳಲ್ಲಿರುವ ರಂಜಕದೊಡನೆ ಪ್ರಕ್ರಿಯಿಸಿ, ಐದೇ ನಿಮಿಷಗಳಲ್ಲಿ ನೀಲಿ ಬಣ್ಣವನ್ನು ಉತ್ಪತ್ತಿ ಮಾಡಲು ಶಕ್ಯವಾಗಿತ್ತು. ಕ್ಯಾಲರಿ ಮೀಟರ್ ಉಪಕರಣದಿಂದ ನೀಲಿ ಬಣ್ಣವನ್ನು ಅಳೆದು, ಅದರ ತೀವ್ರತೆಗೆ ಅನುಗುಣವಾಗಿ ರಂಜಕದ ಮೊತ್ತವನ್ನು ನಿರ್ಧರಿಸಲು ಸಾಧ್ಯವಾಗಿ ಅದು 'ಫಿಸ್ಕ್-ಸುಬ್ಬರಾವ್' ವಿಧಾನವೆಂದೇ ಪ್ರಸಿದ್ಧವಾಗಿ ಪ್ರಯೋಗಶಾಲೆಗಳಲ್ಲಿ ಒಂದು ಶಿಷ್ಟ ಸಾಧನವಾಗಿ ಜನಪ್ರಿಯವಾಯಿತು. ಆ ಸಂಶೋಧನೆಯಿಂದ ಸುಬ್ಬರಾಯರು ಒಮ್ಮಿಂದೊಮ್ಮೆಗೇ ಖ್ಯಾತರಾದರು. ಆರ್ಥಿಕ ಪರಿಸ್ಥಿತಿಯೂ ಉತ್ತಮವಾಯಿತು. ಅದಾದ ನಂತರ ಸ್ನಾಯು ಸಂಕುಚನ ಕ್ರಿಯೆಯ ಬಗ್ಗೆ ಮೂಲಭೂತ ಸಂಶೋಧನೆ ನಡೆಸಿದರು. ಅದುವರೆಗೆ ಸ್ನಾಯು ಸಂಕುಚನಕ್ಕೆ ಬೇಕಾಗುವ ಶಕ್ತಿಯ ಮೂಲ ಗ್ಲೈಕೋಜೆನ್ ಎಂಬ ಘಟಕದಲ್ಲಿ ಅಡಗಿದೆ ಎಂಬ ನಂಬಿಕೆ ಇತ್ತು. ಅದನ್ನು ಪ್ರತಿಪಾದಿಸಿದ ಇಬ್ಬರು ಬ್ರಿಟಿಷ್ ಮತ್ತು ಜರ್ಮನ್ ವಿಜ್ಞಾನಿಗಳಿಗೆ ೧೯೨೨ರಲ್ಲಿ ನೊಬೆಲ್ ಪಾರಿತೋಷಕವೂ ಸಂದಾಯವಾಗಿದ್ದಿತು. ಆದರೆ ಬೆಕ್ಕುಗಳ ಮೇಲೆ ಪ್ರಯೋಗ ನಡೆಸಿ, ಸ್ನಾಯು ಸಂಕುಚನದ ಶಕ್ತಿ ಮೂಲ ಗ್ಲೈಕೋಜೆನ್ ಅಲ್ಲವೆಂದೂ, ಅದು ತಾವೇ ಕಂಡುಹಿಡಿದ 'ಫಾಸ್‌ಫೋ ಕ್ರಿಯಾಟಿನ್' ಎಂಬ ಘಟಕದಲ್ಲಿ ಅಡಗಿದೆ ಎಂದೂ ತೋರಿಸಿಕೊಟ್ಟರು. ಹಾಗೆಯೇ ಮುಂದುವರಿದು, ಫಾಸ್‌ಫೋಕ್ರಿಯಾಟಿನ್ ವಿಘಟನೆಯಾದಾಗ, ಅಡೆನಿಸೋನ್ ಟ್ರೈಫಾಸ್‌ಫೇಟ್ (ಎ.ಟಿ.ಪಿ) ಎಂಬ ಹೊಸ ಘಟಕ ಉತ್ಪತ್ತಿಯಾಗುವುದನ್ನು ಗಮನಿಸಿ, ಅದೇ ಎಲ್ಲ ಜೀವ ಚೈತನ್ಯಕ್ಕೂ ಬೇಕಾದ ರಾಸಾಯನಿಕ ಶಕ್ತಿಯ ಅಂತಿಮ ಆಗರವೆಂದು ಪ್ರತಿಪಾದಿಸಿದರು. ಇಂದು ಜೀವ ವಿಜ್ಞಾನದಲ್ಲಿ ಎ.ಟಿ.ಪಿ.ಯ ಪಾತ್ರ ಡಿ.ಎನ್.ಎ. ಅಣುವಿನ ಪಾತ್ರದಷ್ಟೇ ಮಹತ್ವವಾದ್ದೆಂದರೆ ಅತಿಶಯೋಕ್ತಿಯಾಗದು. ಅದೇ ವೇಳೆಯಲ್ಲಿ ಬಹುಪಾಲು ಅಮೆರಿಕನ್ನರನ್ನು ಬಾಧಿಸುತ್ತಿದ್ದ ರೋಗಗಳಲ್ಲಿ ಪರ್ನಿಶಸ್ ಅನೀಮಿಯ ಒಂದಾಗಿತ್ತು. ರೋಗಿಗಳು ಒಂದು ರೀತಿಯ ರಕ್ತಹೀನತೆಯಿಂದ ನರಳುತ್ತಿದ್ದರು. ಸುಬ್ಬರಾಯರು ಆಂಟಿಪರ್ನಿಶಸ್ ಅನೀಮಿಯ ಘಟಕದ ಪರಿಶೋಧನೆಯಲ್ಲಿ ತೊಡಗಿದರು. ಪ್ರಾಣಿಗಳ ಯಕೃತ್ತನ್ನು ರಾಸಾಯನಿಕವಾಗಿ ಸಂಸ್ಕರಿಸಿ, ಅದರಿಂದ ಒಂದು ಘಟಕವನ್ನು ತಯಾರಿಸಿದರು. ಅದು ಪರ್ನಿಶಸ್ ಅನೀಮಿಯ ಅಷ್ಟೇ ಅಲ್ಲದೇ, 'ಪೆಲ್ಲಾಗ್ರಾ' ಎಂಬ ವ್ಯಾಧಿಗೂ ಮಾರಕ ಪರಿಣಾಮಕಾರಿಯಾಗಿದ್ದಿತು. ಆ ವೇಳೆಗೆ ಸುಬ್ಬರಾಯರ ವೃತ್ತಿ ಜೀವನದಲ್ಲಿ ಮತ್ತೊಂದು ಮಹತ್ವವಾದ ತಿರುವು ಉಂಟಾಯಿತು. ೧೯೩೩ರಲ್ಲಿ ಅಮೆರಿಕದ ಪರ್ಲ್ ರಿವರ್‌ನಲ್ಲಿದ್ದ 'ಲೆಡರ್ಲೇ' ಎಂಬ ಔಷಧ ತಯಾರಿಕೆಯ ಸಂಸ್ಥೆಯು ಜೀವಸತ್ವ ಮತ್ತು ಜೀವಿರೋಧಕಗಳನ್ನು ತಯಾರಿಸುವ ಒಂದು ಹೊಸ ವಿಭಾಗವನ್ನು ತೆರೆದು ಅದಕ್ಕೆ ಸುಬ್ಬರಾಯರನ್ನು ಮುಖ್ಯಸ್ಥರನ್ನಾಗಿ ನೇಮಕ ಮಾಡಿತು. ಸುಬ್ಬರಾಯರ ತಂಡವು ಪ್ಯಾಂಟೊ ತಿನೇಟ್, ಪಿರಿಡಾಕ್ಸಿನ್, ಥೈಯಮೀನ್ (ಬೆರಿಬೆರಿ ರೋಗಕ್ಕೆ ಚುಚ್ಚುಮದ್ದು), ರೈಬೊಫ್ಲೇವಿನ್ ಮುಂತಾದ ಜೀವಸತ್ವಗಳನ್ನು ಸರಳ ರೀತಿಯಲ್ಲಿ ತಯಾರಿಸಿ ಮಾರುಕಟ್ಟೆಗೆ ಬಿಡುಗಡೆ ಮಾಡಿತು. ಉಷ್ಣವಲಯದ ಅತಿಸಾರ ರೋಗಕ್ಕೆ ಮಾರಕವಾಗುವ 'ಫೊಲಿಕ್ ಆಸಿಡ್' ಎಂಬ ಘಟಕವನ್ನು ಯಕೃತ್ ರಸಗಳಿಂದ ಬೇರ್ಪಡಿಸಿದರು. ಫೊಲಿಕ್ ಆಸಿಡ್ ಇಂದು ಭಾರತವೂ ಸೇರಿದಂತೆ ಪ್ರಪಂಚಾದ್ಯಂತ ಸಹಸ್ರಾರು ರೋಗಿಗಳಿಗೆ ವರಪ್ರದಾನವಾಗಿದೆ. ಗರ್ಭಿಣಿ ಸ್ತ್ರೀಯರಿಗೆ ಅದು ಸಂಜೀವಿನಿಯಾಗಿದೆ. ಇದಾದನಂತರ ಅನೇಕ ವಿಧವಾದ ಕ್ಯಾನ್ಸರ್‌ಗಳಿಗೆ ಮಾರಕವಾಗುವ ಅಮೈನಾಪ್ಟರೀನ್ ಮತ್ತು ಮೆಥಾಟ್ರೆಕ್ಸೇಟ್ ಮದ್ದುಗಳನ್ನು ಕಂಡುಹಿಡಿದು ಕ್ಯಾನ್ಸರ್ ಕೆಮೊಥೆರಪಿ ಎಂಬ ಚಿಕಿತ್ಸಾ ವಿಧಾನಕ್ಕೆ ನಾಂದಿ ಹಾಡಿದರು. ಅವರ ಗಮನ ಸೆಳೆದ ಮತ್ತೊಂದು ರೋಗ 'ಆನೆ ಕಾಲು ರೋಗ' (ಫೈಲೇರಿಯಾಸಿಸ್). ಈ ರೋಗ ಬಂದರೆ ರೋಗಿಯ ವೃಷಣ ಚೀಲ, ಕಾಲು ಊದಿಕೊಂಡು ಆತ ನಡೆದಾಡುವುದೇ ತ್ರಾಸವಾಗುತ್ತದೆ. ಇಲಿ ಮತ್ತು ಇತರ ಪ್ರಾಣಿಗಳ ಮೇಲೆ ಪ್ರಯೋಗ ನಡೆಸಿ, ರೋಗಕ್ಕೆ ಕಾರಣವಾದ ಫೈಲೇರಿಯಾ ಕೀಟಗಳನ್ನು ಗುರುತಿಸಿ, 'ಹೆಟ್ರಜಾನ್' ಎಂಬ ಮದ್ದನ್ನು ತಯಾರಿಸಿದರು. ಆನೆಕಾಲು ರೋಗದಿಂದ ನರಳುತ್ತಿದ್ದ ಲಕ್ಷಾಂತರ ಮಂದಿ ಆ ರೋಗದಿಂದ ಮುಕ್ತರಾಗಲು ಸಾಧ್ಯವಾಯಿತು. ೧೯೫೫-೫೬ರಲ್ಲಿ ಭಾರತದಲ್ಲಿ ೬೦ ಲಕ್ಷ ಜನರಿಗೆ ಹೆಟ್ರಜಾನ್ ಮಾತ್ರೆಗಳನ್ನು ಕೊಡಲಾಯಿತು. ಇಂದು ಕೂಡ ಆನೆಕಾಲು ರೋಗಕ್ಕೆ ಹೆಟ್ರಜಾನ್ ಏಕೈಕ ಮದ್ದಾಗಿದೆ. ಅನಂತರ ಸುಬ್ಬರಾಯರು ಜೀವರೋಧಕ ಕಡೆ ಗಮನ ಹರಿಸಿದರು. ಅವರ ತಂಡವು ಬ್ಯಾಕ್ಟೀರಿಯಾ ಮತ್ತು ಬೂಸ್ಟ್‌ಗಳ ಮೇಲೆ ಪ್ರಯೋಗಗಳನ್ನು ನಡೆಸಿ 'ಅರಿಯೋಮೈಸಿನ್' ಎಂಬ ಜೀವಿರೋಧಕವನ್ನು ತಯಾರಿಸಿತು. ಟೆಟ್ರಾಸೈಕ್ಲಿನ್ ಮೂಲದ ಅರಿಯಾಮೈಸಿನ್ ಟೈಫಾಯಿಡ್, ಪ್ಯಾರಾಟೈಫಾಯಿಡ್, ಎರಿಸ್‌ಪೆಲಸಾ, ಕ್ಯೂಜ್ವರ, ಪ್ಲೇಗ್, ಈಚೆಗೆ ಬೆಂಗಳೂರಿನಲ್ಲಿ ಕಾಣಿಸಿಕೊಂಡ ರಿಕೆಟ್ಸಿಯಲ್ ಮುಂತಾದ ಸೋಂಕು ರೋಗಗಳ ಚಿಕಿತ್ಸೆಯಲ್ಲಿ ಪರಿಣಾಮಕಾರಿಯಾಯಿತು.

ಪ್ರಿನ್ಸ್‌ಟನ್‌ನಲ್ಲಿ ಹರಿಶ್‌ಚಂದ್ರರ ಗಣಿತ ಪ್ರತಿಭೆ ವಿಕಾಸಗೊಂಡು, ಹೆಮ್ಮರವಾಗಿ ಬೆಳೆಯಿತು. ಸೈದ್ಧಾಂತಿಕ ಭೌತಶಾಸ್ತ್ರಕ್ಕೆ ತಳಹದಿ ಎನಿಸಿದ್ದ ಸಂಕುಲನ ಸಿದ್ಧಾಂತ (ಗ್ರೂಪ್ ಥಿಯರಿ)ವನ್ನೇ ತಮ್ಮ ಕಾರ್ಯಕ್ಷೇತ್ರವಾಗಿ ಆರಿಸಿಕೊಂಡು ಅದರಲ್ಲಿ ಮಹತ್ವದ ಸಾಧನೆಗಳನ್ನು ಸಾಧಿಸಿದರು. ಅವರ ಲೇಖನಿಯಿಂದ ಪ್ರಮೇಯಗಳಾದ ಮೇಲೆ ಪ್ರಮೇಯಗಳ ಪ್ರವಾಹವೇ ಹರಿದುಬಂದು ಗಣಿತ ಲೋಕವನ್ನೇ ದಂಗುಬಡಿಸಿತು. ಸಂಕುಲನ ಸಿದ್ಧಾಂತದ ಒಂದು ಭಾಗವಾದ ಇನ್‌ಫಿನೆಟ್ ಡೈಮೆನ್ಶನಲ್ ರೆಪ್ರೆಸೆಂಟೇಷನ್ ಥಿಯರಿ ಎಂಬುದಕ್ಕೆ ಬುನಾದಿ ಹಾಕಿ, ಅದರ 'ಧಾತು'ಗಳ ಅನೇಕ ಲಕ್ಷಣಗಳನ್ನು ಆವಿಷ್ಕರಿಸಿದರು. ಸಂಕುಲಗಳಲ್ಲಿ

ಪ್ರಸಿದ್ಧವಾದ 'ಲೀ ಸಂಕುಲ' (ಲೈ ಗ್ರೂಪ್)ಕ್ಕೆ ಒಂದು ಹೊಸ ರೂಪವನ್ನೇ ಕೊಟ್ಟರು. ಪ್ರಿನ್ಸ್‌ಟನ್ನಿನಲ್ಲಿ ಅವರ ಸಮಕಾಲೀನರಾದ ಮತ್ತೊಬ್ಬ ಪ್ರಸಿದ್ಧ ಗಣಿತಜ್ಞ ಆರ್. ಪಿ. ಲ್ಯಾನ್‌ಗ್ಲಾಂಡ್ಸ್ ''ಅದುವರೆಗೂ ಕಡೆಗಣಿಸಲ್ಪಟ್ಟಿದ್ದ ಸಂಕುಲ ಸಿದ್ಧಾಂತವನ್ನು ವೃದ್ಧಿಪಡಿಸಿ, ಅದನ್ನು ಭೌತ ಮತ್ತು ಗಣಿತ ವಿಜ್ಞಾನಿಗಳ ಕೇಂದ್ರವಾಗಿ (ಹರಿಶ್‌ಚಂದ್ರ) ಪರಿವರ್ತಿಸಿದ್ದಾರೆ'' ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಮನುಕುಲದ ಸೇವೆಯಲ್ಲಿ ಇಷ್ಟೊಂದು ಕ್ರಿಯಾಶೀಲರಾಗಿದ್ದಾಗಲೇ, ೫೩ನೆಯ ವಯಸ್ಸಿನಲ್ಲಿ ಸುಬ್ಬರಾಯರನ್ನು ಸಾವು ಆಹುತಿ ತೆಗೆದುಕೊಂಡಿತು. ಆಗಸ್ಟ್ ೯, ೧೯೪೮ ರವಿವಾರ ಬೆಳಗ್ಗೆ ಸುಬ್ಬರಾಯರು ಎಂದಿನಂತೆ ಪ್ರಯೋಗಾಲಯದಲ್ಲಿ ಕಳೆದು, ರಾತ್ರಿ ಮನೆಗೆ ಹೋಗಿ ಮಲಗಿದವರು ಮತ್ತೆ ಏಳಲೇ ಇಲ್ಲ. ಹೃದಯಾಘಾತದಿಂದ ಇಹಲೋಕ ತ್ಯಜಿಸಿದ್ದರು. ತಾಯಿ ವೆಂಕಮ್ಮನವರು ಮಗನ ಮರಣ ವಾರ್ತೆಯನ್ನು ತಿಳಿದ ನಂತರ, ಅವರ ಪಾರ್ಥಿವ ಶರೀರವನ್ನು ಅಗ್ನಿಗೆ ಆಹುತಿ ಮಾಡಿ, ಭಸ್ಮವನ್ನು ಅಲ್ಲೇ ಸಮುದ್ರ ತರ್ಪಣ ಮಾಡಬೇಕೆಂದು ಲೆಡರ್ಲೇ ಕಂಪನಿಯ ನಿರ್ದೇಶಕರನ್ನು ವಿನಂತಿಸಿಕೊಂಡರಂತೆ. ನ್ಯೂಯಾರ್ಕ್ ಟೈಮ್ಸ್ ಮತ್ತು ನ್ಯೂಯಾರ್ಕ್ ಹೆರಾಲ್ಡ್ ಟ್ರಿಬ್ಯೂನ್ ಪತ್ರಿಕೆಗಳು ಸುಬ್ಬರಾಯರನ್ನು ''ಶತಮಾನದ ಶ್ರೇಷ್ಠ ವಿಜ್ಞಾನಿ'' ಎಂದು ಹೇಳಿ ಶ್ರದ್ಧಾಂಜಲಿ ಅರ್ಪಿಸಿದುವು.

ಗಣಿತದಲ್ಲಿ ಹರಿಶ್‌ಚಂದ್ರರ ಕೊಡುಗೆಯನ್ನು ಸಮಗ್ರವಾಗಿ ಅವಲೋಕಿಸುವ ಉದ್ದೇಶದಿಂದ ಅವರ ಸಹಪಾಠಿಗಳು, ಶಿಷ್ಯರು ಏಪ್ರಿಲ್ ೧೯೮೪ರಂದು ಪ್ರಿನ್ಸ್‌ಟನ್‌ನಲ್ಲಿ ಒಂದು ಅಂತರರಾಷ್ಟ್ರೀಯ ಸಮ್ಮೇಳನವನ್ನು ಏರ್ಪಡಿಸಿದ್ದರು. ಆದರೆ ಆ ಸಮ್ಮೇಳನದಲ್ಲಿ ಭಾಗವಹಿಸುವ ಭಾಗ್ಯ ಹರಿಶ್‌ಚಂದ್ರರಿಗೆ ಇರಲಿಲ್ಲ. ಅಕ್ಟೋಬರ್ ೧೬, ೧೯೮೩ರಂದು ಅರವತ್ತನೇ ವರ್ಷದಲ್ಲಿ ಹೃದಯಾಘಾತದಿಂದ ನಿಧನರಾದರು. ಅವರ ಭಸ್ಮವನ್ನು ಪ್ರಿನ್ಸ್‌ಟನ್‌ನಲ್ಲಿ ಹರಡಿ, ಅಲಹಾಬಾದಿನ ಗಂಗಾನದಿಯಲ್ಲಿ ಭಾಗಶಃ ಅದನ್ನು ವಿಸರ್ಜನೆ ಮಾಡಲಾಯಿತು.

ಸುಬ್ಬರಾಯರಿಗೆ ಪ್ರತಿಷ್ಠಿತ ನೊಬೆಲ್ ಪಾರಿತೋಷಕ ದೊರೆಯಲಿಲ್ಲ. ಆದರೆ ನೊಬೆಲ್ ಸಂಸ್ಥೆಯ ಮುಖ್ಯ ಕಛೇರಿಯಾದ ಸ್ವೀಡನ್ನಿನ ಕರೋಲಿನ್‌ಸ್ಕ್ ಇನ್‌ಸ್ಟಿಟ್ಯೂಟ್‌ನಲ್ಲಿ ಅವರ ಭಾವಚಿತ್ರವನ್ನು ಅನಾವರಣ ಮಾಡಿದ್ದಾರೆ. ಭಾರತ ಸರ್ಕಾರವು ಅವರ ಸ್ಮರಣಾರ್ಥ (ಜನ್ಮ ಶತಾಬ್ದಿಯ ವೇಳೆಯಲ್ಲಿ) ಅಂಚೆ ಚೀಟಿ ಬಿಡುಗಡೆ ಮಾಡಿ ಗೌರವಿಸಿದೆ. ಭಾರತೀಯ ಔಷಧಿ ಕಂಪನಿಯೊಂದು ಆಕ್ಸಿಟೆಟ್ರಾಸೈಕ್ಲಿನ್ ಎಂಬ ಒಂದು ಔಷಧಿಯನ್ನು ತಯಾರಿಸಿ ಅದಕ್ಕೆ ''ಸುಬಾಮೈಸಿನ್'' ಎಂದು ಹೆಸರಿಟ್ಟಿದೆ. ಇಂಡಿಯನ್ ನ್ಯಾಷನಲ್ ಸೈನ್ಸ್ ಅಕಾಡೆಮಿಯು ಸುಬ್ಬರಾಯರ ಕೃತಿಗಳನ್ನೆಲ್ಲಾ ಸಂಗ್ರಹಿಸಿ ಪ್ರಕಟಿಸಿದೆ. ಎಲ್ಲಕ್ಕಿಂತಾ ಮಿಗಿಲಾಗಿ ಅವರ ಸಂಶೋಧನಾ ಶಕ್ತಿಯಾಗಿದ್ದ ಬೂಸ್ಟ್‌ನ ಎರಡು ಪ್ರಭೇದಗಳಿಗೆ ''ಸುಬ್ಬರೊಮೈಸೀಸ್ ಸ್ಪ್ಲೆಂಡೆನ್ಸ್'' ಮತ್ತು ''ಸುಬ್ಬರೋಮೈಸೀಸ್ ಅಕ್ವಾಟಿಕಾ'' ಎಂದು ಹೆಸರಿಟ್ಟು ವಿಜ್ಞಾನ ಕ್ಷೇತ್ರದಲ್ಲಿ ಅವರ ಹೆಸರನ್ನು ಶಾಶ್ವತಗೊಳಿಸಿದ್ದಾರೆ.

ಪ್ರೊ॥ ಹರಿಶ್‌ಚಂದ್ರ

ಗಣಿತದಲ್ಲಿ ನೊಬೆಲ್ ಪಾರಿತೋಷಕಕ್ಕೆ ಸಮನಾದ 'ಫೀಲ್ಡ್ಸ್ ಮೆಡಲ್' ಯಾವುದೋ ಕ್ಷುಲ್ಲಕ ಕಾರಣದಿಂದಾಗಿ ಹರಿಶ್‌ಚಂದ್ರರ ಕೈತಪ್ಪಿತು. ಆದರೆ ಗಣಿತ ಪ್ರಪಂಚ ಅವರಿಗೆ ಮನ್ನಣೆ ತೋರಿಸಲು ಸಂಕೋಚಪಡಲಿಲ್ಲ. ಒಂದಾದ ಮೇಲೊಂದು ಪ್ರಶಸ್ತಿಗಳು ಒದಗಿ ಬಂದುವು. ೧೯೫೪ರಲ್ಲಿ ಅಮೆರಿಕ ಗಣಿತಶಾಸ್ತ್ರ ಸಂಸ್ಥೆಯಿಂದ 'ಕೋಲ್' ಬಹುಮಾನ; ೧೯೫೭-೫೮ರಲ್ಲಿ ಗುಗ್ಗೆನ್‌ಹೈಮ್ ಫೆಲೋ; ೧೯೬೧-೬೩ರಲ್ಲಿ ಸ್ಲೋನ್ ಫೆಲೋಷಿಪ್; ೧೯೭೩ರಲ್ಲಿ ರಾಯಲ್ ಸೊಸೈಟಿ ಆಫ್ ಲಂಡನ್ ಫೆಲೋಷಿಪ್; ೧೯೭೪ರಲ್ಲಿ ಇಂಡಿಯನ್ ನ್ಯಾಷನಲ್ ಅಕಾಡೆಮಿ ಆಫ್ ಸೈನ್ಸ್ ಮತ್ತು ಇಂಡಿಯನ್ ಸೈನ್ಸ್ ಅಕಾಡೆಮಿಯ ಸದಸ್ಯತ್ವ; ೧೯೮೧ರಲ್ಲಿ ಅಮೆರಿಕದ ನ್ಯಾಷನಲ್ ಅಕಾಡೆಮಿ ಆಫ್ ಸೈನ್ಸ್ ಸಂಸ್ಥೆಯ ಸದಸ್ಯತ್ವ; ದೆಹಲಿ ಮತ್ತು ಯೇಲ್ ವಿಶ್ವವಿದ್ಯಾಲಯಗಳಿಂದ ಗೌರವಾನ್ವಿತ ಡಾಕ್ಟರೇಟ್; ಮುಂಬಯಿನ ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಫಂಡಮೆಂಟಲ್ ರಿಸರ್ಚ್ ಗೌರವಾನ್ವಿತ ಸದಸ್ಯತ್ವ. ಗಣಿತದಲ್ಲಿ ಅವರು ಮಾಡಿದ ಸಾಧನೆಗಳನ್ನು ಎರಡು ಸಾವಿರಕ್ಕೂ ಹೆಚ್ಚು ಪುಟಗಳ ನಾಲ್ಕು ಸಂಪುಟಗಳಲ್ಲಿ ಸಂಗ್ರಹಿಸಲಾಗಿದೆ.

ಒಮ್ಮೆ ಭಾರತದಿಂದ ಹೊರಟ ಸುಬ್ಬರಾಯರು ಮತ್ತೆ ವಾಪಸ್ಸು ಬರಲೇ ಇಲ್ಲ. ಅಮೆರಿಕದ ರಾಕ್‌ಫೆಲರ್ ಫೌಂಡೇಷನ್ ೧೯೨೫ರಲ್ಲಿ ಕಲ್ಕತ್ತಾದಲ್ಲಿ ಸ್ಥಾಪಿಸಲಿದ್ದ ಅಖಿಲ ಭಾರತ ಆರೋಗ್ಯ ಮತ್ತು ಸಾರ್ವಜನಿಕ ಸ್ವಾಸ್ಥ್ಯ ಸಂಸ್ಥೆಯಲ್ಲಿ ಜೀವರಸಾಯನ ಶಾಸ್ತ್ರದ ಪ್ರಾಧ್ಯಾಪಕರಾಗಿ ನೇಮಕವಾಗುವ ಅವಕಾಶವಿತ್ತು. ಆದರೆ, ಅಂದು ಆಳರಸರಾದ ಬ್ರಿಟಿಷ್ ಸರ್ಕಾರದ ವರ್ಣನೀತಿಯಿಂದಾಗಿ ಅದು ತಪ್ಪಿಹೋಯಿತು.

ಹರಿಶ್‌ಚಂದ್ರ ೧೯೫೨-೫೩ರಲ್ಲಿ ಮುಂಬೈನ ಟಿ.ಐ.ಎಫ್.ಆರ್. ಸಂಸ್ಥೆಗೆ ಪ್ರಾಧ್ಯಾಪಕರಾಗಿ ಭೇಟಿ ಕೊಟ್ಟಾಗ, ನಿರ್ದೇಶಕರಾಗಿದ್ದ ಹೋಮಿ ಭಾಭಾ, ಅವರಿಗಾಗಿ ಒಂದು ಸ್ಥಿರ ಪ್ರಾಧ್ಯಾಪಕ ಹುದ್ದೆಯನ್ನು ಸೃಷ್ಟಿಸಿದರು. ಆದರೆ ಕಾರಣಾಂತರದಿಂದ ಹರಿಶ್‌ಚಂದ್ರ ಅದನ್ನು ಸ್ವೀಕರಿಸಲಿಲ್ಲ.

ಈ ಇಬ್ಬರು ದಿಗ್ಗಜರ ವೈಯಕ್ತಿಕ ಜೀವನ ಮತ್ತು ವ್ಯಕ್ತಿತ್ವದಲ್ಲಿ ಅನೇಕ ಸಾಮ್ಯಗಳೂ, ವಿಭಿನ್ನತೆಯೂ ಕಂಡುಬರುತ್ತವೆ. ಇಬ್ಬರ ಹೆಸರಿನಲ್ಲಿಯೂ ಒಂದು ಸೋಜಿಗದ ಸಂಗತಿ ಇದೆ. ಸುಬ್ಬರಾಯರು ಆರಂಭದಲ್ಲಿ ತಮ್ಮ ಹೆಸರನ್ನು Subba Row ಎಂದು ಬರೆದುಕೊಳ್ಳುತ್ತಿದ್ದರು. ಜರ್ನಲ್ ಆಫ್ ಬಯಲಾಜಿಕಲ್ ಕೆಮಿಸ್ಟ್ರಿ ಎಂಬ ನಿಯತಕಾಲಿಕೆಯಲ್ಲಿ ಅವರ ಲೇಖನವನ್ನು ಪ್ರಕಟಿಸುವಾಗ ಸಂಪಾದಕರು ಹೆಸರಿನ ಎರಡೂ ಪದಗಳನ್ನು ಒಟ್ಟುಗೂಡಿಸಿ Subbarow ಎಂದು ತಪ್ಪಾಗಿ ಮುದ್ರಿಸಿದರು. ಆದರೆ ಸುಬ್ಬರಾಯರು ಅದನ್ನು ಸರಿಪಡಿಸುವ ಗೋಜಿಗೆ ಹೋಗಲೇ ಇಲ್ಲ. ಮುಂದೆ ಅದೇ ರೀತಿ ಪ್ರಸಿದ್ಧರಾದರು.

ಹರಿಶ್‌ಚಂದ್ರರ ಹೆಸರನ್ನು ಒಂದು ವಿಶಿಷ್ಟ ರೀತಿಯಲ್ಲಿ ಬರೆದಿರುವುದನ್ನು ನೀವು ಗಮನಿಸಿರಬಹುದು. ಅವರ ಪ್ರಬಂಧವನ್ನು ಪ್ರಕಟಿಸುವ ನಿಯತಕಾಲಿಕೆಯ ಸಂಪಾದಕರು ಹೆಸರಿನ ಮಧ್ಯೆ ಒಂದು ಕೂಡು ಗೆರೆ ಹಾಕಿ ಒಗ್ಗೂಡಿದ್ದ ಹೆಸರನ್ನು ಇಬ್ಭಾಗ ಮಾಡಿದರು. ಹರಿಶ್‌ಚಂದ್ರರಿಗೆ ಅದೇ ಸೂಕ್ತವೆಂದೆನಿಸಿ ಮುಂದುವರಿಸಿದರು.

ಬಡತನದಲ್ಲಿದ್ದ ಸುಬ್ಬರಾಯರು ವಿದ್ಯಾಭ್ಯಾಸಕ್ಕೆ ಸಹಾಯ ಮಾಡಿದ ಕುಟುಂಬದ ಕನ್ಯೆಯನ್ನು ಆಭಾರಿಯಾಗಿ ಮದುವೆಯಾದರು. ಆದರೆ ಅದು ಸಫಲವಾಗಲಿಲ್ಲ. ಕೊನೆಯವರೆಗೂ ಅವರು ಒಂಟಿಯಾಗಿಯೇ ಉಳಿದರು. ದಾಂಪತ್ಯ ಜೀವನದ ಅನುಭವ ಅವರಿಗೆ ದೊರಕಲೇ ಇಲ್ಲ.

ಹರಿಶ್‌ಚಂದ್ರ ಬಾಲ್ಯ ಗೆಳತಿ ಲಲಿತ ಅವರನ್ನು ವರಿಸಿ ತೃಪ್ತಿಕರವಾಗಿ ಬಾಳಿದರು. ಅವರಿಗೆ ಇಬ್ಬರು ಹೆಣ್ಣು ಮಕ್ಕಳಿದ್ದಾರೆ.

ಸುಬ್ಬರಾವ್ ಮತ್ತು ಹರಿಶ್‌ಚಂದ್ರ, ಇಬ್ಬರೂ ಛಲಗಾರರು, ಶಿಸ್ತುಗಾರರು. ಪ್ರತಿಕೂಲಗಳಿದ್ದಾಗ್ಯೂ ಹಿಡಿದ ಕೆಲಸವನ್ನು ಸುಬ್ಬರಾಯರು ಕೈಬಿಡುತ್ತಿರಲಿಲ್ಲ. ಎಲ್ಲ ಅನುಕೂಲಗಳಿದ್ದೂ ಹರಿಶ್‌ಚಂದ್ರರು ದಾರಿ ತಪ್ಪಲಿಲ್ಲ. ಇಬ್ಬರೂ ಪಾಶ್ಚಾತ್ಯ ಜೀವನ ಶೈಲಿಯನ್ನು ಅಳವಡಿಸಿಕೊಂಡಿದ್ದರು. ಆದರೆ ಅದರ ಹಿನ್ನೆಲೆಯಲ್ಲಿ ಸಭ್ಯತೆ, ಭಾವುಕತೆ ಮತ್ತು ಸ್ನೇಹ ತುಂಬಿದ್ದುವು. ಅಂದಿನ ಅಮೆರಿಕದಲ್ಲಿ ತೀವ್ರವಾಗಿದ್ದ ವರ್ಣಭೇದ ನೀತಿಯ ಹಿನ್ನೆಲೆಯಲ್ಲಿ, ಭಾರತೀಯರು ಯಾರಿಗೂ ಕಡಿಮೆ ಇಲ್ಲ ಎಂದು ಸಾದರಪಡಿಸಲು ಸುಬ್ಬರಾಯರು ಬಾಕ್ಸಿಂಗ್, ಬೌಲಿಂಗ್, ಗಾಲ್ಫ್, ಟೆನಿಸ್, ಕುದುರೆ ಸವಾರಿ, ಈಜುಗಾರಿಕೆ ಮುಂತಾದ ಅನೇಕ ಆಟೋಟಗಳನ್ನು ರೂಢಿಸಿಕೊಂಡರು. ಕಾರು ಕೊಂಡು ಅದನ್ನು ಚಲಿಸಲು ಕಲಿತರು. ಅಷ್ಟೇ ಅಲ್ಲದೆ ವಿಮಾನ ಚಾಲನೆಯನ್ನು ಕಲಿತು, ಎರಡು ಆಸನಗಳ ಪುಟ್ಟ ವಿಮಾನವನ್ನು ತಮ್ಮ ಉಪಯೋಗಕ್ಕಾಗಿ ಖರೀದಿಸಿದ್ದರು.

ಇಬ್ಬರೂ ಮಿತಭಾಷಿಗಳು ಮತ್ತು ಸಂಕೋಚ ಸ್ವಭಾವದವರು. ತಮ್ಮ ಕಾರ್ಯಕ್ಕೆ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡಿದ್ದರು. ಯಶಸ್ಸು ಮತ್ತು ಸೋಲುಗಳ ಬಗ್ಗೆ ನಿರ್ಲಿಪ್ತ ಮನೋಭಾವ ಇಬ್ಬರದೂ ಆಗಿತ್ತು. ಹಾಗಾಗಿ ಪ್ರಚಾರಪ್ರಿಯರಾಗಿರಲಿಲ್ಲ. ಅದೇ ಕಾರಣಕ್ಕಾಗಿ ಅವರಿಬ್ಬರಿಗೂ ನ್ಯಾಯವಾಗಿ ದೊರಕಬೇಕಾಗಿದ್ದ ಇನ್ನೂ ಅನೇಕ ಪ್ರಶಸ್ತಿಗಳು ದೊರೆಯಲಿಲ್ಲವೆಂಬುದು ಅನೇಕರ ಅಭಿಪ್ರಾಯ.

ಇಂದು ಹೈದರಾಬಾದಿನ ನಿಜಾಮ್ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸ್‌ನಲ್ಲಿ ಡಾ॥ ಯಲ್ಲಾಪ್ರಗಡ ಸುಬ್ಬರಾಯರ ಮೂರ್ತಿ ಪ್ರತಿಷ್ಠಾಪನೆಯಾಗಿದೆ.

ಅಲಹಾಬಾದಿನ ಮೆಹತಾ ಇನ್‌ಸ್ಟಿಟ್ಯೂಟ್ ಆಫ್ ಮ್ಯಾಥಮೆಟಿಕ್ಸ್‌ಗೆ ಹರಿಶ್-ಚಂದ್ರ ಇನ್‌ಸ್ಟಿಟ್ಯೂಟ್ ಆಫ್ ಮ್ಯಾಥಮೆಟಿಕ್ಸ್ ಎಂದು ಮರುನಾಮಾಂಕಿತ ಮಾಡಿ, ಅಲ್ಲಿ ಹರಿಶ್-ಚಂದ್ರ ಮೂರ್ತಿಯ ಅನಾವರಣವಾಗಿದೆ.

ಒಂದು ರೀತಿಯಲ್ಲಿ ಈ ಇಬ್ಬರೂ ಮಹಾನ್ ವಿಜ್ಞಾನಿಗಳ 'ಚೇತನ' ತಾಯ್ನಾಡಿಗೆ ಮರಳಿದಂತಾಗಿದೆ.

**ಡಾ॥ ಎಂ. ಎಸ್. ಎಸ್. ಮೂರ್ತಿ**
ಬಿ. ೧೦೪, ಟೆರೇಸ್ ಗಾರ್ಡನ್ ಅಪಾರ್ಟ್‌ಮೆಂಟ್ಸ್, ೨ನೇ ಮೇನ್
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫

# ಭೋಪಾಲ್ ನಗರಕ್ಕೆ ಕೆಲವು ಸುತ್ತು

ಬೆಳಗ್ಗಿನ ಏಳು ಗಂಟೆ. ಮಧ್ಯಪ್ರದೇಶದ ರಾಜಧಾನಿ ಭೋಪಾಲ್‌ನ ಹೋಟೆಲ್ ಒಂದರಲ್ಲಿ ನಮ್ಮ ತಂಡ ಡೇರೆ ಹೂಡಿತ್ತು. ಮುಂದಿನ ನಮ್ಮ ಪ್ರಯಾಣಕ್ಕೆ ಇನ್ನೂ ಎರಡು ಗಂಟೆ ಬಾಕಿ ಇದೆ ಅಂದಾಗ ಭೋಪಾಲ್ ನಗರ ಸುತ್ತಾಡಿ ಬರಲು ಕ್ಯಾಮರಾ ಹಿಡಿದು ಹೊರಟೆ. ಅದು ೨೦೦೨ರ ಡಿಸೆಂಬರ್ ೨೭. ಎರಡು ದಿನಗಳ ಹಿಂದಷ್ಟೇ ಭೋಪಾಲ್ ರೈಲ್ವೆ ಸ್ಟೇಷನ್‌ನಲ್ಲಿ ಎರಡು ಶಕ್ತಿಶಾಲಿ ಬಾಂಬ್ ದೊರಕಿತ್ತು. ಆಧುನಿಕ ತಂತ್ರಜ್ಞಾನಗಳನ್ನು ಬಳಸಿ ಅದನ್ನು ತಯಾರಿಸಲಾಗಿತ್ತು. ಆತಂಕವಾದಿ ಸಂಘಟನೆಗಳು ಕಾಶ್ಮೀರ, ಮುಂಬಯಿ, ದೆಹಲಿಗಳಲ್ಲಿ ಸ್ಫೋಟಕ್ಕಾಗಿ ಬಳಸುವ ಬಾಂಬ್‌ಗಳೇ ಅದಾಗಿತ್ತು. ನಾವು ಭೋಪಾಲ್‌ನಲ್ಲಿದ್ದ ದಿನವೇ ಗುಪ್ತಚರ ಏಜನ್ಸಿ ಐ.ಬಿ. ಅಧಿಕಾರಿಗಳ ತಂಡವೂ ಅಲ್ಲಿಗೆ ಬಂದಿದ್ದು ಬಾಂಬ್ ನೋಡಿ ದಂಗಾಗಿಬಿಟ್ಟಿದ್ದರು. ಉಪ ಮಹಾ ನಿರೀಕ್ಷಕ ಶ್ರೀವಾಸ್ತವ್ ನೇತೃತ್ವದಲ್ಲಿ ಐ.ಬಿ.ಯ ಒಂದು ತಂಡವು ಭೋಪಾಲ್‌ಗೆ ಬಂದು ಅದರ ಪರಿಶೀಲನೆ ನಡೆಸಿತ್ತು. ಈ ಬಾಂಬ್ ತಯಾರಿಯಲ್ಲಿ ಇಲೆಕ್ಟ್ರಿಸಿಟಿಯ ವಿಶೇಷ ಜ್ಞಾನ ಇರಬೇಕಿದೆ. ಅಧಿಕ ದೂರಕ್ಕೆ ಇದನ್ನು ಕೊಂಡೊಯ್ಯುವಂತಿರಲಿಲ್ಲ. ಹೀಗಾಗಿ ಇಲ್ಲೇ ಎಲ್ಲಿಯೋ ತಯಾರಿಸಿರಬೇಕೆಂದು ಐ.ಬಿ.ಯ ಪ್ರತಿಕ್ರಿಯೆಯಾಗಿತ್ತು.

ಭೋಪಾಲ್ ರೈಲ್ವೆ ಸ್ಟೇಷನ್ ಎದುರು ನಿಂತಾಗ ಒಂದೆರಡು ಪೊಲೀಸ್ ವ್ಯಾನ್‌ಗಳು ಗೋಚರಿಸಿದವು. ಕ್ಯಾಮರಾ ಹೊರತೆಗೆದು ರೈಲ್ವೆಸ್ಟೇಷನ್‌ನ ಫೋಟೋ ತೆಗೆದಾಗ ಕೆಲವು ಪೊಲೀಸರು ನನ್ನನ್ನೇ ನೋಡುತ್ತಿದ್ದರು. ಕೆಲವು ರಿಕ್ಷಾದವರು ಕುತೂಹಲಗೊಂಡು ಹತ್ತಿರ ಬಂದು ವಿಚಾರಿಸತೊಡಗಿದರು. ಬೆಳಗಿನ ಸಮಯವಾದ್ದರಿಂದ ರಸ್ತೆ ಇಡೀ ಮಂಜು ಮುಸುಕಿತ್ತು. ಫೋಟೋ ಬರುತ್ತದೋ ಇಲ್ಲವೋ ಎನ್ನುವ ಸಂಶಯವೂ ಆವಾಗ ನನ್ನನ್ನು ಕಾಡತೊಡಗಿತು. ಸುಮಾರು ಒಂದು ಗಂಟೆ ಕಾಲ ಅಲ್ಲೆಲ್ಲ ಸುತ್ತಾಡಿದೆ.

ಈ ವರ್ಷ (೨೦೦೩) ಮಧ್ಯಪ್ರದೇಶದಲ್ಲಿ ವಿಧಾನಸಭೆ ಚುನಾವಣೆ ನಡೆಯಲಿದೆ. 'ಮೋದಿ ಕಾರ್ಡ್' ಇಲ್ಲಿಯೂ ಬಳಸುವ ನಿರ್ಧಾರವನ್ನು ಬಿಜೆಪಿ ಮಾಡಿದ್ದರೆ ಕಾಂಗ್ರೆಸ್ ಕೂಡಾ ತನ್ನ ರಣನೀತಿ ತಯಾರಿಸುತ್ತಿದೆ. ಮಧ್ಯಪ್ರದೇಶದ ಮುಖ್ಯಮಂತ್ರಿ ದಿಗ್ವಿಜಯ ಸಿಂಗ್ ತನ್ನ ರಾಜ್ಯದಲ್ಲಿ 'ಗೋಧ್ರಾ'ದಂತಹ 'ಕಾಂಡ' ಮರುಕಳಿಸಲು ಬಿಡಲಾರೆ ಎಂದು ಘೋಷಿಸಿದ್ದಾರೆ. ಆದರೆ 'ವಿಕಾಸ'ದ ವಿಷಯದಲ್ಲಿ ಹಿಂದುಳಿದಿರುವ ದಿಗ್ವಿಜಯ ಸಿಂಗ್ ಸರಕಾರಕ್ಕೆ ಮಧ್ಯಪ್ರದೇಶದಲ್ಲಿ ಮತ್ತೊಮ್ಮೆ ವಿಧಾನಸಭೆ ಚುನಾವಣೆಯಲ್ಲಿ ವಿಜೃಂಭಿಸಿ ಬರಲು ಅಷ್ಟು ಸುಲಭವಿಲ್ಲ.

ಎರಡು ವರ್ಷಗಳ ಹಿಂದೆ ಛತ್ತೀಸಗಢ್ ರಾಜ್ಯ ಸ್ಥಾಪನೆಯಾದ ನಂತರ ಇಂದು ಮಧ್ಯಪ್ರದೇಶ ರಾಜ್ಯದಲ್ಲಿ ೨೩೦ ವಿಧಾನಸಭಾ ಕ್ಷೇತ್ರಗಳಿವೆ. ೯೦ ಕ್ಷೇತ್ರ ಛತ್ತೀಸಗಢ್ ರಾಜ್ಯಕ್ಕೆ ಹೋಗಿಬಿಟ್ಟಿದೆ. ೬ ಕೋಟಿ ೫ ಲಕ್ಷ ಜನಸಂಖ್ಯೆ ಇರುವ ಮಧ್ಯಪ್ರದೇಶ ಈಗಲೂ ಇತರ ಕೆಲವು ರಾಜ್ಯಗಳಿಗೆ ಹೋಲಿಸಿದರೆ ತುಂಬಾ ಹಿಂದುಳಿದಿದೆ. ಕಳೆದ ಆರು ವರ್ಷಗಳಿಂದ ಸರಿಯಾದ ಮಳೆ ಬಾರದೆ ತೀವ್ರ ಸಂಕಟಸ್ಥಿತಿ ಉದ್ಭವಿಸಿದೆ. ಕೈಕೊಟ್ಟ ಮಳೆ, ವಿದ್ಯುತ್ ಸಂಕಟ ಮತ್ತು ಕೆಟ್ಟ ರಸ್ತೆಗಳು ಮಧ್ಯಪ್ರದೇಶದ ಅರ್ಥವ್ಯವಸ್ಥೆಯನ್ನೇ ಅಲ್ಲಾಡಿಸಿಬಿಟ್ಟಿವೆ. ಸಮೀಕ್ಷೆಯ ಪ್ರಕಾರ ಮಧ್ಯಪ್ರದೇಶ ರೋಗಿಷ್ಠ ರಾಜ್ಯಗಳ ಸಾಲಿಗೆ ಸೇರುವಂತಾಗಿದೆ. ಕೃಷಿ ಪ್ರಧಾನವಾದ ಈ ರಾಜ್ಯದಲ್ಲಿ ಮಳೆ ಬಹಳ ಮಹತ್ವಪೂರ್ಣ. ಆದರೆ ಈ ಬಾರಿ ಮಳೆ ಸೆಪ್ಟಂಬರ್ ತಿಂಗಳಿಗೇ ನಿಂತುಬಿಟ್ಟಿತ್ತು. ೨೦ ಪ್ರತಿಶತ ಕಡಿಮೆ ಮಳೆ ಈ ಸಲ ಕಂಡುಬಂದಿದೆಯಂತೆ. ಹಾಗಾಗಿ ರಾಜ್ಯದ ೧೭೯ ತಾಲೂಕುಗಳನ್ನು ಈಗಾಗಲೇ ಬರಪೀಡಿತ ಎಂದು ಘೋಷಿಸಲಾಗಿದೆ. ರಾಜ್ಯ ಸರಕಾರವು ಕೇಂದ್ರದ ಬಳಿ ಬರವನ್ನು ಎದುರಿಸಲು ೭೯೧೯.೬೨ ಕೋಟಿ ರೂಪಾಯಿ ಧನರಾಶಿಯ ಬೇಡಿಕೆ ಇರಿಸಿದೆ.

ನಾವು ಇಂದೋರ್‌ನಲ್ಲಿ ಮೂರುದಿನ ಸುತ್ತಾಡಿದ ನಂತರ ಭೋಪಾಲ್‌ಗೆ ಬಂದಿದ್ದೆವು. ಇಂದೋರ್‌ನಲ್ಲಿ ಡಿ. ೨೩ಕ್ಕೆ ರಾಷ್ಟ್ರಪತಿ ಡಾ|| ಎ. ಪಿ. ಜೆ. ಅಬ್ದುಲ್ ಕಲಾಂ ಕಾರ್ಯಕ್ರಮವೊಂದರಲ್ಲಿ ಪಾಲುಗೊಳ್ಳಲು ಬರುವುದಿತ್ತು. ಹಾಗಾಗಿ ನಾವು ಎರಡು ಗಂಟೆ 'ರಸ್ತೆ ತಡೆ' ಅನುಭವಿಸಿದೆವು. ಪಕ್ಕದಲ್ಲೇ ಸಶಸ್ತ್ರ ಪೊಲೀಸ್ ಪಡೆಯ ಕಚೇರಿ ಇತ್ತು. ಒಬ್ಬಾತ ನಮ್ಮ ಬಸ್ಸು ಹತ್ತಿ ನನ್ನೊಟ್ಟಿಗೆ ಹರಟೆಗೆ ಕೂತ. "ನೀವು ಹದಿನೈದು ನಿಮಿಷ ಬೇಗ ಬಂದಿದ್ದರೆ ಮುಂದೆ ಹೋಗಬಹುದಿತ್ತು. ಇನ್ನು ಎರಡು ಗಂಟೆ ಕಾಯಬೇಕು" ಎಂದವನೇ ತನ್ನ ಕೆಲವು ಅನುಭವಗಳನ್ನು ಹೇಳತೊಡಗಿದ. ವರ್ಷಕ್ಕೆ ಒಂದು ತಿಂಗಳು ರಜೆ ಸಿಕ್ಕಿದಾಗ ಊರಿಗೆ ಹೊರಡುವುದು ಎಂದೂ ತಿಳಿಸಿದ. ಮಾತಿನ ನಡುವೆ ನಕ್ಸಲೀಯರ ಮಾತುಗಳೂ ಬಂತು. ಚಂಬಲ್ ಕಣಿವೆಯ ಮಾತುಗಳನ್ನೂ ಆಡಿದ.

**ಭಾಜಪ ಯುವಕರ ದಾಂಧಲೆ**

ಇಂದೋರ್‌ನಲ್ಲಿ ನಾವಿದ್ದ ಎರಡು ದಿನಗಳಲ್ಲಿ ಭಾಜಪ ಯುವ ಮೋರ್ಚಾದ ಮಹಾಧಿವೇಶನ ನಡೆಯುತ್ತಿತ್ತು. ಇಲ್ಲಿ ನಡೆದ ಘಟನೆಯೊಂದನ್ನು ಹೇಳಲೇಬೇಕಿದೆ. ಮಹಾಧಿವೇಶನದಿಂದ ಹಿಂತಿರುಗುತ್ತಿದ್ದ ಭಾಜಪ ಯುವ ಮೋರ್ಚಾದ ಕಾರ್ಯಕರ್ತರು ಡಿ. ೨೫ರ ರಾತ್ರಿಗೆ ಇಂದೋರ್ ರೈಲ್ವೆ ಸ್ಟೇಷನ್‌ನಲ್ಲಿ ತುಂಬಾ ಗಲಾಟೆ ಸೃಷ್ಟಿಸಿದ್ದರು. ಅವರು ರೈಲಿನಲ್ಲಿ ಕೂತಿದ್ದ (ರಿಸರ್ವೇಶನ್ ಕಂಪಾರ್ಟ್‌ಮೆಂಟ್‌ನ) ಪ್ರಯಾಣಿಕರನ್ನು ಕೆಳಗಿಳಿಸಿ ತಾವು ಬೋಗಿಯನ್ನು ಹತ್ತಿ ಕುಳಿತರು. ಒಂದೂವರೆ ಗಂಟೆ ಕಾಲ ನಡೆದ ಈ ಗಲಾಟೆಯಲ್ಲಿ ಮಕ್ಕಳು, ಮಹಿಳೆಯರು ರೈಲ್ವೆ ಸ್ಟೇಷನ್‌ನಲ್ಲೇ ಕೂರಬೇಕಾಯಿತು. ಇಂದೋರ್-ಗ್ವಾಲಿಯರ್ ರೈಲು

---

■

**ಹದಿನೆಂಟು ವರ್ಷಗಳ ಹಿಂದೆ ಸಂಭವಿಸಿದ ಭೋಪಾಲ್ ಗ್ಯಾಸ್ ದುರಂತವನ್ನು ಮರೆಯುವುದಾದರೂ ಹೇಗೆ ? ಭೋಪಾಲ್ ರಸ್ತೆಗಳಲ್ಲಿ ಅಲ್ಲಲ್ಲಿ ಗೋಡೆ ಬರಹಗಳನ್ನು ಈ ಸಮಯ ಕಾಣಬಹುದು. ಗ್ಯಾಸ್ ದುರಂತ ಪೀಡಿತರಿಗೆ ನ್ಯಾಯ ಸಿಗಬೇಕೆನ್ನುವ ಆಶಯಗಳ ಅನೇಕ ಗೋಡೆ ಬರಹ, ಪೋಸ್ಟರ್‌ಗಳನ್ನು ನಾನು ಗಮನಿಸಿದೆ. ಹೌದು, ೧೮ ವರ್ಷಗಳು ಕಳೆದುಹೋದರೂ ಪ್ರಪಂಚದ ಭೀಷಣವಾದ ಗ್ಯಾಸ್ ದುರಂತ ಪೀಡಿತರಿಗೆ ಸರಿಯಾದ ಆರ್ಥಿಕ, ಸಾಮಾಜಿಕ ಮರುವಸತಿಯನ್ನು ಒದಗಿಸಿಲ್ಲ, ಸಂತೋಷದಾಯಕ ಆರೋಗ್ಯ ಸೌಲಭ್ಯಗಳೂ ಉಪಲಬ್ಧವಿಲ್ಲ. ಡಿಸೆಂಬರ್ ೨ ಮತ್ತು ೩ರ (೧೯೮೪) ರಾತ್ರಿಗೆ ಸಂಭವಿಸಿದ ಈ ಭೋಪಾಲ್ ಗ್ಯಾಸ್ ದುರಂತ ಪೀಡಿತರ ಸಮಸ್ಯೆ ಇಂದಿಗೂ ಹಾಗೆಯೇ ಉಳಿದುಕೊಂಡಿದೆ.**

■

**ಶ್ರೀನಿವಾಸ ಜೋಕಟ್ಟೆ**

---




ಭೋಪಾಲ್ ಹೈವೇಯಲ್ಲಿ ಲೇಖಕ ಶ್ರೀನಿವಾಸ ಜೋಕಟ್ಟೆ



*ಭೋಪಾಲ್ ರೈಲ್ವೆ ಸ್ಟೇಷನ್ (ಬೆಳಗ್ಗಿನ 7 ಗಂಟೆಯ ಚಿತ್ರ)*

ಆದಾಗಿತ್ತು. ಸುಮಾರು ಐನೂರು ಆರುನೂರು ಕಾರ್ಯಕರ್ತರು ಅನಿರೀಕ್ಷಿತವಾಗಿ ಸ್ಲೀಪರ್ ಮತ್ತು ಏಸಿ ಕೋಚ್‌ನಲ್ಲಿ ಕೂತಿದ್ದ ಪ್ರಯಾಣಿಕರನ್ನು ಕೆಳಗಿಳಿಸಿ ತಾವು ಕೂತುಬಿಟ್ಟರು. ಪ್ರತಿಭಟಿಸಿದವರನ್ನು ಕೆಳಗೆ ನೂಕಿದರು. ಇತ್ತ ಪ್ರಯಾಣಿಕರು ಪೊಲೀಸರನ್ನು ಹುಡುಕಿದರೆ ಅಲ್ಲಿದ್ದುದು ಕೇವಲ ನಾಲ್ಕೈದು ಪೊಲೀಸರು ಮಾತ್ರ! ರೈಲಿನ ಸಮಯಕ್ಕೆ ಸರಿಯಾಗಿ ಅದು ಹೊರಟಿತು. ರಿಸರ್ವೇಶನ್‌ನ ಪ್ರಯಾಣಿಕರಿಗೆ ಅವರ ಹಣ ಹಿಂದಿರುಗಿಸಲಾಯಿತು. ''ಹೀಗೆ ಮಾಡಿದರೆ ಭಾಜಪಕ್ಕೆ ಓಟು ನೀಡುವುದಾದರೂ ಯಾಕೆ!'' ಎಂದು ಭಾಜಪ ಜನಗಳೇ ಕೈಕೈ ಹಿಚುಕಬೇಕಾಯಿತು. (ಬಹುಶಃ ಗೋಧ್ರಾದಲ್ಲೂ ಪೊಲೀಸರು ಭಯಪಡಲು 'ತಾವು ಅಲ್ಪಸಂಖ್ಯಾತರು ಆ ಕ್ಷಣಕ್ಕೆ' ಎಂದು ಅನಿಸಿದ್ದಿರಬಹುದೇ?)

**೧೮ ವರ್ಷಗಳ ನಂತರವೂ ಉಳಿದುಕೊಂಡ ಪ್ರಶ್ನೆಗಳು**

ಹದಿನೆಂಟು ವರ್ಷಗಳ ಹಿಂದೆ ಸಂಭವಿಸಿದ ಭೋಪಾಲ್ ಗ್ಯಾಸ್ ದುರಂತವನ್ನು ಮರೆಯುವುದಾದರೂ ಹೇಗೆ? ಭೋಪಾಲ್ ರಸ್ತೆಗಳಲ್ಲಿ ಅಲ್ಲಲ್ಲಿ ಗೋಡೆ ಬರಹಗಳನ್ನು ಈ ಸಮಯ ಕಾಣಬಹುದು. ಗ್ಯಾಸ್ ದುರಂತ ಪೀಡಿತರಿಗೆ ನ್ಯಾಯ ಸಿಗಬೇಕೆನ್ನುವ ಆಶಯಗಳ ಅನೇಕ ಗೋಡೆ ಬರಹ, ಪೋಸ್ಟರ್‌ಗಳನ್ನು ನಾನು ಗಮನಿಸಿದೆ.

ಹೌದು, ೧೮ ವರ್ಷಗಳು ಕಳೆದುಹೋದರೂ ಪ್ರಪಂಚದ ಭೀಷಣವಾದ ಗ್ಯಾಸ್ ದುರಂತ ಪೀಡಿತರಿಗೆ ಸರಿಯಾದ ಆರ್ಥಿಕ, ಸಾಮಾಜಿಕ ಮರುವಸತಿಯನ್ನು ಒದಗಿಸಿಲ್ಲ, ಸಂತೋಷದಾಯಕ ಆರೋಗ್ಯ ಸೌಲಭ್ಯಗಳೂ ಉಪಲಬ್ಧವಿಲ್ಲ. ಡಿಸೆಂಬರ್ ೨ ಮತ್ತು ೩ರ (೧೯೮೪) ರಾತ್ರಿಗೆ ಸಂಭವಿಸಿದ ಈ ಭೋಪಾಲ್ ಗ್ಯಾಸ್ ದುರಂತ ಪೀಡಿತರ ಸಮಸ್ಯೆ ಇಂದಿಗೂ ಹಾಗೆಯೇ ಉಳಿದುಕೊಂಡಿದೆ.

ಇನ್ನೊಂದು ಚೋದ್ಯ ಎಂದರೆ ಈ ಚಿಂತಾಜನಕ ಸಂಗತಿಯ ನಡುವೆಯೂ ಭೋಪಾಲ್ ಗ್ಯಾಸ್ ದುರಂತಕ್ಕೆ ಜವಾಬ್ದಾರಿ ಆಗಿರುವ ಅಮೇರಿಕ ಕಂಪೆನಿ ಯೂನಿಯನ್ ಕಾರ್ಬೈಡ್‌ನ ಸ್ಥಳೀಯ ಕಾರ್ಖಾನೆಯಲ್ಲಿ ಈಗಲೂ ಸುಮಾರು ಎಂಟು ಸಾವಿರ ಟನ್ ವಿಷಯುಕ್ತ ರಾಸಾಯನಿಕ ಸಂಗ್ರಹವನ್ನು ಕಾಣಬಹುದು. ೧೯೮೪ರ ಘಟನೆಯು ಮತ್ತೆ ಪುನರಾವರ್ತನೆ ಆಗದಂತೆ ಈ ವಿಷಯುಕ್ತ ರಾಸಾಯನಿಕ ಸಂಗ್ರಹವನ್ನು ಅಲ್ಲಿಂದ ಸ್ಥಳಾಂತರಿಸುವ ಅಥವಾ ನಷ್ಟಗೊಳಿಸುವ ಯೋಜನೆ ಅತ್ಯಂತ ಅಗತ್ಯವಿದೆ. ಸಾವಿರಾರು ಜನ ಇಂದಿಗೂ ತಮ್ಮ ಆರೋಗ್ಯ ಕಳಕೊಂಡು ಒದ್ದಾಟ ನಡೆಸುತ್ತಿದ್ದಾರೆ.

ಭೋಪಾಲ್‌ನ ಮುಖ್ಯ ನ್ಯಾಯಾಂಗ ದಂಡಾಧಿಕಾರಿಯ ನ್ಯಾಯಾಲಯದಲ್ಲಿ ಈ ಘಟನೆಗೆ ಸಂಬಂಧಿಸಿ ನಡೆಯುತ್ತಿರುವ ಅಪರಾಧ ಘಟನೆಗಳ ನಿಧಾನಗತಿಯ ವಿಚಾರಣೆಯಿಂದಾಗಿ ಗ್ಯಾಸ್ ಪೀಡಿತರ ನಡುವೆ ಸ್ವಇಚ್ಛೆಯಿಂದ ಕೆಲಸ ಮಾಡುವ ಸಂಘಟನೆಗಳೂ ಬೇಸರಗೊಂಡಿವೆ. ಸದ್ಯದ ಸ್ಥಿತಿಯಲ್ಲಿ ನ್ಯಾಯ ಸಿಗುವುದು ಬಹುದೂರದ ಮಾತು ಎಂದು ಇವರು ಪ್ರತಿಕ್ರಯಿಸುತ್ತಿದ್ದಾರೆ. ಇನ್ನೊಂದೆಡೆ ಅಂತರ್ರಾಷ್ಟ್ರೀಯ ಪರಿಸರವಾದಿ ಸಂಘಟನೆ 'ಗ್ರೀನ್ ಪೀಸ್' ಕಾರ್ಯಕರ್ತರಿಗೂ ರಾಜ್ಯ ಸರಕಾರಕ್ಕೂ ವಿವಾದವೂ ಹುಟ್ಟಿಕೊಂಡಿದೆ. ''ಭೋಪಾಲ್ ಗ್ಯಾಸ್ ಪೀಡಿತ ಮಹಿಳಾ ಉದ್ಯೋಗ ಸಂಘಟನೆ''ಯ ಸಂಯೋಜಕ ಅಬ್ದುಲ್ ಜಬ್ಬಾರ್ ಅವರನ್ನು ಈ ಬಗ್ಗೆ ಪ್ರತಿಕ್ರಿಯೆ ಕೇಳಿದರೆ – ''ಗ್ಯಾಸ್ ಪೀಡಿತ ಜನರು ಕೇಂದ್ರ ಮತ್ತು ರಾಜ್ಯ ಸರಕಾರದ ಉಪೇಕ್ಷೆಯ ನಡುವೆ ತ್ರಿಶಂಕು ಸ್ಥಿತಿ ಅನುಭವಿಸುತ್ತಿದ್ದಾರೆ'' ಎನ್ನುತ್ತಾರೆ. ಭೋಪಾಲ್ ಗ್ಯಾಸ್ ದುರಂತದಲ್ಲಿ ಸಂಕಟಕ್ಕೆ ಒಳಗಾದ ಜನರ ಆರೋಗ್ಯ ಸುಧಾರಣೆಗಾಗಿ ಈ ತನಕ ಮುನ್ನೂರು ಕೋಟಿ ರೂಪಾಯಿ ವ್ಯಯ ಮಾಡಿದರೂ ಪರಿಸ್ಥಿತಿಯಲ್ಲಿ ಯಾವುದೇ ಉಲ್ಲೇಖಪೂರ್ಣ ಪರಿಣಾಮ ಕಂಡುಬಂದಿಲ್ಲವಂತೆ.

**ಸಮಾಜಕಂಟಕ ಶಕ್ತಿಗಳ ಅಡಗುತಾಣ : ಭೋಪಾಲ್**

ಭಾರತದಲ್ಲಿ ನಕಲಿ ಪಾಸ್‌ಪೋರ್ಟ್ ನೀಡುವ ಪ್ರಕರಣಗಳಲ್ಲಿ ಭೋಪಾಲ್ ಎತ್ತಿದ ಕೈ. ಭಾರತ ಸರಕಾರಕ್ಕೆ ಬೇಕಾಗಿರುವ (ಪೋರ್ಚುಗಲ್‌ನಲ್ಲಿ ಸಿಕ್ಕಿಬಿದ್ದ) ಅಬೂಸಲೀಂ ಮತ್ತು ಆತನ ಪ್ರೇಯಸಿ ಮೋನಿಕಾ ಬೇಡಿಗೆ ನಕಲಿ ಪಾಸ್‌ಪೋರ್ಟ್ ಮಾಡಿಸಿಕೊಟ್ಟದ್ದು ಭೋಪಾಲ್‌ನಿಂದಲೇ. ಭಾರತದಲ್ಲೇ ಅತೀ ಹೆಚ್ಚು ಅಫೀಮು ಗಿಡ ಬೆಳೆಯುವ ಮೂರು ಜಿಲ್ಲೆಗಳು ಇರುವುದು ಮಧ್ಯಪ್ರದೇಶದಲ್ಲೇ! ಪಾಕಿಸ್ತಾನದ ಗುಪ್ತಚರ ಏಜನ್ಸಿ ಐ.ಎಸ್.ಐ.ನ ರ್‍ಯಾಕೆಟ್ ಈ ರಾಜ್ಯದಲ್ಲಿ ಹಲವೆಡೆ ಸಕ್ರಿಯ ಚಟುವಟಿಕೆಗಳನ್ನು ಕಾಣಿಸುತ್ತಿದೆ.

ಕಳೆದ ೨೦೦೨ರ ಸೆಪ್ಟಂಬರ್‌ನಲ್ಲಿ ಭಾರತೀಯ ಸೈನ್ಯದ ಕೆಲವು ಗುಪ್ತ ಮಾಹಿತಿಗಳನ್ನು ಐ.ಎಸ್.ಐ.ಗೆ ರವಾನಿಸಿದಾಗ ಸಿಕ್ಕಿಬಿದ್ದಿದ್ದ ಮಾಜಿ ಸೈನ್ಯಾಧಿಕಾರಿ ಪೌರಾಣಿಕ್‌ರಾಮ್ ಶುಕ್ಲಾ ಬಳಿ ಬಾಂಗ್ಲಾದೇಶದ ಢಾಕಾದಲ್ಲಿರುವ ಪಾಕಿಸ್ತಾನಿ ರಾಯಭಾರಿ ಕಾರ್ಯಾಲಯದ ಫ್ಯಾಕ್ಸ್ ಕೂಡಾ ಪೊಲೀಸರಿಗೆ ದೊರೆತಿತ್ತು. ಪೊಲೀಸರಿಗೆ ಪೌರಾಣಿಕ್‌ರಾಮ್ ಶುಕ್ಲಾ ಬಳಿ ೪೦ ಸಾವಿರ ರೂಪಾಯಿ ನಗದು, ಮೊಬೈಲ್ ಫೋನ್, ಮತ್ತು ಕಟ್‌ನಿಯ 'ಆರ್ಡಿನೆನ್ಸ್ ಫ್ಯಾಕ್ಟರಿ'ಯ ವಿಭಿನ್ನ ಮಗ್ಗಲುಗಳ ಛಾಯಾಚಿತ್ರ ದೊರೆತಿತ್ತು. ಆತನನ್ನು ಕಟ್‌ನಿಯಲ್ಲಿ ಬಂಧಿಸಲಾಗಿತ್ತು. ಆವಾಗ ಆತ ಢಾಕಾಕ್ಕೆ ಫೋನ್ ಮಾಡುತ್ತಿದ್ದನು.

ಮುಂಬಯಿಯ ಅನೇಕ ಅಪರಾಧಿಗಳು ಮೊದಲಿಗೆ ಪರಾರಿ ಆಗುವುದು ಭೋಪಾಲ್‌ಗೇ. ಕಳೆದ ೨೦೦೨ರ ಜನವರಿಯಿಂದ ಡಿಸೆಂಬರ್ ತನಕ ಮಧ್ಯಪ್ರದೇಶದ ಅಪರಾಧ ಚಟುವಟಿಕೆಗಳ ಅಂಕಿಅಂಶ ಗಮನಿಸಿದರೆ – ಪೊಲೀಸರ ಪಕ್ಷ ದುರ್ಬಲ ಸಾಕ್ಷಿ ಆಧಾರಗಳನ್ನು ಕಾಣಿಸಿದ್ದರಿಂದ ಬಿಡುಗಡೆ ಹೊಂದಿದ ಅಪರಾಧಿಗಳೇ ಜಾಸ್ತಿ ಇದ್ದಾರೆ. ಕಳೆದ ವರ್ಷ ರಾಜಧಾನಿ ಭೋಪಾಲ್‌ನಲ್ಲಿ ನಕಲಿ ಪಾಸ್‌ಪೋರ್ಟ್ ಕಾಂಡ ಸಹಿತ ವರ್ಷದಲ್ಲಿ ಜರುಗಿದ ಗಂಭೀರ ಅಪರಾಧಗಳಲ್ಲಿ ಎರಡು ಡಜನ್ ಅಪರಾಧಗಳನ್ನು ತನಿಖೆ ಗೈಯುವಲ್ಲಿ ಪೊಲೀಸರು ಸೋತಿದ್ದಾರೆ. ಡಿಸೆಂಬರ್ ಕೊನೆಗೆ ರೈಲ್ವೆ ಸ್ಟೇಷನ್‌ನಲ್ಲಿ ಬಾಂಬ್ ಸಿಕ್ಕಿದಾಗ ಪೊಲೀಸರು ವಿಫಲರಾಗಿದ್ದಾರೆ ಎನ್ನುವುದಕ್ಕೆ ಮತ್ತೆ ಸಾಕ್ಷಿ ಎನಿಸಿತು.

ಈ ನಡುವೆ ವಿಧಾನಸಭೆಯ ಮುಂದಿನ ಚುನಾವಣೆಯನ್ನು ಗಮನದಲ್ಲಿರಿಸಿ ಮಧ್ಯ ಪ್ರದೇಶ ಪೊಲೀಸ್ ಇಲಾಖೆಯ ಇಂಟೆಲಿಜೆನ್ಸ್ ಶಾಖೆಯು ರಾಜ್ಯದಲ್ಲಿ ಮತದಾರರ 'ಮೂಡ್' ಪತ್ತೆ ಹಚ್ಚಲು ವಿಶೇಷ ಅಭಿಯಾನ ಶುರುಮಾಡಿದೆ. ಮೊದಲು 'ಇಲೆಕ್ಷನ್ ಇಂಟೆಲಿಜೆನ್ಸ್ ರಿಪೋರ್ಟ್' ತಯಾರಿಸಲು ಮುಂದಾಗಿದೆ. ಮೇ ತಿಂಗಳಲ್ಲಿ ಎರಡನೇ ರಿಪೋರ್ಟ್‌ನ ಕೆಲಸ ಶುರುವಾಗಲಿದೆ.

ಅತ್ತ ಹೊಸ ಜೈಲ್ ಮಹಾನಿರೀಕ್ಷಕ ರಾಜೇಂದ್ರ ಚತುರ್ವೇದಿ ಅವರು ಖೈದಿಗಳನ್ನು ನ್ಯಾಯಾಲಯದಲ್ಲಿ ಹಾಜರುಪಡಿಸುವ ಸಂದರ್ಭದಲ್ಲಿ ಪರಾರಿಯಾಗುವ ಘಟನೆಗಳನ್ನು ನಿಯಂತ್ರಿಸಲು ವಿಡಿಯೋ ಕಾನ್ಫ್ರೆನ್ಸಿಂಗ್ ಸಿಸ್ಟಮ್‌ನಿಂದಲೇ ಹಾಜರುಪಡಿಸುವ ಯೋಜನೆಗೆ ಇನ್ನುಮುಂದೆ ಆದ್ಯತೆ ನೀಡಲಾಗುವುದು ಎಂದಿದ್ದಾರೆ. (ಸದ್ಯಕ್ಕೆ ಈ ಸಿಸ್ಟಮ್ ಆಂಧ್ರಪ್ರದೇಶ ಸಹಿತ ಕೆಲವಷ್ಟೇ ರಾಜ್ಯಗಳಲ್ಲಿದೆ.)

**ಬಂದೂಕು ಖರೀದಿಸಬೇಕಾದರೆ ರಾಷ್ಟ್ರೀಯ ಉಳಿತಾಯ ಪತ್ರ ಖರೀದಿ ಅವಶ್ಯ!**

ನಿಮ್ಮ ಹೆಗಲಿಗೆ ಬಂದೂಕು ನೇತುಹಾಕುವ ಶೋಕಿ ನಿಮಗೆ ಉಂಟಾಗಿದೆಯೇ? ಲೈಸನ್ಸ್ ಮಾಡಿಸಿಕೊಳ್ಳುವ ನಿಯಮಗಳಿಗೆ ನೀವು ಬದ್ಧರಾಗಿರಬೇಕು ಮತ್ತು ಬಂದೂಕು ಖರೀದಿಸಲು ಹಣದ ವ್ಯವಸ್ಥೆ ನಿಮ್ಮಲ್ಲಿರಬೇಕು.. ಹಾಗಿದ್ದರೆ ಮಧ್ಯಪ್ರದೇಶದಲ್ಲಿ ನೀವು



ಭೋಪಾಲ್‌ನ ಬರ್ಕತ್‌ವುಲ್ಲಾ ವಿಶ್ವವಿದ್ಯಾಲಯ ಪ್ರವೇಶ ದ್ವಾರ

ಬಂದೂಕು ಹೆಗಲಿಗೆ ನೇತು ಹಾಕಿಕೊಳ್ಳಬಹುದಿತ್ತು.

ಗ್ವಾಲಿಯರ್‌ನಲ್ಲಿ ಈಗ ಇವೆಲ್ಲದರ ಜೊತೆಗೆ ಇನ್ನೂ ಒಂದು ಹೊಸ ಶರತ್ತು ವಿಧಿಸಲಾಗಿದೆ. ನಿಮ್ಮ ಜೇಬಲ್ಲಿ ರಾಷ್ಟ್ರೀಯ ಉಳಿತಾಯ ಪತ್ರ ಖರೀದಿಗಾಗಿ ೨೫ ಸಾವಿರ ರೂಪಾಯಿಯೂ ಇರಬೇಕು! ಉಳಿತಾಯ ಪತ್ರ ಖರೀದಿ ಮಾಡಲಿಲ್ಲ ಎಂದರೆ ಬಂದೂಕು ಖರೀದಿಸುವ ಸ್ವಪ್ನ ಪೂರ್ಣಗೊಳ್ಳುವುದಕ್ಕೆ ಕಷ್ಟವಿದೆ.

ಲೈಸನ್ಸ್ ಫಾರ್ಮ್‌ನಲ್ಲಿ ಇದರ ಬಗ್ಗೆ ಉಲ್ಲೇಖವಿಲ್ಲ ನಿಜ. ಸರಕಾರದ ಲೈಸನ್ಸ್ ನಿಯಮಗಳಲ್ಲೂ ಯಾವುದೇ ಪರಿವರ್ತನೆ ಮಾಡಿಲ್ಲ. ಈ ವ್ಯವಸ್ಥೆ 'ಸಣ್ಣ ಉಳಿತಾಯ ಯೋಜನೆ' ವೃದ್ಧಿಪಡಿಸಲು ಕೈಗೊಳ್ಳಲಾಗಿದೆಯಂತೆ. ಗ್ವಾಲಿಯರ್ ಜಿಲ್ಲೆಯ ಸಣ್ಣ ಉಳಿತಾಯದ ಲಕ್ಷ್ಯ ಇನ್ನೂರು ಕೋಟಿ ರೂಪಾಯಿ ಆಗಿದೆ. ಈ ಗುರಿಯನ್ನು ಜಿಲ್ಲಾಡಳಿತಕ್ಕೆ ಮಾರ್ಚ್ ೩೧, ೨೦೦೩ಕ್ಕೆ ಪೂರ್ತಿಗೊಳಿಸಬೇಕಿದೆ. ಸದ್ಯಕ್ಕೆ ಶೇ. ೬೦ ಲಕ್ಷ್ಯ ಪೂರೈಸಲು ಬಾಕಿ ಇದೆ. ಹಾಗಾಗಿ ಈ ನಿಯಮ ಜಿಲ್ಲೆಯಲ್ಲಿ ಜಾರಿಗೊಳಿಸಲಾಗಿದೆ.

ಮಧ್ಯಪ್ರದೇಶದಲ್ಲಿ ಈಗಲೂ ಡಕಾಯಿತರ ಹಾವಳಿ ಜೀವಂತವಿದೆ. ಒಂದು ಹಳ್ಳಿಗೆ ಡಕಾಯಿತರಿಬ್ಬರು ನುಗ್ಗಿದ ವರ್ತಮಾನ ತಿಳಿಯುತ್ತಲೇ ಆ ಡಕಾಯಿತರಿಗೆ ಹುಡುಗಿಯರ ಆಮಿಷ ತೋರಿಸಿದ ಊರಿನ ಕೆಲವು 'ಬುದ್ಧಿವಂತರು' ಉಪಾಯವಾಗಿ ಮನೆಯೊಂದಕ್ಕೆ ಕರೆದೊಯ್ದು ಅಲ್ಲಿ ಬಾಗಿಲು ಹಾಕಿ ಪೊಲೀಸರಿಗೆ ಸುದ್ದಿ ಮುಟ್ಟಿಸಿ ಬಂಧಿಸಿದ್ದೂ ನಾವಿರುವಾಗಲೇ ನಡೆದಿದೆ.

**'ದಲಿತ್ ಎಜೆಂಡಾ' ಮತ್ತು ಶಸ್ತ್ರಪ್ರೇಮ!**

ಮಧ್ಯಪ್ರದೇಶದಲ್ಲಿ 'ದಲಿತ್ ಎಜೆಂಡಾ' ಜಾರಿಗೆ ಬಂದ ನಂತರ ಈ ವರ್ಗದ ಜನರಲ್ಲಿ ಶಸ್ತ್ರ ಪ್ರೇಮವು ವೃದ್ಧಿಯಾಗುತ್ತಿದೆ. ಕಳೆದ ಒಂದೂವರೆ ವರ್ಷದ ಅವಧಿಯಲ್ಲಿ ಐನೂರಕ್ಕೂ ಹೆಚ್ಚಿನ ದಲಿತರಿಗೆ ಶಸ್ತ್ರ ಲೈಸನ್ಸ್ ನೀಡಲಾಗಿದೆ. ಇನ್ನೊಂದೆಡೆ ಊರಿನಲ್ಲಿ ಹೆಚ್ಚುತ್ತಿರುವ ಶಸ್ತ್ರಾಸ್ತ್ರಗಳ ಸಂಖ್ಯೆಯಿಂದ ಪೊಲೀಸ್ ವಲಯದಲ್ಲೂ ಚಿಂತೆಯು ತೀವ್ರ ಕಾಡಲಾರಂಭಿಸಿದೆ.

ಗ್ವಾಲಿಯರ್-ಚಂಬಲ್ ಪ್ರಾಂತ್ಯದಲ್ಲಿ ಸವರ್ಣೀಯರ ನಡುವೆ ಒಂದು ಆಡು ಮಾತು ಕಾಣಬಹುದಿತ್ತು – 'ಭೂಮಿ ಮಾರಾಟವಾದರೂ ಹೆಗಲಲ್ಲಿ ಬಂದೂಕು ಇರಬೇಕು'.

ಈಗ ಈ ಮಾತು ದಲಿತರಿಗೂ ಅನ್ವಯಿಸುತ್ತಿದೆ. ಈ ಪ್ರಾಂತ್ಯದ ದಲಿತರಲ್ಲಿ ಶಸ್ತ್ರಾಸ್ತ್ರ ಪ್ರೇಮ ವರ್ಧಿಸುತ್ತಿದೆ. ಸರಕಾರದ ಈ ನಿರ್ಣಯದಿಂದಾಗಿ ದಲಿತರಲ್ಲಿ ನಗುವಿನ ಮಂದಹಾಸ ಕಂಡುಬಂದರೆ ಪೊಲೀಸ್ ಅಧಿಕಾರಿಗಳ ಮುಖದಲ್ಲಿ ಬೆವರು ಇಳಿಯಲಾರಂಭಿಸಿದೆ. 'ದಲಿತ್ ಎಜೆಂಡಾ' ಜಾರಿಗೊಳಿಸಿದ ನಂತರ ೩೧ ಮೇ ೨೦೦೧ ರಿಂದ ನವಂಬರ್-೨೦೦೨ರ ತನಕ ರಾಜ್ಯದಲ್ಲಿ ೬೨೮ ದಲಿತರು ಶಸ್ತ್ರ ಲೈಸನ್ಸ್‌ಗೆ ಅರ್ಜಿ ನೀಡಿದ್ದರು. ಇವರಲ್ಲಿ ೫೬೦ ದಲಿತರಿಗೆ ಶಸ್ತ್ರ ಲೈಸನ್ಸ್ ನೀಡಲಾಗಿದೆ.

ಇನ್ನು ಕೆಲವರು ಹೇಳುವಂತೆ 'ದಲಿತ್ ಎಜೆಂಡಾ' ಮೂಲಕ ಪಾಕಿಸ್ತಾನ ಮತ್ತು ಅದರ ಗುಪ್ತಚರ ಏಜನ್ಸಿ ಐ.ಎಸ್.ಐ. ಭಾರತದಲ್ಲಿ ಒಂದು ಹೊಸ 'ವರ್ಗ-ಸಂಘರ್ಷ'ವನ್ನು ಎತ್ತಿ ಹಿಡಿಯುವ ಪ್ರಯತ್ನ ನಡೆಸುತ್ತಿದೆಯಂತೆ. 'ಖಲಿಸ್ತಾನ' ತರಹ ಒಂದು ಹೊಸ ಆಂದೋಲನವನ್ನು ಹುಟ್ಟುಹಾಕಿದರೂ ಆಶ್ಚರ್ಯಪಡಬೇಕಾಗಿಲ್ಲ. ಈ ದಲಿತರೇ ಮುಂದೆ ದಿಗ್ವಿಜಯ ಸಿಂಗ್ ಸರಕಾರವನ್ನು ಉರುಳಿಸಿಬಿಡಲೂಬಹುದು.

* * *

ಮಧ್ಯಪ್ರದೇಶದ ಹೊಸ ವಿಧಾನಸಭಾ ಭವನ (ಭೋಪಾಲ್) 'ವಾಸ್ತು ದೋಷ'ದಿಂದ ಕೂಡಿದೆ ಎನ್ನುವ ಚರ್ಚೆ ಆಗಾಗ ಕೇಳಿಬರುವುದಿದೆ. ಹೊಸ ವಿಧಾನಸಭಾ ಭವನದ ಅಧಿವೇಶನ ಶುರುವಾದ ನಂತರ ಕಳೆದ ಆರು ವರ್ಷಗಳಲ್ಲಿ ಒಂದು ಡಜನ್ನಿಗೂ ಹೆಚ್ಚಿನ ಶಾಸಕರು 'ಆಕಸ್ಮಿಕ' ಸಾವಿಗೆ ಒಳಗಾದನಂತರ ಇಂತಹ ಚರ್ಚೆ ಶುರುವಾಗಿತ್ತು. ಇದಲ್ಲದೆ ೧೫ ಶಾಸಕರು ಗಂಭೀರ ರೋಗಕ್ಕೆ ಒಳಗಾದರು ಎಂದು ಕಳೆದ ವರ್ಷದ ಸಮೀಕ್ಷೆಯೊಂದು ಹೇಳಿದ್ದಿದೆ. ವಿಖ್ಯಾತ ವಾಸ್ತುಕಾರ ಚಾರ್ಲ್ಸ್ ಕೊರಿಯಾ ಅವರು ಸುಮಾರು ೬೦ ಕೋಟಿ ರೂ. ವೆಚ್ಚದಲ್ಲಿ ಈ ವಿಶಾಲಭವನ ನಿರ್ಮಾಣ ಮಾಡಿದ್ದರು. ಆಶ್ಚರ್ಯದ ಮಾತೆಂದರೆ ಎರಡು ವರ್ಷದ ಹಿಂದೆ ವಾಸ್ತು ಶಾಂತಿ ಯಜ್ಞವೂ ಮಾಡಲಾಗಿತ್ತು. ಈ ಹೊಸ ಭವನದಲ್ಲಿ ಅಧಿವೇಶನವು ೫, ಆಗಸ್ಟ್ ೧೯೯೬ ರಿಂದ ಶುರುವಾಗಿತ್ತು.

ಆಧುನಿಕ ಯುಗದಲ್ಲೂ ಈ ರೀತಿಯ ಸಾವನ್ನು ಭವನದ ಜೊತೆಗೆ ಜೋಡಿಸುವುದು ಅಂಧ ವಿಶ್ವಾಸವಲ್ಲದೆ ಮತ್ತೇನು?

ಮಧ್ಯಪ್ರದೇಶದ ಕಟ್‌ನಿ ಜಿಲ್ಲೆ ದೇಶದಲ್ಲೇ ಪ್ರಥಮ ಶಿಖಂಡಿ ಶಾಸಕರಾದ ಶಬ್ನಮ್ ಮೌಸಿಯನ್ನು ನೀಡಿ ಸುದ್ದಿ ಮಾಡಿದೆ.

ಭೋಪಾಲ್ ನಂತರ ನಮ್ಮ ಮುಂದಿನ ಪ್ರಯಾಣ ಪಚ್‌ಮರಿ, ಜಬಲ್ಪುರ, ಖಜುರಾಹೋ, ಝೂನ್ಸಿ ಕಡೆ ಸಾಗಿತು.

*(ನನ್ನ ಜೊತೆ ಪ್ರಯಾಣದಲ್ಲಿ ಸಹಕರಿಸಿದ ಆರ್. ಎಸ್. ದೇವಾಡಿಗ ಮತ್ತು ಕೈಲಾಜೆ ಅವರಿಗೆ ಲೇಖಕನ ಕೃತಜ್ಞತೆಗಳು.)*

**ಶ್ರೀನಿವಾಸ ಜೋಕಟ್ಟೆ**
ಪೋಸ್ಟ್-ಜೋಕಟ್ಟೆ, ವಯಾ-ಬಾಜ್ಪೆ, ಮಂಗಳೂರು ತಾಲ್ಲೂಕು
ದಕ್ಷಿಣ ಕನ್ನಡ-೫೭೪ ೧೬೩



# ಕಾಫಿ ಕಣಿವೆಯಲ್ಲಿ ತಲ್ಲಣ

ಐ. ಆರ್. ಪ್ರಮೋದ್

**ಕೊ**ಡಗು ಜಿಲ್ಲೆಯನ್ನು 'ಕಾಫಿ ನಾಡು' ಎಂದು ವರ್ಣಿಸುವುದು,–

ಕಾಫಿಯಿದ್ದರೆ ಕೊಡಗು – ಕಾಫಿಯಿಲ್ಲದಿದ್ದರೆ ಕೊಡಗಿಲ್ಲ, ಎಂಬೆಲ್ಲ ಘೋಷಣೆಗಳು ಅರ್ಧ ಸತ್ಯದ ಹೇಳಿಕೆಗಳು.

ಏಕೆಂದರೆ ಕೊಡಗಿನ ಚರಿತ್ರೆಯಲ್ಲಿ ಕಾಫಿ ಬೆಳೆಯಲು ಪ್ರಾರಂಭವಾದದ್ದೇ ಬ್ರಿಟಿಷ್ ಆಳ್ವಿಕೆಯ ನಂತರ – ೧೮೩೪ರ ಬಳಿಕ. ಆದರ ಮೊದಲೇ ಕೊಡಗಿನಲ್ಲಿ ಜನಜೀವನವಿತ್ತು, ಸಮಾಜ ವ್ಯವಸ್ಥೆ ಇತ್ತು. ಕಾಫಿಯಿಲ್ಲದಿದ್ದರೂ ಕೊಡಗು ಇತ್ತು. ಕ್ರಮೇಣ ಕೊಡಗಿನಲ್ಲಿ ಕಾಫಿಯ ಉತ್ಪಾದನೆ ಹೆಚ್ಚುತ್ತಲೇ ಹೋಯಿತು. ಇವತ್ತು ಕೊಡಗಿನ ಆರ್ಥಿಕತೆ ಕಾಫಿಯನ್ನೇ ಎಷ್ಟು ಅವಲಂಬಿಸಿದೆಯೆಂದರೆ ಈ ಜಿಲ್ಲೆಯನ್ನು ಕಾಫಿ ಕಣಿವೆ ಎಂದು ಕರೆದರೆ ಅತಿಶಯೋಕ್ತಿಯಾಗಲಾರದು.

೧೯೯೦ರ ದಶಕದಲ್ಲಿ ಈ ದೇಶದಲ್ಲಿ ಉದ್ಘಾಟನೆಗೊಂಡ ಜಾಗತೀಕರಣ ಉದಾರೀಕರಣ ಆರ್ಥಿಕ ನೀತಿಗಳಿಂದಾಗಿ ಕಾಫಿ ಮಂಡಳಿಯ ಅಧೀನದಲ್ಲಿದ್ದ ಕಾಫಿ ವ್ಯಾಪಾರವನ್ನು ಮುಕ್ತಗೊಳಿಸಬೇಕೆಂಬ ಒತ್ತಡ ಎಷ್ಟು ತೀವ್ರವಾಯಿತೆಂದರೆ ಕೊನೆಯಲ್ಲಿ ಕೇಂದ್ರ ಸರ್ಕಾರ ಕಾಫಿ ವಹಿವಾಟಿನ ಮೇಲೆ ಕಾಫಿ ಮಂಡಳಿಗಿದ್ದ ಏಕಸ್ವಾಮ್ಯವನ್ನು ರದ್ದುಗೊಳಿಸಿತು. ಮುಕ್ತ ಮಾರುಕಟ್ಟೆಯ ಹೆಬ್ಬಾಗಿಲು ತೆರೆದುಕೊಂಡಿತು. 'ಕದಳಿಯೊಳು ಮದದಾನೆ ಹೊಕ್ಕಂದದಲಿ' ವ್ಯಾಪಾರಿಗಳು ಮಾರುಕಟ್ಟೆಯೊಳಗೆ ನುಗ್ಗತೊಡಗಿದರು.

ಕಾಫಿಯ ಬೆಲೆ ಏರತೊಡಗಿತು. ಐವತ್ತು ಕಿಲೋ ರೊಬಸ್ಟಾ ಕಾಫಿ ಚೀಲವೊಂದಕ್ಕೆ ಐದು ನೂರು ರೂಪಾಯಿ ಇದ್ದದ್ದು ಒಂದೂವರೆ ಸಾವಿರಕ್ಕೆ ಏರಿ ಕೊನೆಗೆ ಎರಡೂವರೆ ಸಾವಿರಕ್ಕೆ ತಲುಪಿತು. ಇದೇ ಪ್ರಮಾಣದ ಅರೆಬಿಕಾ ಕಾಫಿ ಚೀಲವೊಂದಕ್ಕೆ ಅಂದಾಜು ನಾಲ್ಕೂವರೆ ಸಾವಿರ ರೂಪಾಯಿ ತಲುಪಿತು. ೧೯೯೫-೯೬ರ ಅವಧಿಯಲ್ಲಿ ಈ ಬೆಲೆಗಳು ಗರಿಷ್ಠ ಮಟ್ಟವನ್ನು ತಲುಪಿದವು.

ಅನಿರೀಕ್ಷಿತವಾಗಿ ಒಮ್ಮಿಂದೊಮ್ಮೆ ಕೈ ತುಂಬ ಹಣ ಸಂಪಾದಿಸಿದ ಕಾಫಿ ಬೆಳೆಗಾರ ಸಹಜವಾಗಿಯೇ ಸಂತಸದಿಂದ ಸಂಭ್ರಮಿಸಿದ. ಆತನ ಜೀವನ ಶೈಲಿಯಲ್ಲಿ ಬದಲಾವಣೆಯಾಗತೊಡಗಿತು. ಹಳೆಯ ಮನೆಗಳ ಬದಲಿಗೆ ಹೊಸ ಬಂಗಲೆಗಳು ತಲೆಯೆತ್ತಿದವು.

ಕೊಡಗಿನ ರಸ್ತೆಗಳಲ್ಲಿ ಎಸ್ಟೀಮ್, ಕಾಂಟೆಸ್ಸಾ, ಸಿಯೆಲ್ಲೋ, ಎಸ್ಕಾರ್ಟ್, ಲ್ಯಾನ್ಸರ್ ಕಾರುಗಳು ಓಡಾಡತೊಡಗಿದವು.

ಮೂವತ್ತು ಲಕ್ಷ ರೂಪಾಯಿಯ ಮರ್ಸಿಡಿಸ್ ಕಂಪೆನಿಯ ಕಾರುಗಳು ಕೂಡ ಅಡ್ಡಾಡತೊಡಗಿದವು.

ಒಂದು ಲೆಕ್ಕಾಚಾರದಂತೆ ಈ ಅವಧಿಯಲ್ಲಿ ಜಿಲ್ಲಾ ಮಟ್ಟದಲ್ಲಿ ನೋಂದಣಿಯಾದ ಖಾಸಗಿ ವಾಹನಗಳ ತಲಾವಾರು ಸಂಖ್ಯೆಯಲ್ಲಿ ಕೊಡಗು ಜಿಲ್ಲೆ, ರಾಜ್ಯದಲ್ಲಿಯೇ ಮೊದಲ ಸ್ಥಾನದಲ್ಲಿತ್ತು. ಜಗತ್ತಿನ ಅತ್ಯಂತ ಸಿರಿವಂತ ಬಂಡವಾಳಗಾರ ಫೋರ್ಡ್ ಕಂಪೆನಿಯು ತನ್ನ ಮಾಡೆಲ್ ಒಂದಕ್ಕೆ ಫೋರ್ಡ್ – ಕಾವೇರಿ ಎಂದು ಹೆಸರಿಟ್ಟಿದ್ದು ಈ ಜಿಲ್ಲೆಯ ಹೊಸ ಪರಿಸ್ಥಿತಿಗೆ ಹಿಡಿದ ಕನ್ನಡಿಯಾಗಿತ್ತು.

ಸಿರಿಯ ಗರ ಬಡಿದ ಬೆಳೆಗಾರ ತಲೆ ಕ್ಷೌರಕ್ಕೂ ಮೈಸೂರಿಗೆ-ಬೆಂಗಳೂರಿಗೆ ಧಾವಿಸತೊಡಗಿದ. ಹಂಪೆಯೋ ಕಲ್ಕತ್ತವೋ ಎಲ್ಲಿದೆ ಎಂಬ ಭೂಗೋಳದ ಪ್ರಾಥಮಿಕ ಜ್ಞಾನವೂ ಇಲ್ಲದ ಹಲವು ಬೆಳೆಗಾರರು ಈಗ ಬ್ರೆಜಿಲ್ ದೇಶದ ಕಾಫಿ ಉತ್ಪಾದನೆಯ ಬಗ್ಗೆ, ಲಂಡನ್ನಿನ ಮಾರುಕಟ್ಟೆಯಲ್ಲಿ ಕಾಫಿ ದರದ ಬಗ್ಗೆ, ಬೊಗಳೆ ಹೊಡೆಯತೊಡಗಿದರು. ನಾಲ್ಕೈದು ವರ್ಷ ಹೀಗೆ ಹುಚ್ಚೆದ್ದು ಹರಿದ ಸಿರಿಯ ಅಬ್ಬರದಲ್ಲಿ ಕೊಡಗಿನ ವಾತಾವರಣವೇ ಬದಲಾಯಿತು. ಮುಕ್ತ ಮಾರುಕಟ್ಟೆ ಹೊಸ ವೈಖರಿಯ ವ್ಯಾಪಾರ ವಹಿವಾಟನ್ನು ಜಾರಿಗೆ ತಂದಿತು.

ನಮ್ಮ ಕಿರಾಣಿ ಅಂಗಡಿಯ ವ್ಯಾಪಾರಿಯಾದರೋ ಹಳೆ ಕಟ್ಟಡದ ಮೂಲೆಯಲ್ಲಿ ತಕ್ಕಡಿ ಹಿಡಿದು ವ್ಯಾಪಾರ ನಡೆಸುತ್ತಿದ್ದ, ಆದರೆ, ಈಗ ಅತ್ಯಾಧುನಿಕ ಜೀವನ ಶೈಲಿಯ ಪಟಪಟನೆ ಇಂಗ್ಲಿಷ್‌ನಲ್ಲಿ ವ್ಯವಹರಿಸುವ, ತಮ್ಮ ಸುಸಜ್ಜಿತ ಕಛೇರಿಯ ತಿರುಗು ಕುರ್ಚಿಯಲ್ಲಿ ಕುಳಿತು ಕಂಪ್ಯೂಟರ್‌ನ ಕೀಲಿ ಮಣೆಯ ಮೇಲೆ ಚಕಚಕನೆ ಬೆರಳೊತ್ತಿ ಕಾಫಿಯ ಅಂತಾರಾಷ್ಟ್ರೀಯ ಮಾರುಕಟ್ಟೆಯ ಕೇಂದ್ರವಾದ ಲಂಡನ್ನಿನ ಮಾರುಕಟ್ಟೆಯಲ್ಲಿ ಚಾಲ್ತಿಯಲ್ಲಿ ಇರುವ ಕಾಫಿ ದರವನ್ನು ಕ್ಷಣಾರ್ಧದಲ್ಲಿ ನಿಮ್ಮ ಮುಂದಿಡುವ ಯುವ ವ್ಯಾಪಾರಿಗಳ ಹಿಂಡೇ ತಲೆಯೆತ್ತಿತು.

ಬೆಳೆಗಾರರಿಂದ ಕಾಫಿ ಖರೀದಿಸಿ ಕಾಫಿ ಪುಡಿ ಮಾಡುವ ಸಂಸ್ಕರಣಾ ಘಟಕಗಳಿಗೆ ಅಥವಾ ರಫ್ತುದಾರರಿಗೆ ಸಗಟು ಮಾರಾಟ ಮಾಡುವುದೇ ಇವರ ವ್ಯವಹಾರ.

ಸದಾ ಮೊಬೈಲಿನಲ್ಲಿ ಮಾತನಾಡುವ, ಮಾರುತಿ, ಸಿಯಲ್ಲೊ ಕಾರಿನಲ್ಲಿ ಓಡಾಡುವ ಈ ವ್ಯಾಪಾರಿಗಳಲ್ಲಿ ಹಲವರು ಶ್ರೀಮಂತ ಪ್ಲಾಂಟರುಗಳ ಮಕ್ಕಳು.

ಕಾಫಿ ವ್ಯಾಪಾರದಲ್ಲಿ ಫಾರ್‌ವರ್ಡ್ ಟ್ರೇಡಿಂಗ್ ಎಂಬ ಹೊಸ ನಮೂನೆಯ ವ್ಯಾಪಾರ ಶುರುವಾಯಿತು. ಅಂದರೆ ಬೆಳೆಗಾರ ಮಾರಿದ ಕಾಫಿಗೆ ತಕ್ಷಣ ನಗದು ಪಾವತಿಸಲಿಲ್ಲ, ಬದಲಿಗೆ ಹಾಲಿ ಮಾರುಕಟ್ಟೆ ರೇಟಿಗಿಂತ ಹೆಚ್ಚಿನ ದರದಲ್ಲಿ ನಂತರದ ದಿನಾಂಕಗಳ ಚೆಕ್ಕನ್ನು ನೀಡಲು, ವ್ಯಾಪಾರಿ ಪ್ರಾರಂಭಿಸಿದ. ನಗದು ಹಣ ಬೇಕೆಂದರೆ ಬೆಳೆಗಾರನ ಮನೆ ಬಾಗಿಲಿಗೆ

ಬಂದು ನೋಟುಗಳು ತುಂಬಿದ ಗೋಣಿ ಚೀಲಗಳನ್ನು ಎಸೆದುಹೋದ.

ಸ್ವಾಭಾವಿಕವಾಗಿಯೇ ಬೆಳೆಗಾರ ಈ ಹೊಸ ವ್ಯಾಪಾರಿಯನ್ನು ನಂಬಿದ. ಇಷ್ಟರ ತನಕ ಕಾಫಿ ಮಂಡಳಿ ಸೂಕ್ತ ಬೆಲೆ ಕೊಡದೆ ತನ್ನನ್ನು ವಂಚಿಸಿದೆ ಎಂಬ ಭಾವನೆ ಬೆಳೆಗಾರರಲ್ಲಿ ಬಲಿಯಿತು. ಈ ಹೊಸ ಬೆಲೆಗಳನ್ನು ಕಂಡು ಹಿರಿಹಿರಿ ಹಿಗ್ಗಿದ ಬೆಳೆಗಾರ, ವ್ಯಾಪಾರಿ ನೀಡಿದ ಚೆಕ್ಕನ್ನು ಸ್ವೀಕರಿಸಿ ಸಂಭ್ರಮದಿಂದ ಅದನ್ನು ಕಣ್ಣಿಗೊತ್ತಿ, ಪ್ರಾರ್ಥಿಸಿ, ತನ್ನ ತಿಜೋರಿಯೊಳಗೆ ಭದ್ರವಾಗಿಟ್ಟು, ಬೀಗ ಹಾಕಿ, ಕನಸುಗಳನ್ನು ಹೆಣೆಯತೊಡಗಿದ.

ಈ ಆರ್ಭಟ, ರಭಸ, ಏನಿದ್ದರೂ ಐಶ್ವರ್ಯ ಬಂದಾಗ ಅರ್ಧರಾತ್ರಿಯಲ್ಲಿ ಕೊಡೆ ಹಿಡಿದ ಶ್ರೀಮಂತ ಬೆಳೆಗಾರರದ್ದು. ಸಣ್ಣ ಬೆಳೆಗಾರರಾದರೋ ಬೆಲೆ ಏರಿಕೆಯಿಂದ ಸ್ವಲ್ಪ ಚೇತರಿಸಿಕೊಂಡು ಉಸಿರಾಡ ತೊಡಗಿದರು.

ಆದರೆ, ಈ ಪರಿಸ್ಥಿತಿ ಹೆಚ್ಚು ದಿನ ಮುಂದುವರಿಯ ಲಿಲ್ಲ. ನಮ್ಮ ಕತೆಗಳಲ್ಲಿ ನಡೆಯುವಂತೆ ಅರ್ಧ ರಾಜ್ಯವನ್ನೂ, ರಾಜಕುಮಾರಿಯನ್ನೂ ಪಡೆದು ಸುಖ ವಾಗಿ ಆಳಿದ ರಾಜನ ಕತೆಯಂತೆ ಸುಖಾಂತ್ಯವಾಗಲಿಲ್ಲ.

ಕಾಫಿಯ ಬೆಲೆಗಳು ಇಳಿಯತೊಡಗಿದವು, ಜ್ವರ ಇಳಿದಂತೆ.

ಕಾಫಿಗೆ ಬೇಡಿಕೆ ಕಡಿಮೆಯಾಗತೊಡಗಿತು. ಗುಣಮಟ್ಟ ಕಳಪೆಯಾಗಿದೆ ಎಂದು ತಕರಾರು ತೆಗೆದು ಸಂಸ್ಕರಣ ಘಟಕದವರು ಕಾಫಿ ಖರೀದಿಸಲು ನಿರಾಕರಿಸಿದರು.

ಉದಾರೀಕರಣದ ಆರ್ಥಿಕ ದುಷ್ಪರಿಣಾಮಗಳ ಕರಾಳ ಛಾಯೆ ಮಾರುಕಟ್ಟೆಯನ್ನು ಕ್ರಮೇಣ ಆವರಿಸ ತೊಡಗಿತು. ಬಿಕ್ಕಟ್ಟಿನ ಬಿಸಿ ತಟ್ಟತೊಡಗಿದಂತೆ ವ್ಯಾಪಾರಿಯ ಹಾಗೂ ಬೆಳೆಗಾರನ ಕನಸುಗಳು ಕರಗ ತೊಡಗಿದವು. ಲಕ್ಷಗಟ್ಟಲೆ ರೂಪಾಯಿಯ ಲಾರಿ ಲೋಡುಗಳು ಮಾರಾಟವಾಗದೆ ಹಿಂತಿರುಗಿ ಬಂದಾಗ ಸಿಕ್ಕಿದ ಬೆಲೆಗೆ ಮಾರಾಟ ಮಾಡಬೇಕಾದ ಪರಿಸ್ಥಿತಿ ಯಿಂದ ತತ್ತರಿಸಿದ ವ್ಯಾಪಾರಿ. ಈ ಹೊಸ ತಳಿಯ ವ್ಯಾಪಾರಿಗಳಲ್ಲಿ ಹೆಚ್ಚಿನವರು ಯೌವನದ ಉತ್ಸಾಹವೇ ಬಂಡವಾಳವಾಗಿದ್ದ ಅನನುಭವಿಗಳು. ಅರ್ಥಶಾಸ್ತ್ರದ ಸರಳ ಲೆಕ್ಕಾಚಾರಗಳೂ ಗೊತ್ತಿಲ್ಲದ ಅಪ್ರಬುದ್ಧರು. ಬರುವ ಲಾಭಕ್ಕಿಂತ ದುಪ್ಪಟ್ಟು ದುಂದು ವೆಚ್ಚ ಮಾಡಿದ ಮೋಜುಗಾರರು. ವ್ಯಾಪಾರದ ಸೂಕ್ಷ್ಮವನ್ನು ಗ್ರಹಿಸದೆ ಚಲಾವಣೆಯಲ್ಲಿದ್ದ ದರಕ್ಕಿಂತ ಹೆಚ್ಚು ಪಾವತಿಸಲು ಒಪ್ಪಿಕೊಂಡ ಹುಂಬರು.

ವ್ಯಾಪಾರ ಕುಸಿಯತೊಡಗಿದಂತೆ ನಗದು ಹಣದ ಚಲಾವಣೆ ಕುಗ್ಗತೊಡಗಿತು. ಬೀಸುವ ದೊಣ್ಣೆಯಿಂದ ತಪ್ಪಿಸಿಕೊಳ್ಳಲು ನಗದು ಪಾವತಿಸುವ ಬದಲಿಗೆ ಹೆಚ್ಚು ಮೌಲ್ಯದ ಚೆಕ್ಕುಗಳನ್ನು ನೀಡುತ್ತಾ ಹೋದರು ಕೆಲವು ವ್ಯಾಪಾರಿಗಳು. ಆದರೆ, ಹೀಗೆ ಮನೆ ಬಾಗಿಲಲ್ಲಿ ಬಂದು ನಿಂತ ಹಸಿದ ತೋಳವನ್ನು ಎಷ್ಟು ದಿನ ತಡೆಯಲು ಸಾಧ್ಯ?

ಜೂಜನ್ನೇ ವ್ಯಾಪಾರ ಎಂದು ತಿಳಿದುಕೊಂಡ ಈ ಅವಿವೇಕಿ ವ್ಯಾಪಾರಿಗಳು ತಾವೇ ನೇಯ್ದ ಸಾಲದ ಬಲೆಯಲ್ಲಿ ಸಿಕ್ಕಿಕೊಂಡು ಒದ್ದಾಡತೊಡಗಿದರು. ದಿನ ಬೆಳಗಾಗುವುದರೊಳಗೆ ಒಬ್ಬೊಬ್ಬನೇ ವ್ಯಾಪಾರಿ ದಿವಾಳಿಯಾಗತೊಡಗಿದ. ಕೆಲವರು ತಲೆಮರೆಸಿ ಕೊಂಡು ಓಡಾಡತೊಡಗಿದರು. ಕೆಲವರು ದೇಶಾಂತರ ಹೋದರು. ಇನ್ನೂ ಕೆಲವರು ಆತ್ಮಹತ್ಯೆ ಮಾಡಿ ಕೊಂಡರು. ಇಂಥ ವ್ಯಾಪಾರಿಗಳ ಪೈಕಿ ಕೆಲವರ ಹೆಸರು – ಸುಖೇಶ್, ಸಂತೋಷ್, ವಿನೋದ, ಹರ್ಷ !

ಕನಸಿನಲ್ಲಿಯೇ ಹಣ ಎಣಿಸುತ್ತಿದ್ದ ಬೆಳೆಗಾರ ಈ ಮುಗ್ಗಟ್ಟಿನಿಂದ ಕಂಗಾಲಾದ. ಲಕ್ಷಾಂತರ ರೂಪಾಯಿಯ ಚೆಕ್ಕುಗಳು ಹಣವಿಲ್ಲವೆಂದು ವಾಪಸ್ಸಾದವು. ಸಿರಿವಂತಿಕೆ ಗುಂಗಿನಿಂದ ತಡವಾಗಿ ಎಚ್ಚೆತ್ತುಕೊಂಡ ಬೆಳೆಗಾರನ ದುಸ್ಥಿತಿ ಊರು ಕೊಳ್ಳೆ ಹೋದ ಮೇಲೆ ದಿಡ್ಡಿ ಬಾಗಿಲು ಹಾಕಿದಂತಾಯಿತು.

ಹತಾಶ ಬೆಳೆಗಾರರು ವ್ಯಾಪಾರಿಗಳ ಅಂಗಡಿಯ ಮುಂದೆ, ಮನೆಯ ಮುಂದೆ ಜಮಾಯಿಸಿ ಆಕ್ರೋಶ ದಿಂದ ಬಯ್ದರು, ಆರ್ಭಟಿಸಿದರು, ಬೀದಿ ರಂಪ ಮಾಡಿದರು, ಗೋಗರೆದರು, ಗೊಳೋ ಎಂದು ಅಳುತ್ತ ಕುಳಿತರು. ಪೊಲೀಸರಿಗೆ ಪುಕಾರು ಮಾಡಿದರು, ಕೋರ್ಟಿನ ಮೆಟ್ಟಿಲೇರಿದರು.

ಇನ್ನು ಹಲವರು ದಿಗ್ಭ್ರಮೆಯಿಂದ ಕಿಂಕರ್ತವ್ಯ ಮೂಢರಂತೆ ತಲೆಯ ಮೇಲೆ ಕೈಹೊತ್ತು ಕುಸಿದು ಕುಕ್ಕರಿಸಿದರು – ಅನಂತಮೂರ್ತಿಯವರ 'ಮೌನಿ' ಕತೆಯ ಕುಪ್ಪಣ್ಣ ಭಟ್ಟರಂತೆ.

ಕಾಫಿ ವ್ಯಾಪಾರ ಮಾಡಲು ಹೊರಟ ಕೊಡಗಿನ ಕಾಫಿ ಬೆಳೆಗಾರರ ಸಂಘದ ಪಾಡೂ ಇದಕ್ಕಿಂತ ಭಿನ್ನವಾಗಿರಲಿಲ್ಲ. ದೇಶದಲ್ಲಿಯೇ ಅತಿ ದೊಡ್ಡ ಸಹಕಾರಿ ಸಂಘಗಳಲ್ಲಿ ಒಂದೆಂದು ಹೆಸರು ಪಡೆದ ಕೊಡಗು ಕಾಫಿ ಬೆಳೆಗಾರರ ಸಂಘ, ಕಾಫಿ ಮಾರಾಟದ ವ್ಯಾಪಾರ ಮಾಡಲು ಹೋಗಿ ಕೈಸುಟ್ಟುಕೊಂಡಿತು. ಈಗ ಒಟ್ಟು ಹನ್ನೊಂದು ಕೋಟಿ ಸಾಲ ಬಾಕಿಯಿರುವ ಈ ಸಂಘ ತನ್ನ ಸದಸ್ಯರಿಗೆ ನಿರಖು ಠೇವಣಿ ವಾಪಾಸು ಕೊಡಲಾಗುವುದಿಲ್ಲ ಎಂದು ತೀರ್ಮಾನಿಸಿದೆ. ತನ್ನ ಕೆಲಸಗಾರರನ್ನು ಮನೆಗೆ ಕಳುಹಿಸಿ ಉಳಿದಿರುವ ಸ್ಥಿರಾಸ್ತಿಗಳನ್ನು ಮಾರಾಟ ಮಾಡಿ ಸಾಲ ತೀರಿಸಲು ತೀರ್ಮಾನಿಸಿದೆ. ಹುಣಸೂರಿನಲ್ಲಿ ಹೊಸ ಕಾಫಿ ಪುಡಿ ಘಟಕ ಸ್ಥಾಪಿಸಿ, ಜೀವ ಉಳಿಸಿಕೊಳ್ಳಲು ಹೆಣಗಾಡುತ್ತಿದೆ.

ದೊಡ್ಡ ಬೆಳೆಗಾರರು ಸೇರಿ ನಡೆಸಿದ ಕೋಮಾರ್ಕ್

## ಮತ್ತೆ ಬಾರದೇ... ವಸಂತದ ಹಾಗೆ

ನೆನ್ನೆ ಮೊನ್ನೆಯದೆಂಬ
ಹಸಿರು ಬಾಲ್ಯದ ತುಣುಕು
ಹೊಳೆ ಬದಿಯ ಜೊಂಡು
ಮಧ್ಯೆ ಕೇದಗೆ
ಎಂತ ಘಮ ಘಮ
ಪುಟ್ಟ ತೋಡಿನಲ್ಲಿ
ಸಾಗರದ ಬಯಕೆ
ಕೆನ್ನೀರು ತಿಳಿಯಾಗಿ
ಹೊಳೆವ ಕನ್ನಡಿಯಾಗಿ
ಮುಖದ ಬಿಂಬಕ್ಕೆ
ಮೈ ಮರೆತು ಬೀಗಿ
ನನ್ನೊಳಗೆ ನನ್ನದೇ
ಪ್ರತಿಬಿಂಬಕ್ಕೆ ಬೆಚ್ಚಿ ಬೆರಗಾಗಿ
ಮುಂಜಾವಿನ ಎಲೆತುದಿ
ಹೊಚ್ಚ ಹೊಸ ಮುತ್ತು
ಕಿವಿಯೋಲೆ ಜುಮುಕಿ
ಬಿರಿದು ನಿಂತ ಹೂವಿಗೂ
ಏನೋ ಬಿಗುಮಾನ



ಜೇಡ ನೈಯ್ದ ಬಲೆಯಲ್ಲಿ
ತಾನೇ ಯಜಮಾನ
ಕಿರಿದು ದಾರಿಯಲ್ಲಿ
ಹಿರಿದು ಬಯಕೆ
ಹೊತ್ತು ಸಾಗಿದೆ,
ವಸಂತದ ಮೆರವಣಿಗೆ
ದೂರ ಕೋಗಿಲೆ, ಕೂಗಿ ಕರೆದುದು ನನ್ನನೇ !
ಬೆಟ್ಟ ಹತ್ತಿಳಿವ
ಹರೆಯದ ಹುರುಪು
ಪ್ರತಿ ಬೆಳಗೂ ಏನೋ ಪುಳಕ
ಎಳೆ ಬಿಸಿಲಿಗೂ ಮೈಮನ ರೋಮಾಂಚನ
ಬದುಕು ಕಟ್ಟುವ ಧಾವಂತ
ಬರಡು ಯೌವ್ವನಕ್ಕೆ ಬಂದಿಹೆ
ತಿರುಗಿ ನೋಡಲು ತಿದಿಯೊತ್ತುವ ಬಾಲ್ಯ
ಉಯ್ಯಾಲೆಯ ನೆನಪು
ಮತ್ತೆ ಬಾರದೇ... ವಸಂತದ ಹಾಗೆ.

**ಹೇಮಾವತಿ ವೆಂಕಟ್**
ಸುಳ್ಯ ಅಂಚೆ - ೫೭೪ ೨೩೯, ದಕ್ಷಿಣ ಕನ್ನಡ ಜಿಲ್ಲೆ

ಎನ್ನುವ ಸಂಸ್ಥೆ ಕೂಡ ಯದ್ವಾ ತದ್ವಾ ಕಾಫಿ ಖರೀದಿಸಿ ನಷ್ಟ ಅನುಭವಿಸಿತು. ಗೊತ್ತು ಗುರಿಯಿಲ್ಲದೆ ಯಾರ್‍ಯಾರೋ ಬೆಳೆಗಾರರು, ವ್ಯಾಪಾರಿಗಳು ಲಾಭ ಮಾಡಿದರು. ಆದರೆ, ಬಿಕ್ಕಟ್ಟಿನಿಂದ ತತ್ತರಿಸಿದ ಈ ಸಂಸ್ಥೆ ಮಾತ್ರ ಮುಳುಗಿತು, ಟೈಟಾನಿಕ್ ಹಡಗಿನಂತೆ.

ಕಾಫಿ ತೋಟದ ಕೂಲಿಕಾರರೇ ಹೆಚ್ಚು ಗಿರಾಕಿಗಳಾಗಿರುವ ಪುಟ್ಟ ಪೇಟೆ ಸಿದ್ದಾಪುರ. ಇಲ್ಲಿ ಜನಸಾಮಾನ್ಯರ ಪಾಲಿಗೆ ಏಕೈಕ ಮನರಂಜನಾ ಕೇಂದ್ರವಾಗಿದ್ದ ಸಿನಿಮಾ ಥಿಯೇಟರೊಂದು ಮುಚ್ಚಿಕೊಂಡಿತು. ತಾಲೂಕು ಕೇಂದ್ರವಾದ ವಿರಾಜಪೇಟೆಯಲ್ಲಿ ಚಿನ್ನ ಬೆಳ್ಳಿ ಒಡವೆಗಳ ಮೇಲೆ ಸಾಲ ಕೊಡುವ ಹೊಸ ಗಿರವಿ ಅಂಗಡಿ ತಲೆ ಎತ್ತಿತು.

ಇವುಗಳೆರಡೂ ಪ್ರತ್ಯೇಕ ಸಂಗತಿಗಳಾದರೂ ಒಂದಕ್ಕೊಂದು ಸಂಬಂಧವಿದೆ.

ಒಂದು ಅಂದಾಜಿನಂತೆ ಕೊಡಗು ಜಿಲ್ಲೆಯಲ್ಲಿ ಕಳೆದ ಎರಡು ಮೂರು ವರ್ಷಗಳಲ್ಲಿ ಒಂದು ನೂರರಷ್ಟು ಬೆಳೆಗಾರರು, ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ.

ಆರ್ಥಿಕ ಬಿಕ್ಕಟ್ಟಿನಿಂದ ಜನರಲ್ಲಿ ಹುಟ್ಟಿಕೊಳ್ಳುವ ದುಗುಡ, ಆತಂಕ, ಹತಾಶೆ, ನೋವು ಇತ್ಯಾದಿ ಭಾವನೆಗಳು ವೈಯಕ್ತಿಕವಾಗಿ ಆಂತರಿಕವಾದ ಹೊರ ದಾರಿಗಳನ್ನು ಪಡೆಯುತ್ತವೆ.

ಈ ಐಹಿಕ ಬದುಕು ಸಿರಿಸಂಪತ್ತು ಇವುಗಳೆಲ್ಲ ನಶ್ವರ – ಈ ಬದುಕು ನೀರ ಮೇಲಿನ ಗುಳ್ಳೆಯಂತೆ ಎನ್ನುವ ಧಾರ್ಮಿಕ ಬೋಧನೆ ನೊಂದ ಮನಸುಗಳಿಗೆ ಸಾಂತ್ವನ ನೀಡುತ್ತದೆ. ಬರ್ಬರವೂ ಅಮಾನುಷವೂ ಆದ ಹೊರ ಜಗತ್ತನ್ನು ನಿರಾಕರಿಸಿ ಶಾಶ್ವತ ಶಾಂತಿ, ಸಂತೋಷ, ಸಮಾಧಾನದ ಭ್ರಮಾಧೀನ ಲೋಕವೊಂದನ್ನು ಕಟ್ಟಿಕೊಡುವ ಧಾರ್ಮಿಕ ನೀತಿಪಾಠ ಈ ಸಂದರ್ಭದಲ್ಲಿ ಆಪ್ತವಾಗುತ್ತದೆ. ವೈಯಕ್ತಿಕವಾಗಿ ಮತ್ತು ಸಾಮೂಹಿಕವಾಗಿ ಉತ್ಕಟವಾದ ಭಕ್ತಿಯಿಂದ ಪರವಶತೆಯಿಂದ ಆರಾಧಿಸುವ, ಪ್ರಾರ್ಥಿಸುವ ಪೂಜೆಗಳು, ಧ್ಯಾನಕೂಟಗಳು ಧರ್ಮ ಗ್ರಂಥಗಳ ಪಠಣ ಇತ್ಯಾದಿ ದೈವ ವಿಶ್ವಾಸದ ಆಚರಣೆಗಳಲ್ಲಿ ಭಾಗವಹಿಸುವವರಿಗೆ ತನ್ನಂತೆಯೇ ಇನ್ನೊಬ್ಬನೂ ದುಃಖದಲ್ಲಿದ್ದಾನೆ ಎಂಬ ಭಾವನೆ ವಿಚಿತ್ರ ಸಮಾಧಾನವನ್ನು ನೀಡುತ್ತದೆ.

ಅಲೇಲೂಯ, ಅಲೇಲೂಯ ಎಂದು ಸಾಮೂಹಿಕವಾಗಿ ಉನ್ಮತ್ತರಾಗಿ ಧ್ಯಾನಿಸುವ ಕ್ರಿಶ್ಚಿಯನ್ನರ ಧ್ಯಾನ ಕೂಟಗಳು ಪ್ರಾರ್ಥನೆಗಳು ಬಹು ಜನರನ್ನು ಆಕರ್ಷಿಸುತ್ತವೆ. ದಿನನಿತ್ಯ ಐದು ಹೊತ್ತು ನಮಾಜ್ ಮಾಡಿ ಕುರಾನ್ ಪಠಣ ಮಾಡುತ್ತ ಈ ಲೋಕದ ಲೋಭಗಳಿಗೆ ಸಿಲುಕದೆ ಅಪ್ಪಟ ದೈವ ವಿಶ್ವಾಸಿ ಮುಸ್ಲಿಮರನ್ನಾಗಿಸಲು ಪ್ರಯತ್ನಿಸುವ ಜಮಾತ್ ಇಸ್ಲಾಮಿ ತಬ್ಲಿಗ್ ಇತ್ಯಾದಿ ಮುಸ್ಲಿಮ್ ಪಂಥಗಳ ಚಟುವಟಿಕೆಗಳು ಚುರುಕಾಗಿವೆ.

ಆದುದರಿಂದಲೇ ಮಾರ್ಕ್ಸ್ ಹೇಳುತ್ತಾನೆ, 'ಧರ್ಮ -ನೊಂದವರ ನಿಟ್ಟುಸಿರು, ಹೃದಯಹೀನ ಜಗತ್ತಿನ ಹೃದಯ, ಆತ್ಮವಿಲ್ಲದ ಲೋಕದ ಆತ್ಮ' ಎಂದು. ಈ ಬದುಕಿನ ಜಂಜಡಗಳಿಂದ ಶಾಶ್ವತ ಮುಕ್ತಿ ದೊರೆಯಲು



ಹತ್ತನೆಯ ಅವತಾರ ಕಲ್ಕಿ ಭಗವಾನರನ್ನು ಪ್ರಾರ್ಥಿಸಬೇಕೆಂಬ, ಆರಾಧಿಸಬೇಕೆಂಬ ಕಲ್ಕಿ ಪಂಥವೂ ಈಗೀಗ ಜನಪ್ರಿಯವಾಗಿದೆ. ವಿರಾಜಪೇಟೆಯಲ್ಲಿ ಇತ್ತೀಚೆಗೆ ಕಲ್ಕಿ ಭಕ್ತರಿಂದ ಒಂದು ವಾರದ ಯಜ್ಞ ಯಾಗಾದಿ ಹೋಮಗಳು ನಡೆದವು. ವಿಶ್ವಶಾಂತಿಗಾಗಿ, ಲೋಕ ಕಲ್ಯಾಣಕ್ಕಾಗಿ ನಡೆಯುವ ಈ ಯಜ್ಞಗಳ ಪೈಕಿ ಒಂದು ಯಜ್ಞ ವಿಶೇಷವಾಗಿತ್ತು. ಅದು ಕುಬೇರ ಯಜ್ಞ. ಈ ಯಜ್ಞದಲ್ಲಿ ಭಾಗವಹಿಸುವವರಿಂದ ಐದು ನೂರರಿಂದ -ಐದು ಸಾವಿರ ರೂಪಾಯಿ ತನಕ ಶುಲ್ಕ ವಸೂಲಿ ಮಾಡಲಾಗಿತ್ತು. ಹಣಕಾಸಿನ ತಾಪತ್ರಯಗಳಿಗೆ ಪರಿಹಾರ ಕಾಣುವುದು ಈ ಯಜ್ಞದ ಉದ್ದೇಶ. ಒಂದೆಡೆ ಈ ಲೋಕವು ನಶ್ವರ ಎಂದು ವರ್ತಮಾನವನ್ನು ನಿರಾಕರಿಸುತ್ತ, ಸಂಪತ್ತು ಪ್ರಾಪ್ತವಾಗಲು ಕುಬೇರ ಯಜ್ಞ ನಡೆಸುವ ಈ ಪ್ರವೃತ್ತಿ ಮನುಷ್ಯನ ಮೂಲಭೂತ ಮನೋಭಾವದ ಬಗೆಗಿನ, ಈ ದಿನದ ಸಾಮಾಜಿಕ ಪರಿಸ್ಥಿತಿಯ ಕುರಿತಾದ ವ್ಯಂಗ್ಯ ವ್ಯಾಖ್ಯಾನವಾಗಿದೆ.

ಈ ಆರ್ಥಿಕ ಬಿಕ್ಕಟ್ಟು ತೀವ್ರವಾಗಿ ಕಾಡುತ್ತಿರುವುದು ಕಾಫಿ ತೋಟದಲ್ಲಿ ದುಡಿಯುತ್ತಿರುವ ಲಕ್ಷಾಂತರ ಕಾರ್ಮಿಕರನ್ನು. ಇವತ್ತು ಕಾಫಿ ತೋಟಗಳಲ್ಲಿ ವಾರವೊಂದಕ್ಕೆ ಮೂರು ನಾಲ್ಕು ದಿನ ಮಾತ್ರ ಕೆಲಸ ಸಿಗುತ್ತಿದೆ. ಅಸಂಖ್ಯಾತ ತಾತ್ಕಾಲಿಕ ಕೆಲಸಗಾರರನ್ನು ಕೆಲಸದಿಂದ ಹೊರಹಾಕಲಾಗಿದೆ. ಕೊಡಗಿನ ನೆರೆಯ ಜಿಲ್ಲೆಗಳಿಂದ ಮತ್ತು ತಮಿಳುನಾಡಿನಿಂದ ಕೆಲಸಕ್ಕೆ ಬಂದಿದ್ದ ಸಾವಿರಾರು ಕಾರ್ಮಿಕರು ತಮ್ಮ ಊರುಗಳಿಗೆ ವಾಪಾಸಾಗಿದ್ದಾರೆ. ದೈಹಿಕ ಶ್ರಮ ಬಿಟ್ಟರೆ ಬೇರೆ ಏನೂ ಕೌಶಲ್ಯವಿಲ್ಲದೆ ಕಾರ್ಮಿಕರು ದಿನ ಬೆಳಗಾದರೆ ನಿರುದ್ಯೋಗಿಗಳಾಗಿದ್ದಾರೆ. ಬಂಡವಾಳಶಾಹಿ ನಿರ್ಮಿಸುವ ಈ ಬಿಕ್ಕಟ್ಟಿನಿಂದಾಗಿ ಕಡಿಮೆ ಕೂಲಿಗೆ ದುಡಿಯಲು ತಯಾರಾಗಿರುವ ನಿರ್ಗತಿಕ ನಿರುದ್ಯೋಗಿಗಳ ಒಂದು ದೊಡ್ಡ ಪಡೆಯೇ ತಯಾರಾಗಿದೆ.

ದಾರಿದ್ರ್ಯ ಮತ್ತು ಹಸಿವಿನಿಂದ ತಪ್ಪಿಸಿಕೊಳ್ಳಲು ಕೆಲಸ ಹುಡುಕಿಕೊಂಡು ಅಂಡಲೆಯುವ ಕಾರ್ಮಿಕರು ಇವತ್ತು ಕನಿಷ್ಠಕ್ಕಿಂತಲೂ ಕಡಿಮೆ ಕೂಲಿಗೆ ದುಡಿಯುವುದು ಅನಿವಾರ್ಯವಾಗಿದೆ.

ಈ ಬಿಕ್ಕಟ್ಟಿನ ಪರಿಸ್ಥಿತಿಯಲ್ಲಿ ಕನಿಷ್ಠ ಪರಿಹಾರ ಕಾರ್ಯಕ್ರಮಗಳನ್ನು ರೂಪಿಸಿ ಬಡ ಕಾರ್ಮಿಕನ ಜೀವನದ ಹಕ್ಕನ್ನು ರಕ್ಷಿಸುವ, ಆತ್ಮ ಗೌರವವನ್ನು ಕಾಪಾಡುವ ಯಾವುದೇ ಕಾರ್ಯಕ್ರಮವನ್ನು ಸರ್ಕಾರ ರೂಪಿಸಿಲ್ಲ. ಕಾರ್ಮಿಕನ ದೃಷ್ಟಿಕೋನದಿಂದ ಈ ಬಿಕ್ಕಟ್ಟನ್ನು ವಿಶ್ಲೇಷಿಸುವ ಜವಾಬ್ದಾರಿಯನ್ನು ನಮ್ಮ ಮಾಧ್ಯಮಗಳೂ, ರಾಜಕೀಯ ಪಕ್ಷಗಳೂ (ಎಡಪಕ್ಷಗಳನ್ನು ಹೊರತುಪಡಿಸಿ) ನಿರ್ವಹಿಸುತ್ತಿಲ್ಲ. ಸಂಪತ್ತನ್ನು ಉತ್ಪಾದಿಸಲು ಬೆವರು ಹರಿಸಿ ದುಡಿವ ಈ ಜನಸ್ತೋಮದ ನೋವನ್ನು ಚರಿತ್ರೆಯ ಭಾಗವಾಗಿ ಪರಿಗಣಿಸಲು ನಮ್ಮ 'ಅಧಿಕೃತ' ಸುದ್ದಿ ಮಾಧ್ಯಮಗಳು, ಅಕ್ಷರದ ಯಜಮಾನರು ತಯಾರಿಲ್ಲ.

ಕಾರ್ಮಿಕರ ದಾರಿದ್ರ್ಯಕ್ಕೆ ಅವರ ಮೈಗಳ್ಳತನವೇ ಕಾರಣ ಎನ್ನುವ ನಮ್ಮ ಮಧ್ಯಮ ವರ್ಗದ ಭೋಳೇ ವಿವರಣೆ – 'ಕೈಕೆಸರಾದರೆ ಬಾಯಿ ಮೊಸರು', 'ಕಾಯಕವೇ ಕೈಲಾಸ', 'ಆಳಾಗಿ ದುಡಿದರೆ ಅರಸನಾಗಿ ಉಣ್ಣಬಹುದು' ಇತ್ಯಾದಿ ಹೇಳಿಕೆಗಳು, ಮೈಮುರಿದು ದುಡಿಯಲು ತಯಾರಿರುವ ಕಾರ್ಮಿಕನ ಮುಖಕ್ಕೆ ರಾಚುತ್ತಿವೆ.

ಎರಡು ಹೊತ್ತಿನ ಕೂಳಿಗೂ ಸಂಚಕಾರ ಬಂದಿರುವ ಈ ದಿನಗಳಲ್ಲಿ ಬಡ ಮಕ್ಕಳು ಶಾಲೆಗಳಿಂದ ಹೊರಬೀಳುತ್ತಿದ್ದಾರೆ. ಸರ್ಕಾರಿ ಪ್ರಾಥಮಿಕ, ಮಾಧ್ಯಮಿಕ ಶಾಲೆಗಳಲ್ಲಿ ಹಾಜರಾತಿ ಕ್ಷೀಣಿಸುತ್ತಿದೆ. ಇದು ಕರಾಳ ಸತ್ಯ.

ಆದುದರಿಂದ, 'ಸಾಕ್ಷರತಾ ಚಳುವಳಿ', 'ಮರಳಿ ಬಾ ಶಾಲೆಗೆ' ಇಂಥ ಸರ್ಕಾರಿ ಆಂದೋಲನಗಳು ಬರೇ ಜಾಹಿರಾತಿನ ಸರಕುಗಳಾಗುತ್ತಿವೆ.

ಅನಕ್ಷರಸ್ಥರ ಸಂಖ್ಯೆಯನ್ನು ಹೆಚ್ಚಿಸುತ್ತಿರುವ ಇವತ್ತಿನ ಪರಿಸ್ಥಿತಿಯ ಬೇರುಗಳನ್ನು, ಮೂಲಗಳನ್ನು ಗ್ರಹಿಸುವಲ್ಲಿ ವಿಫಲವಾಗುತ್ತಿರುವ ಭಾಷಾಭಿಮಾನದ ಚಳುವಳಿಗಳು ವಾಸ್ತವಕ್ಕೆ ಬೆನ್ನು ಹಾಕಿ ಪೇಲವವಾಗಿವೆ.


ಐ. ಆರ್. ಪ್ರಮೋದ್
ವಕೀಲರು, ವಿರಾಜಪೇಟೆ - ೫೭೧ ೨೧೮, ಕೊಡಗು ಜಿಲ್ಲೆ

## ಮಹಿಳಾ ಕಾರ್ಮಿಕರು

# ಕೈಗಾರಿಕಾ ಕಾನೂನು ಹಾಗೂ ಲೈಂಗಿಕ ಅಸಮಾನತೆ

ಭಾರತದಲ್ಲಿ ಕೈಗಾರಿಕಾ ಕಾನೂನು ಕೆಲಸಗಾರರನ್ನೆಲ್ಲ ''ವ್ಯಕ್ತಿಗಳು'' ಎಂದು ಒಟ್ಟಿನಲ್ಲಿ ಪರಿಗಣಿಸುತ್ತದೆಯೇ ಹೊರತು ಮಹಿಳಾ ಕಾರ್ಮಿಕರು ಹಾಗೂ ಪುರುಷ ಕಾರ್ಮಿಕರು ಎಂದು ಭೇದ ಮಾಡುವುದಿಲ್ಲ. ಆ ಮಟ್ಟಿಗೆ ಕೈಗಾರಿಕಾ ಕಾನೂನುಗಳು ''ಸಮಾನತೆ''ಯನ್ನು ಆಧರಿಸಿವೆ ಎನ್ನಬಹುದು. ಸಂಬಳ, ಕೆಲಸದ ಪರಿಸ್ಥಿತಿಗಳು, ಕೆಲಸದ ಅವಧಿ ಇತ್ಯಾದಿಗಳೆಲ್ಲ ಕಾನೂನು ರೀತ್ಯಾ ಪುರುಷ ಹಾಗೂ ಸ್ತ್ರೀ ಕಾರ್ಮಿಕರಿಗೆಲ್ಲರಿಗೂ ಒಂದೇ. ಆದರೆ ಆಚರಣೆಯಲ್ಲಿ ಬೇರೆ ಬೇರೆ. ಒಂದೇ ಕೆಲಸಕ್ಕೆ ಹೆಂಗಸರಿಗೆ ಗಂಡಸರಿಗಿಂತ ಕಡಿಮೆ ಸಂಬಳ ಕೊಡಲಾಗುತ್ತದೆ. ಇದನ್ನು ಸರಿಪಡಿಸಲೋಸುಗ ೧೯೭೬ರಲ್ಲಿ 'ಸಮಾನ ಸಂಬಳ ಶಾಸನ' ಎಂಬ ಶಾಸನವೊಂದನ್ನು ಮಾಡಲಾಯಿತು. ಈ ಶಾಸನವು ಪುರುಷ ಹಾಗೂ ಸ್ತ್ರೀ ಕಾರ್ಮಿಕರಿಗೆ ಸಮಾನ ಕೆಲಸಕ್ಕೆ ಸಮಾನ ವೇತನ ಸಲ್ಲಬೇಕು ಎಂದು ಸ್ಪಷ್ಟಪಡಿಸಿರುವುದರ ಜೊತೆಗೆ ಕೆಲಸಕ್ಕೆ ಸೇರಿಸಿಕೊಳ್ಳುವ ಸಮಯದಲ್ಲಾಗಲೀ, ಕೆಲಸದ ಇತರೇ ವಿಷಯಗಳಿಗೆ ಸಂಬಂಧಿಸಿಯಾಗಲೀ, ಲೈಗಿಂಕ ಆಧಾರದ ಮೇಲೆ ಮಹಿಳಾ ಕಾರ್ಮಿಕರ ವಿರುದ್ಧ ಭೇದಭಾವ ತಪ್ಪಿಸಲು ಯತ್ನಿಸಿದೆ.

ಈ ಸಾಮಾನ್ಯ ಶಾಸನವಲ್ಲದೆ ಹಲವಾರು ಕೈಗಾರಿಕೆಗಳು ಅವಶ್ಯವಿದ್ದೆಡೆಗಳಲ್ಲೆಲ್ಲ 'ಮಹಿಳಾ ಕಾರ್ಮಿಕರ' ಹಿತ ರಕ್ಷಿಸುವ ವಿಶೇಷ ನಿಬಂಧನೆಗಳಿರುವ ವಿಶಿಷ್ಟ ಶಾಸನಗಳನ್ನೂ ಘೋಷಿಸಿವೆ. ಉದಾಹರಣೆಗೆ, 'ಬಾಂಬೆ ಷಾಪ್ಸ್ ಅಂಡ್ ಎಸ್ಟಾಬ್ಲಿಷ್‌ಮೆಂಟ್ಸ್ ಆ್ಯಕ್ಟ್': ಅಂಗಡಿಯಲ್ಲಾಗಲೀ ಇತರೇ ಕರ್ಮಾಗಾರಗಳಲ್ಲಾಗಲೀ ದಿನದಲ್ಲಿ ಒಂದು ನಿರ್ದಿಷ್ಟ ವೇಳೆಯ ನಂತರ ಮಹಿಳಾ ಕಾರ್ಮಿಕರನ್ನು ಕೆಲಸದಲ್ಲಿರಿಸಿಕೊಳ್ಳಕೂಡದು ಎಂದು ಈ ಶಾಸನ ಸ್ಪಷ್ಟಪಡಿಸುತ್ತದೆ. ಇದೇ ರೀತಿಯ ಇತರ ಕೆಲವು ವಿಶಿಷ್ಟ ಕಾನೂನುಗಳ ಪೈಕಿ 'ಬೀಡಿ ಹಾಗೂ ಸಿಗರೇಟು ಕಾರ್ಮಿಕರ ನೌಕರಿ ಶಾಸನ'ವೂ ಒಂದು. ಇದನ್ನು ೧೯೬೬ರಲ್ಲಿ ಘೋಷಿಸಲಾಯಿತು. ಇದರ ಪ್ರಕಾರ, ಮಹಿಳಾ ಕಾರ್ಮಿಕರು ಕೆಲಸ ಮಾಡುವ ವೇಳೆಯಲ್ಲಿ ಅವರ ಸಣ್ಣ ಮಕ್ಕಳನ್ನು ನೋಡಿಕೊಳ್ಳಲೋಸುಗ ಮಾಲೀಕರು ಕಾರ್ಖಾನೆಯ ಆವರಣದಲ್ಲಿ ಸೂಕ್ತವಾದ ಶಿಶುಧಾಮಗಳನ್ನು ವ್ಯವಸ್ಥೆಗೊಳಿಸುವುದು ಕಡ್ಡಾಯವಾಗಿದೆ.

ಆದ್ದರಿಂದ ಮಹಿಳಾ ಕಾರ್ಮಿಕರ ಕಾರ್ಯ ಪರಿಸ್ಥಿತಿಗಳಿಗೆ ಸಂಬಂಧಿಸಿದಂತೆ ಸಮಾನತೆ ಹಾಗೂ ವಿಶೇಷ ಸೌಲಭ್ಯಗಳನ್ನು ಒದಗಿಸಿಕೊಡುವ ಕಾನೂನು ವ್ಯವಸ್ಥೆಯಲ್ಲಿ ಕೊರತೆಯೇನೂ ಇಲ್ಲವೆಂಬುದು ಈ ಲೇಖಕಿಯ ಅಭಿಪ್ರಾಯ. ಆದರೂ ಮಹಿಳಾ ಕಾರ್ಮಿಕರು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇದಕ್ಕೆ ಇಂದಿನ ಸಾಮಾಜಿಕ ವಾಸ್ತವಿಕತೆಯೇ ಮುಖ್ಯ ಕಾರಣವಾಗಿದೆ. ಸಮಾಜದಲ್ಲಿ ಮಹಿಳೆಯರನ್ನು ದ್ವಿತೀಯ ದರ್ಜೆಯ ಪ್ರಜೆಗಳನ್ನಾಗಿ ಪರಿಗಣಿಸಲಾಗುತ್ತಿದೆ. ಹಾಗಾಗಿ ಈ ಸಮಸ್ಯೆಗಳ ಪರಿಹಾರಕ್ಕೆ ಏಕೈಕ ಮಾರ್ಗವೆಂದರೆ, ಮಹಿಳೆಯರೆಲ್ಲ ಒಂದುಗೂಡಿ ಸಂಘಟಿತರಾಗಬೇಕಾಗುತ್ತದೆ, ತಮ್ಮ ಸಮಸ್ಯೆಗಳ ಪರಿಹಾರಕ್ಕೆ ಎಡೆಬಿಡದೆ ಚಳವಳಿ ಹೂಡಬೇಕಾಗುತ್ತದೆ, ಹೋರಾಡಬೇಕಾಗುತ್ತದೆ. ಮಹಿಳಾ ಕಾರ್ಮಿಕರು ಎದುರಿಸುತ್ತಿರುವ ಮಾದರಿ ಸಮಸ್ಯೆಗಳಿಗೆ ಈ ಕೆಳಗಿನ ಅಂಶಗಳನ್ನು ನಿದರ್ಶನಗಳನ್ನಾಗಿ ನೀಡಬಹುದು.

ಉದಾ : ೧. (ಆಧಾರ ''ಲೇಖಕ್ ಫೈಲ್'', ಸಂ.೧, ನಂ.೧, ಜನವರಿ ೨೦೦೩.) ವಾರಣಾಸಿಯಲ್ಲಿ ಜರ್ದೋಸಿ ಹಾಗೂ ಹಾಥರಿ ಕಾರ್ಯ ನಡೆಸುವವರಲ್ಲಿ ಬಹು ಮಂದಿ ಮಹಿಳೆಯರಾಗಿದ್ದಾರೆ. ವಯಸ್ಸು, ಕೌಶಲ್ಯ, ಮತಧರ್ಮ, ವಿದ್ಯಾಮಟ್ಟ, ಇವು ಏನೇ ಆಗಿರಲಿ ಈ ಮಹಿಳೆಯರು ತಮ್ಮ ಕೆಲಸವನ್ನು ಮನೆಗಳಿಗೆ ಸೀಮಿತಗೊಳಿಸಿಕೊಂಡಿರುತ್ತಾರೆ. ತಮ್ಮ ಕೆಲಸಕ್ಕೆ ಹೆಚ್ಚಿನ ಆರ್ಡರ್ ಹಾಗೂ ಅನುಕೂಲ ಪಡೆಯಲಾಗಲೀ, ಕೈಯಲ್ಲಿರುವ ಆರ್ಡರುಗಳಿಗೆ ಅವಶ್ಯವಾದ ಸಾಮಗ್ರಿಗಳನ್ನು ಪಡೆಯಲಾಗಲೀ ಅವರು ಬಹಿರಂಗವಾಗಿ ''ಕಾರ್ಖಂದರ್'' (ಕಂಟ್ರಾಕ್ಟರ್) ಅಥವಾ 'ಗಧಿದಾರ್'ಗಳಲ್ಲಿಗೆ ಹೋಗುವುದಕ್ಕೆ ಸಾಮಾಜಿಕ ನಿಷೇಧವಿದೆ. ಅದೇ ರೀತಿ ಕಾರ್ಖಂದರನೂ ಮಹಿಳಾ ಕಾರ್ಮಿಕಳೊಬ್ಬಳನ್ನು ಹಾಗೆಯೇ ಸಂಧಿಸಲೆಂದು ಕಾರ್ಯಸ್ಥಳಕ್ಕೆ ಹೋಗುವುದೂ ಅಷ್ಟು ಸುಲಭವೇನಲ್ಲ. ಇದು ತಮ್ಮ ಸ್ಥಿತಿಗತಿಗಳನ್ನು ಸುಧಾರಿಸಿಕೊಳ್ಳಲು ಮಹಿಳಾ ಕಾರ್ಮಿಕರು ಮಾಡುವ ಯತ್ನಗಳನ್ನು ತುಂಬ ಪರಿಣಾಮಕಾರಿಯಾಗಿ ವಿಫಲಗೊಳಿಸುತ್ತದೆ. ಅವರು ತಮಗೆ ಹೆಚ್ಚು ಕೆಲಸ ಕೊಡಬೇಕೆಂದು ಕೇಳಲು ಮಾಲೀಕರ ಬಳಿ ಹೋಗಲು ಆಗುವುದಿಲ್ಲ. ಏಕೆಂದರೆ ಅದು ತಮ್ಮ ಕುಟುಂಬ ಗೌರವಕ್ಕೆ ಮಸಿ ಬಳಿಯಬಹುದೆಂಬ ಅಂಜಿಕೆ ಅವರಲ್ಲಿರುತ್ತದೆ. ಆದ್ದರಿಂದ ತಮಗೆಷ್ಟು ಕೆಲಸ ಲಭಿಸುತ್ತದೆಯೋ ಅದನ್ನಷ್ಟೆ ಮನೆಯಲ್ಲಿ ಮಾಡಿಕೊಂಡಿರುವುದರಲ್ಲೇ ಅವರು ತೃಪ್ತರಾಗಿರಬೇಕು. ಇದರಲ್ಲಿ ಒಂದು ವಿಪರ್ಯಾಸವೂ ಇದೆ. ಅವರು ಮನೆಯಲ್ಲೇ ಕೆಲಸ ಮಾಡುವುದರಿಂದ ಅವರ ಕೆಲಸದ ಶ್ರೇಷ್ಠತೆಯ ಬಗೆಗೆ ತೀರ್ಪು ನೀಡುವುದರಲ್ಲಿ ಈ ವ್ಯವಸ್ಥೆ ಅವಳ ವಿರುದ್ಧವೇ ಕ್ರಿಯೆ ಜರುಗಿಸುತ್ತದೆ. ಮಹಿಳಾ ಕಾರ್ಮಿಕರು ಕೆಲಸವನ್ನು ಮನೆಗೆ ಕೊಂಡೊಯ್ಯುವುದರಿಂದ ಅವರ ಕೆಲಸದ ಮೇಲೆ ಉಸ್ತುವಾರಿ, ಅವರ ಕಾರ್ಯಕೌಶಲದ ತಪಾಸಣೆ ಇವೆಲ್ಲ ಇಲ್ಲವಾಗುತ್ತದೆ. ಹಾಗಾಗಿ ಅವರು ಮಾಡುವ ಕೆಲಸದಲ್ಲಿ ಸೊಗಸು ಇರುವುದಿಲ್ಲ, ಅದು ಒರಟಾಗಿರುತ್ತದೆ, ಎಂದು 'ಕಾರ್ಖಂದರ್'ರು ದೂರುತ್ತಾರೆ. ಹಾಗಾಗಿ ವಿಶಿಷ್ಟ ಗುಣಮಟ್ಟದ 'ಜರ್ದೋಸಿ' ಕಾರ್ಯ ಜರುಗಿಸುವಲ್ಲಿ ಮಹಿಳಾ ಕಾರ್ಮಿಕರಿಗೆ ಸಾಕಷ್ಟು ಕೌಶಲ್ಯ ಇರುವುದಿಲ್ಲವೆಂದು ಪರಿಗಣಿಸಲಾಗುತ್ತದೆ. ಇದಕ್ಕೆ ಪ್ರತಿಯಾಗಿ ಮಹಿಳೆಯರು ಏನು ಹೇಳುತ್ತಾರೆ? ಗೃಹಿಣಿಯಾಗಿ ಮನೆಗೆಲಸ ಮಾಡದೆ ಹೋದಾಗ, ಕಾಲಕ್ಕೆ ಸರಿಯಾಗಿ ಊಟ ತಿಂಡಿ ತಯಾರಿಸದೆ ಹೋದಾಗ ಎಲ್ಲರೂ ತಕ್ಷಣವೇ ಮನೆಯ ಗೃಹಿಣಿಯರತ್ತವೇ ಬೊಟ್ಟು ಮಾಡಿ ತೋರಿಸುತ್ತಾರೆ, ಎನ್ನುತ್ತಾರೆ ಅವರು. ಗಂಡಸರು ಮನೆಗೆಲಸವನ್ನು ಎಳ್ಳಷ್ಟೂ ಹಚ್ಚಿಕೊಳ್ಳುವುದಿಲ್ಲ. ಹಾಗಾಗಿ ಮನೆಗೆಲಸದ ಜೊತೆಗೆ ಮಹಿಳೆಯರು ತುಂಬ ಚಿತ್ತೈಕಾಗ್ರತೆ ಅವಶ್ಯವಾದ ಜರ್ದೋಸಿ ಕೆಲಸವನ್ನೂ ಮಾಡಬೇಕಾಗುವುದರಿಂದ, ಸಹಜವಾಗಿಯೇ ಕೆಲಸದಲ್ಲಿ ಲೋಪ - ದೋಷಗಳು ನುಸುಳುತ್ತವೆ. ಮಹಿಳೆಯರು ಮನೆಗೆಲಸವನ್ನು ನಿರ್ಲಕ್ಷಿಸಲಾರರು. ಅದೇ ಹೊತ್ತಿನಲ್ಲಿ ತಮ್ಮ ಆದಾಯದ ಏಕೈಕ ಆಕರವಾದ ಜರ್ದೋಸಿ ಕೆಲಸವನ್ನೂ ಬಿಟ್ಟುಕೊಡಲಾರರು.

ಮೇಲಿನ ಪರಿಸ್ಥಿತಿಯ ನೇರ ಪರಿಣಾಮವೆಂದರೆ ಜರ್ದೋಸಿ ವ್ಯವಹಾರದಲ್ಲಿ ಮಹಿಳೆಯರಿಗೆ 'ಪೀಸ್ ರೇಟ್' ಲೆಕ್ಕದಲ್ಲಿ ವೇತನ ನೀಡಲಾಗುತ್ತಿರುವುದಾಗಿದೆ. ಪುರುಷರಿಗಾದರೆ ಪೂರ್ಣ 'ನಫ್ರಿ' ಲೆಕ್ಕದಲ್ಲಿ ಸಂಬಳ ನೀಡಲಾಗುತ್ತದೆ. ಈ ವ್ಯತ್ಯಾಸ ಸಾಕಷ್ಟು ಗಮನಾರ್ಹವೇ ಆಗಿರುತ್ತದೆ. 'ಗೃಹ-ಆಧಾರಿತ' ಪುರುಷನಿಗೆ ಒಂದು ಸೀರೆಗೆ ಕೊನೆಯ ಪಕ್ಷ ರೂ. ೧೬೦/- ನೀಡಿದಲ್ಲಿ ಮಹಿಳಾ ಕಾರ್ಮಿಕಳಿಗೆ ರೂ. ೧೧೦/- ನೀಡಲಾಗುತ್ತದೆ.

ಇದು ಲೈಂಗಿಕ ದೃಷ್ಟಿಕೋನದಿಂದ ಉದ್ಭವಿಸುವ ಪಕ್ಷಪಾತಕ್ಕೆ ಒಂದು ಆದರ್ಶ ನಿದರ್ಶನ. ಇದನ್ನು ತಪ್ಪಿಸಲು ಇರುವ ಕಾನೂನು ಪರಿಹಾರ ತೀರ ಸೀಮಿತ. ಇದರಲ್ಲಿ ಬದಲಾವಣೆ ತರಲು ಏಕೈಕ ಮಾರ್ಗವೆಂದರೆ ಮಹಿಳಾ ಕಾರ್ಮಿಕರು ಒಂದಾಗಿ ಒಂದು ದೃಢ ಸಂಘಟನೆ ಕಟ್ಟಿಕೊಳ್ಳುವುದು ಮತ್ತು ಹಂತಹಂತವಾಗಿ ಪುರುಷರೊಂದಿಗೆ ಸಮಾನ ವೇತನಕ್ಕಾಗಿ, ತಮ್ಮ ಕಾರ್ಯಸ್ಥಿತಿಯ ಸುಧಾರಣೆಗಾಗಿ, ವಿಶೇಷ ರಿಯಾಯಿತಿ ಇತ್ಯಾದಿಗಳಿಗಾಗಿ, ಹೋರಾಟ ನಡೆಸುವುದು. ಇದರ ಜೊತೆಗೇ ಸಮಾಜದಲ್ಲೂ ಸ್ತ್ರೀ-ಪುರುಷರ ನಡುವಿನ ಸಂಬಂಧದಲ್ಲೂ ಸಾಮಾಜಿಕ ಪರಿವರ್ತನೆ ಆಗಬೇಕಾದ ತುರ್ತು ಅವಶ್ಯವಿದೆ. ಇದೂ ಕೂಡ ಮಹಿಳೆಯರ ಸ್ವಂತ ಚಳವಳಿಯ ಮೂಲಕವಷ್ಟೆ ಉಂಟಾಗುವುದು ಸಾಧ್ಯ.

'ಕಾರ್ಮಿಕ ಸಂಕ್ಷೇಮ ಹಾಗೂ ಸಂರಕ್ಷಣಾ ಕಾನೂನುಗಳು' ವಿಕಾಸಗೊಳ್ಳುವುದಕ್ಕೆ ಏಕಪ್ರಕಾರದ ರಾಜಕೀಯ ಚಳವಳಿ ಅತ್ಯವಶ್ಯ. ರಾಜಕೀಯ ರಂಗದಲ್ಲಿ 'ಗುಂಪುಗಾರಿಕೆ' ಹೆಚ್ಚು ಪ್ರಬಲವಾಗಿ ಒಂದೊಂದು ಗುಂಪು ತನಗನುಕೂಲವಾದಂಥ ಕಾನೂನು ಸೌಲಭ್ಯಗಳನ್ನು ಕಸಿದುಕೊಳ್ಳುತ್ತದೆ. ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆ ಕಾರ್ಯ ನಿರ್ವಹಿಸುತ್ತಿರುವುದು ಈ ರೀತಿಯಲ್ಲೇ.

ಮಹಿಳೆಯರ ರಾಜಕೀಯ ಪ್ರಭಾವ ತುಂಬ ಸೀಮಿತವಾದುದು, ಏಕೆಂದರೆ, ಅವರ ಮೇಲೆ ಮಕ್ಕಳ ಹಾಗೂ ಕುಟುಂಬದ ಪಾಲನೆ-ಪೋಷಣೆಯ ಹೊರೆ ಬಿದ್ದಿರುತ್ತದೆ. ಮಹಿಳೆಯರ ಮಧ್ಯೆ ಪರಸ್ಪರ ಸಂವೇದನೆ, ಸಂಘಟನೆ, ಪ್ರಚಾರ ಹಾಗೂ ಚಳವಳಿಗಳಷ್ಟೆ ಅವರಲ್ಲಿ ಪುರೋಗಾಮಿ ವಿಚಾರ

ತನು ಮೆಹ್ತಾ ತಿವಾರಿ

# ಕೃಷ್ಣೆ ಮತ್ತು ಬಾಗಲಕೋಟೆ



ನಿಂತ ನೆಲ, ಬೆಳೆದ ಓಣಿ,
ಅಜ್ಜಿಗೂ ಕತೆ ಹೇಳಿದ
ಮೌನಕ್ಕೆ ಮಾತುಕೊಟ್ಟ ಕಲ್ಲುಗೋಡೆ;
ಹಂಚಿಕೊಂಡ ಮನಸ್ಸುಗಳ ಸಮಾಧಿ ಮಾಡಿದ ನೀರು;
ಜಲಾ(ಆ)ಶಯಕ್ಕೆ ಬದುಕು ಬಲಿಕೊಟ್ಟು
ನೆಲ ಕಳೆದುಕೊಂಡ ಮನದಲ್ಲಿ ನೆನಪುಗಳ ಸಾವು.

ತುಂಬಿ ನಿಂತಿದೆ ನೀರು,
ಮುಳುಗಿದ ಗುಡಿಯಲ್ಲಿ
ನನ್ನ ಧ್ಯಾನದ ತೇರು;
ಬೆಚ್ಚಗಿನ ನೆನಪು
ಕಡೆದಿಟ್ಟ ಕಲ್ಲು, ನಾಲ್ಕು ತಗಡು
ಹೊಟ್ಟೆ ತುಂಬಿಸಲು ಚಿಕ್ಕ ಪೆಟ್ಟಿಗೆ ಅಂಗಡಿ
ಮಳಿಗೆ ಮಾರ್ಕೆಟ್ಟಿನಲಿ ಬಗ್ಗಿ ದುಡಿವ ಕಷ್ಟ ಜೀವಿಗಳು
ಎಲ್ಲ ಎಳ್ಳು-ನೀರು, ತ್ಯಾಗವೆಂಬ ಹೆಸರು.

ಇದು ಹೊಸ ಬದುಕು
ಸರಕಾರದ್ದು, ಸಾಮಾನು ಸರಂಜಾಮು
ಹುಳುಕು ಗಟಾರದಲಿ, ನೀರಿಲ್ಲದ ನಳ, ದೀಪವಿಲ್ಲದ ಬೀದಿ
ಎದೆ ತುಂಬ ಹಳೆ ವಾರ ನೆನಪು; ನಾಳೆಗೇನು ಹೇಳು ?!
ರಾತ್ರಿ ತುಂಬ ಬೀದಿ ನಾಯಿಗಳ ಕೂಗು.

ಸೋತ ಜೀವಗಳು ದನಿ ಬೇಡುತ್ತವೆ
ಹೈದರಾಬಾದಿನಿಂದ ಆಗಲೇ ಹೇಳಿಕೆಯೊಂದು ಬರುತ್ತಿದೆ
ಇವತ್ತು ಖಂಡಿತ ನಾಳೆಯಾಗುತ್ತದೆ
ನಿಜ, ಆದರೆ ಬಾಗಲಕೋಟೆಗೆ 'ನಾಳೆ' ಎಂಬುದೇ ಇಲ್ಲ!

**ಬಸವರಾಜ ಹೂಗಾರ**
ಸಹಾಯಕ ನಿರ್ದೇಶಕ, ಕನ್ನಡ ಸಂಸ್ಕೃತಿ ಇಲಾಖೆ, ಬಿ. ಟಿ. ಪಾಟೀಲ ನಗರ, ಕೊಪ್ಪಳ - ೫೮೩ ೨೩೧

ಹಾಗೂ ಹಕ್ಕು ಪ್ರಜ್ಞೆ ಬೆಳೆಸಬಲ್ಲವು. ಪುರುಷರಿಗೆ, ಕೆಲಸದ ವೇಳೆಯ ನಂತರ, ಇಂಥಹ ಕ್ರಿಯೆಗಳಿಗೆ ಬೇಕಾದಷ್ಟು ಸಮಯ ಹಾಗೂ ಅವಕಾಶಗಳು ಇರುತ್ತವೆ. ಮಹಿಳೆಯರಿಗಾದರೋ, ಕರ್ಮಾಗಾರದ 'ಕೆಲಸದ ವೇಳೆ'ಯ ನಂತರ ಮನೆಯ 'ಕೆಲಸದ ವೇಳೆ' ಪ್ರಾರಂಭವಾಗುತ್ತದೆ. ಮಕ್ಕಳ ಪಾಲನೆ ಪೋಷಣೆ ಅಡುಗೆ ಮಾಡುವುದು, ಬಟ್ಟೆ ಒಗೆಯುವುದು, ಮನೆಯನ್ನು ಗುಡಿಸಿ ಸಾರಿಸುವುದು ಇತ್ಯಾದಿ ಜವಾಬ್ದಾರಿಗಳನ್ನೆಲ್ಲ ಮಹಿಳೆಯರೇ ಸಂಪೂರ್ಣವಾಗಿ ಹೊರಬೇಕಾಗುತ್ತದೆ. ಹಾಗಾಗಿ ಅವರಿಗೆ ಒಂದುಗೂಡಲು, ಚರ್ಚೆ ನಡೆಸಲು, ಹೋರಾಟ ಯೋಜಿಸಲು ಅವಕಾಶವೇ ಇರುವುದಿಲ್ಲ. ಅವರ ಸಂಘಟನಾತ್ಮಕ ಶಕ್ತಿ ಕುಗ್ಗಿರುತ್ತದೆ. ತತ್ಫಲವಾಗಿ ಅವರ ಹೋರಾಟಗಳು ಶಾಸಕರ ಗಮನಕ್ಕೆ ಬರಲು 'ರಾಜಕೀಯ'ವಾಗಿ ಪ್ರಬಲವಾಗಿರುವುದಿಲ್ಲ.

**ಉದಾ :** ೨. ''ಸುಭದ್ರತಾ ರಕ್ಷಣಾ ದಳ''ಗಳ ಪುರುಷ ಕಾರ್ಮಿಕರು ಬಹಳ ಕಾಲದಿಂದ ಶೋಷಿತ ವಿಭಾಗವಾಗಿ ಇದ್ದುಕೊಂಡು ಬಂದಿದ್ದಾರೆ. ಅವರ ಕೆಲಸದ ಅವಧಿ ಅನಿಯಮಿತ. ಸಂಬಳ ಮಾತ್ರ ಅತ್ಯಲ್ಪ. 'ವಾಚ್‌ಮನ್'ನ ಆವಶ್ಯಕತೆ ಎಷ್ಟು ಅನಿವಾರ್ಯ ಹಾಗೂ ಸಾರ್ವತ್ರಿಕ ಎಂದು ಬೇರೆ ಹೇಳಬೇಕಾಗಿಲ್ಲ. ಸಂಸ್ಥೆಗಳು, ಶಾಲೆಗಳು, ಕೈಗಾರಿಕೋದ್ಯಮಗಳು, ಹೋಟಲುಗಳು, ಆಸ್ಪತ್ರೆಗಳು... ಎಲ್ಲೆಡೆಗಳಲ್ಲೂ 'ರಕ್ಷಣಾ ದಳ' ಅತ್ಯವಶ್ಯ. ಸಹಜವಾಗಿಯೇ ಇವರು ಬಹುದೊಡ್ಡ ಕಾರ್ಮಿಕ-ವಿಭಾಗ ರೂಪಿಸುತ್ತಾರೆ. ಹಾಗಾಗಿ ಇವರ ಹಿತರಕ್ಷಣೆಗೆ ಸಂಬಂಧಿಸಿ ಕಾನೂನುಗಳು ಅತ್ಯವಶ್ಯ. 'ಭಾಯ್' ಎಂದು ಕರೆಯಲಾಗುವ ಗೃಹ ಕಾರ್ಮಿಕರ ವಿಷಯದಲ್ಲೂ ಇದೇ ಮಾತು ನಿಜ. ನಗರಗಳಲ್ಲಿ ಮನೆಗೆಲಸ ಕಾರ್ಮಿಕರ ಸಂಖ್ಯೆ ಬಹುದೊಡ್ಡದು. ಇದರಲ್ಲಿ ಲಕ್ಷಾಂತರ ಮಹಿಳೆಯರು ಕಾರ್ಯನಿರತರಾಗಿದ್ದಾರೆ. ಈ ವಿಭಾಗವೂ ತುಂಬ ಶೋಷಣೆಗೊಳಗಾಗಿದೆ. ಕನಿಷ್ಠ ವೇತನಕ್ಕೂ ಕಡಿಮೆ ಕೂಲಿ ಪಡೆಯುವುದಲ್ಲದೆ ಇವರ ಕೆಲಸದ ವೇಳೆಗೂ ಇತಿ-ಮಿತಿ ಇರುವುದಿಲ್ಲ.

ಭದ್ರತಾ ದಳ (ಪುರುಷ ವಿಭಾಗ) ಕಾರ್ಮಿಕರು ಇದೀಗಷ್ಟೆ ತಮ್ಮ ಯೂನಿಯನ್‌ಗಳ ಮೂಲಕ ಸತತವಾಗಿ ಚಳವಳಿ ನಡೆಸಿದ ಫಲವಾಗಿ ತಮಗೆ ಅನುಕೂಲವಾಗುವಂಥ ಕಾನೂನು ಪಡೆಯುವುದರಲ್ಲಿ ಯಶಸ್ವಿಯಾಗಿದ್ದಾರೆ. ಅವರ ಯೂನಿಯನ್‌ಗಳು ಕಾನೂನು ರೀತ್ಯ ಸವಾಲುಗಳನ್ನು ಹಾಕುವ ಮೂಲಕ ಮತ್ತು ಚಳವಳಿ ನಡೆಸುವ ಮೂಲಕ ತಮ್ಮ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುತ್ತಿವೆ. ಆದರೆ ಅದೇ ರೀತಿಯ ಸಮಸ್ಯೆಗಳು ಗೃಹ ಕೃತ್ಯ ಕಾರ್ಮಿಕರನ್ನೂ (ಹೆಚ್ಚಾಗಿ ಮಹಿಳೆಯರನ್ನು) ಬಾಧಿಸುತ್ತಿದ್ದರೂ, ಅವರ ಕೆಲಸದ ಪರಿಸ್ಥಿತಿಗಳನ್ನು ಸುಧಾರಿಸಿ ಕ್ರಮಬದ್ಧಗೊಳಿಸುವ ಯಾವ ಕಾನೂನುಗಳನ್ನೂ ಮಾಡಲಾಗಿಲ್ಲ. ೧೯೮೦ರ ದಶಕದಿಂದಲೂ ಗೃಹಕೃತ್ಯ ಕಾರ್ಮಿಕರಿಗೆ ಸಂಬಂಧಿಸಿದ ಮಸೂದೆಯು ಅನುಮೋದನೆಗಾಗಿ ಕಾದುಕುಳಿತಿದೆ. ರಾಜಕೀಯ ಪ್ರಭಾವಶೂನ್ಯತೆಯಿಂದಾಗಿ ಈ ಮಸೂದೆಗೆ ಸಂಬಂಧಿಸಿ ಯಾವುದೇ ಪ್ರಮಾಣದ ಚಳವಳಿ ಜರುಗಿಲ್ಲ. ಮಹಿಳೆಯರು ಅವರ ಲೈಂಗಿಕ ಕಾರಣದಿಂದಾಗಿಯಷ್ಟೆ ಹೇಗೆ ಅಮುಖ್ಯೀಕರಿಸಲ್ಪಟ್ಟಿದ್ದಾರೆ ಎಂಬುದಕ್ಕೆ ಇಲ್ಲಿ ನಾವು ಮತ್ತೊಂದು ಮುಖ್ಯ ನಿದರ್ಶನವನ್ನು ಕಾಣುತ್ತೇವೆ. ಮಹಿಳೆಯರು ಸುಸಂಬದ್ಧಿತ ಸಂಘಟನೆಯನ್ನೂ ಕಟ್ಟಿಕೊಳ್ಳಲಾರದಾಗಿದ್ದಾರೆ. ಏಕೆಂದರೆ, ಅದಕ್ಕಾಗಿ ಅವರ ಬಳಿ ಸಾಕಷ್ಟು ಸಮಯವಿಲ್ಲ. ಅಲ್ಲದೆ ಅವರು ಜೀವನದಲ್ಲಿ ಭಾರಿ ಜವಾಬ್ದಾರಿಗಳನ್ನೂ ಹೊತ್ತಿರುತ್ತಾರೆ, ಅನೇಕ ಸಾಮಾಜಿಕ ನಿಷೇಧಗಳಿಗೆ ಗುರಿಯಾಗಿರುತ್ತಾರೆ. ಸಮಾಜದಿಂದ ಅವರಿಗೆ ದೊರೆಯುತ್ತಿರುವ ಬೆಂಬಲವೂ ನಿಕೃಷ್ಟ.

ಹೀಗೆ, ಮೇಲಿನ ಹಾಗೂ ಅಂಥವೇ ಅನೇಕಾನೇಕ ನಿದರ್ಶನಗಳು ಒಂದು ಸ್ಪಷ್ಟ ವಾಸ್ತವಾಂಶವನ್ನು ಎತ್ತಿ ತೋರಿಸುತ್ತವೆ. ಅದೆಂದರೆ – ಈ ದೇಶದಲ್ಲಿ ಮಹಿಳೆಯರ ಸ್ಥಿತಿ ಸುಧಾರಿಸಬೇಕಾದರೆ ಸುಸಂಗತ ಮಹಿಳಾ ವಿಮೋಚನಾ ಚಳವಳಿ ಬೆಳೆಯಬೇಕಾಗಿದೆ. ಅಂಥ ಚಳವಳಿ ನಮ್ಮ ಸಮಾಜದಲ್ಲಿ ಕ್ರಿಯಾಶೀಲವಾಗಿರುವ ಎಲ್ಲ ಪಾರಂಪರಿಕ ಹಾಗೂ ಧಾರ್ಮಿಕ ಪ್ರತಿಬಂಧಕಗಳಿಗೂ ಅರ್ಥಪೂರ್ಣ ಸವಾಲು ಹಾಕಬೇಕಾಗಿದೆ. ಜೊತೆಗೆ ಮಹಿಳೆಯರು ಕಾನೂನಿನಲ್ಲಿ ದೂರವ್ಯಾಪೀ ಬದಲಾವಣೆಗಳನ್ನು ತರಬಲ್ಲಂಥ ರಾಜಕೀಯ ಪ್ರಭಾವವಿರುವ ಬಲಿಷ್ಠ ಸಂಘಟನೆಗಳನ್ನು ನಿರ್ಮಿಸಿಕೊಳ್ಳಬೇಕಾಗಿದೆ. ಹಾಗಾದರಷ್ಟೆ ಭಾರತದಲ್ಲಿ ಮಹಿಳೆಯರ ಸ್ಥಾನಮಾನ ಈಗಿರುವ ದ್ವಿತೀಯ ದರ್ಜೆಯ ಸ್ಥಿತಿಯಿಂದ ಪುರುಷರೊಂದಿಗೆ ಸಮಾನತೆಯ ಸ್ಥಿತಿಗೆ ಏರಬಲ್ಲುದು.

ಇಂಗ್ಲಿಷಿನಿಂದ ಕನ್ನಡಕ್ಕೆ : **ಕೆ. ಎಲ್. ಗೋಪಾಲಕೃಷ್ಣ ರಾವ್**

**ತನು ಮೆಹ್ತಾ ತಿವಾರಿ**
ನಂ. ೩೭, ೪ನೇ ಮಹಡಿ, 'ಯೂಸಫ್ ಬಿಲ್ಡಿಂಗ್', ಫ್ಲೋರಾ ಫೌಂಟೇನ್, ಮುಂಬೈ-೪೦೦ ೦೨೩

# ಎಸ್ತರ್ ಬೋಸರಪ್ ಅವರ ಕೃಷಿ ಮಹಿಳೆಯರ ದುಡಿಮೆಯ ವಿಶ್ಲೇಷಣೆ

೧೯೭೦ರ ದಶಕದಲ್ಲಿ ಮಹಿಳಾ ಅಭಿವೃದ್ಧಿ ಕ್ಷೇತ್ರಕ್ಕೆ ಒಂದು ಮಹತ್ತರ ತಿರುವು ನೀಡಿದವರು ಎಸ್ತರ್ ಬೋಸರಪ್. ೧೯೧೦ರಲ್ಲಿ ಡೆನ್ಮಾರ್ಕ್‌ನಲ್ಲಿ ಹುಟ್ಟಿದ ಇವರು ಅರ್ಥಶಾಸ್ತ್ರದ ಚಿಂತಕರಾಗಿ, ಸಂಶೋಧಕರಾಗಿ, ವಿಶ್ವಸಂಸ್ಥೆ, ಅಂತರ್‍ರಾಷ್ಟ್ರೀಯ ಸಂಘ ಸಂಸ್ಥೆ ಹಾಗೂ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಸಲಹೆಗಾರರಾಗಿ ದುಡಿದರು. ಇವರ ಪ್ರಕಟಣೆಗಳಲ್ಲಿ ''ಕಂಡೀಷನ್ಸ್ ಆಫ್ ಅಗ್ರಿಕಲ್ಚರಲ್ ಗ್ರೋತ್ (೧೯೬೫)'' ಮತ್ತು ''ಪಾಪ್ಯುಲೇಶನ್ ಅಂಡ್ ಟೆಕ್ನಲಾಜಿಕಲ್ ಛೇಂಜ್ (೧೯೮೧),'' ಇವು ಪ್ರಮುಖವಾದವು. ೧೯೭೦ರಲ್ಲಿ ಇವರು ಬರೆದ ''ವುಮನ್ಸ್ ರೋಲ್ ಇನ್ ಇಕನಾಮಿಕ್ ಡೆವಲಪ್‌ಮೆಂಟ್'' ಎಂಬ ಗ್ರಂಥವು ಆರ್ಥಿಕಾಭಿವೃದ್ಧಿ ಸಾಹಿತ್ಯದಲ್ಲಿ ಒಂದು ಮೈಲಿಗಲ್ಲು. ಅದುವರೆಗೂ ಆರ್ಥಿಕಾಭಿವೃದ್ಧಿಯಲ್ಲಿ ಮಹಿಳೆಯರನ್ನು, ಅವರ ಸಮಸ್ಯೆಗಳನ್ನು ಸಂಪೂರ್ಣವಾಗಿ ಹೊರಗಿಟ್ಟ ಅಂಶವನ್ನು ಮೊದಲಬಾರಿಗೆ ಜಗತ್ತಿಗೆ ತಿಳಿಯಪಡಿಸಿದ ಖ್ಯಾತಿ ಬೋಸರಪ್ ಅವರಿಗೆ ಸಲ್ಲುತ್ತದೆ. ಈ ಪುಸ್ತಕದಲ್ಲಿ ಅವರು ಉತ್ಪಾದನಾ ಕ್ಷೇತ್ರಕ್ಕೆ ಮಹಿಳೆಯರ ಕೊಡುಗೆ ಏನು, ಒಂದು ದೇಶದ ಆರ್ಥಿಕತೆಯಲ್ಲಿ ಮಹಿಳೆಯರನ್ನು ಪ್ರಮುಖ ದುಡಿಮೆಗಾರರನ್ನಾಗಿ ಗುರುತಿಸದಿರುವುದೇ ಸಂಪನ್ಮೂಲಗಳ ಅಸಮಾನ ಹಂಚಿಕೆಗೆ ಕಾರಣವಾಗಿದೆ ಎಂಬ ಅಂಶವನ್ನು ಎತ್ತಿ ತೋರಿಸಿದರು. ಇವರ ಚಿಂತನೆ ಮತ್ತು ಸಂಶೋಧನಾ ಕಾರ್ಯದ ಫಲವಾಗಿಯೇ ವಿಶ್ವಸಂಸ್ಥೆಯು ೧೯೭೫ ರಿಂದ ೧೯೮೫ರ ದಶಕವನ್ನು ಮಹಿಳಾ ದಶಕವನ್ನಾಗಿ ಘೋಷಿಸಿ ಮಹಿಳಾ ಅಭಿವೃದ್ಧಿಗೆ ಅನೇಕ ನೀತಿ ಮತ್ತು ಯೋಜನೆಗಳನ್ನು ಹಮ್ಮಿಕೊಂಡಿತು. ಇವರ ಸಂಶೋಧನೆಯು ಅಭಿವೃದ್ಧಿಯ ಖರ್ಚು ಮತ್ತು ಲಾಭಗಳಲ್ಲಿ ಲಿಂಗ ನಿಷ್ಪಕ್ಷಪಾತವಿರುತ್ತದೆ ಎಂಬ ಕಲ್ಪನೆಯನ್ನು ಪ್ರಶ್ನಿಸಿತು. ಮಹಿಳಾ ದಶಕ ಬಂತು, ಹೋಯಿತು. ಬಡ ರಾಷ್ಟ್ರಗಳ ಮಹಿಳೆಯರಿಗೆ ಅದರ ಗುರಿಗಳು ಯಾವುವು, ಯೋಜನೆಗಳೇನು, ಪರಿಣಾಮವೇನಾಯಿತು ಎಂಬುದರ ಬಗ್ಗೆ ತಿಳಿಯಲೇ ಇಲ್ಲ. ಆದರೆ ಅವರ ಹೋರಾಟಕ್ಕೆ ಬೋಸರಪ್ ಅವರ ಚಿಂತನೆ ಮತ್ತು ಸಂಶೋಧನೆಯು ಸ್ಫೂರ್ತಿಯ ಸೆಲೆಯಾಗಿ ಮುಂದುವರಿದಿದೆ. ಅಭಿವೃದ್ಧಿ ಚಿಂತನೆಗೆ ಸ್ತ್ರೀವಾದಿ ದೃಷ್ಟಿಕೋನ ನೀಡಿದವರಲ್ಲಿ ಬೋಸರಪ್ ಮೊದಲಿಗರು.

ಅಭಿವೃದ್ಧಿಶೀಲ ರಾಷ್ಟ್ರಗಳ ಯೋಜನೆ, ಅವುಗಳ ಆದ್ಯತೆ, ಗುರಿಗಳನ್ನು ಪಾಶ್ಚಿಮಾತ್ಯ ದೇಶಗಳ ಅಭಿವೃದ್ಧಿ ಸಂಸ್ಥೆಗಳು ಹಾಗೂ ದೇಶದ ಪುರುಷ ಮೌಲ್ಯಗಳು ನಿರ್ಧರಿಸುತ್ತವೆ. ಶ್ರೀಮಂತ ರಾಷ್ಟ್ರಗಳಿಂದ ಹರಿದುಬರುವ ಕೋಟ್ಯಂತರ ಡಾಲರ್ ಹಣವು ಬಡ ದೇಶಗಳ ಪುರುಷರ ಆದೇಶ, ಸಲಹೆಗಳ ಮೇರೆಗೆ ಅವರಿಗೆ ಅನುಕೂಲವಾದ ತಾಂತ್ರಿಕ ಬದಲಾವಣೆಗೆ ತಕ್ಕಂತೆ ವಿನಿಯೋಗವಾಗುತ್ತದೆ. ಹೀಗೆ ಬರುವ ಸಂಪನ್ಮೂಲಗಳು ಪರಿಸರ ಕುರಿತು ಮಹಿಳೆಯರ ದೂರದೃಷ್ಟಿ ಸಮುದಾಯದ ಸ್ವಾವಲಂಬನೆಗೆ ವಿರುದ್ಧವಾಗಿ ಆದರೆ ಪುರುಷರ ಬೇಡಿಕೆ ಕನಸುಗಳನ್ನು ಪೂರೈಸುವುದಕ್ಕಾಗಿ ವ್ಯಯವಾಗುತ್ತದೆ ಎಂಬ ಅಂಶವನ್ನು ಬೋಸರಪ್ ಬೆಳಕಿಗೆ ತಂದರು.

ಅಭಿವೃದ್ಧಿ ವಿಚಾರಗಳನ್ನು ಪಾಂಡಿತ್ಯಪೂರ್ಣವಾಗಿ ವಿವರಿಸುವ ಬೋಸರಪ್ ಹೊಸ ಯೋಜನಾ ಮಾದರಿಯನ್ನು ಪ್ರತಿಪಾದಿಸಿದರು. ೧೯೭೦ರ ದಶಕದ ಕೊನೆಯ ಭಾಗದಲ್ಲಿ ಅಭಿವೃದ್ಧಿ ಚಿಂತನೆಯು ಮಹಿಳೆಯರಲ್ಲಿ ಅಗಾಧವಾದ ಮಾನವ ಸಾಮರ್ಥ್ಯವಿದೆ, ಅವರಲ್ಲಿ



ದುಡಿಯುವ ಮನಸ್ಸು ಹಾಗೂ ಉತ್ಸಾಹ ಎರಡೂ ಇವೆ. ಕೈಗಾರಿಕೀಕರಣವನ್ನು ಕ್ಷಿಪ್ರಗೊಳಿಸುವ ಸಂದರ್ಭದಲ್ಲಿ ಅವರ ಸೇವೆಯನ್ನು ಸೂಕ್ಷ್ಮವಾಗಿ ಬಳಸಿಕೊಳ್ಳಬೇಕು ಎಂಬುದರ ಬಗ್ಗೆ ಆ ವರದಿ ಚಿಂತಿಸಿತು. ಇದಕ್ಕೆ ವಿರುದ್ಧವಾಗಿ ಬೋಸರಪ್ ತಮ್ಮ ನಿಲುವನ್ನು ಪ್ರತಿಪಾದಿಸಿದರು. ಈಗಾಗಲೇ ಮಹಿಳೆಯರು ಅಭಿವೃದ್ಧಿಗೆ ಸಾಕಷ್ಟು ಕೊಡುಗೆ ಸಲ್ಲಿಸಿದ್ದಾರೆ. ಅವರ ಶ್ರಮ ಬಳಕೆಯಾಗುತ್ತಿದೆ. ಆದರೆ ಅದು ಅಗೋಚರವಾಗಿದೆ ಮತ್ತು ನಿರ್ಲಕ್ಷಿಸಲ್ಪಟ್ಟಿದೆ. ಅದನ್ನು ಗುರುತಿಸಿ ಅಭಿವೃದ್ಧಿ ಲಾಭಗಳು ಮಹಿಳೆಯರನ್ನು ತಲುಪುವಂತೆ ಮಾಡುವುದು ಅಗತ್ಯ ಎಂದು ಹೇಳಿದರು. ಅವರ ಉತ್ತರವು ಹುರುಳಿಲ್ಲದ ಆಲಂಕಾರಿಕ ಮಾತಾಗಿರಲಿಲ್ಲ. ಬದಲಿಗೆ ವಾಸ್ತವತೆ, ಅಂಕಿ ಅಂಶಗಳಿಂದ ಕೂಡಿದ ವಿದ್ವತ್‌ಪೂರ್ಣವಾದ ಪ್ರತಿಕ್ರಿಯೆಯಾಗಿತ್ತು. ಕೃಷಿ, ಕೈಗಾರಿಕೆ ಹಾಗೂ ಅಸಂಘಟಿತ ಕ್ಷೇತ್ರಗಳಲ್ಲಿ ತೊಡಗಿರುವ ಮಹಿಳೆಯರ ದುಡಿಮೆಯನ್ನು ಅಧ್ಯಯನಾಧಾರಿತ ಅಂಕಿ-ಅಂಶಗಳ ಮೂಲಕ ಜಗತ್ತಿಗೆ ತೋರಿಸಿಕೊಟ್ಟರು. ''ಆಧುನಿಕ ಕ್ಷೇತ್ರದಲ್ಲಿ ಮಹಿಳೆಯರನ್ನು ನೇಮಿಸಿಕೊಂಡರೆ, ಪುರುಷರನ್ನು ನೇಮಿಸಿಕೊಂಡರೆ ಆಗುವುದಕ್ಕಿಂತ ಹೆಚ್ಚಿನ ವೇಗದಲ್ಲಿ ಆರ್ಥಿಕ ಬೆಳವಣಿಗೆಯನ್ನು ಸಾಧಿಸಲು ಸಹಾಯವಾಗುತ್ತದೆ'' ಎಂದು ಹೇಳಿ ಮಹಿಳೆಯರ ಶ್ರಮದ ಪ್ರಾಮುಖ್ಯತೆಯನ್ನು ಎತ್ತಿಹಿಡಿದರು. ಏಷ್ಯಾ, ಆಫ್ರಿಕಾ ಮತ್ತು ಲ್ಯಾಟಿನ್ ಅಮೆರಿಕಾದ ರಾಷ್ಟ್ರಗಳಲ್ಲಿ ಮಹಿಳೆಯರ ದುಡಿಮೆ ಬಗ್ಗೆ ಸಂಶೋಧನೆ ನಡೆಸಿದರು. ಮಹಿಳೆಯರ ದುಡಿಮೆಯ ಘನತೆಯನ್ನು ಪ್ರತಿಪಾದಿಸುವಾಗ ಆಯಾ ದೇಶಗಳ ಉತ್ಪಾದನಾ ಕ್ರಮಗಳಲ್ಲಿ ಕಂಡುಬರುವ ಸಾಂಸ್ಕೃತಿಕ ಮತ್ತು ಐತಿಹಾಸಿಕ ವಿಶಿಷ್ಟತೆಗೆ ಹೆಚ್ಚು ಒತ್ತು ನೀಡಿದರು.

**ಹೇಮಲತಾ ಎಚ್. ಎಂ.**

ಆಫ್ರಿಕಾ ದೇಶಗಳಲ್ಲಿ ಕಂಡುಬರುವ ಬಹುಪತ್ನಿತ್ವ ವ್ಯವಸ್ಥೆಗೆ ಆರ್ಥಿಕ ವಿಶ್ಲೇಷಣೆ ನೀಡಿದರು. 'ಬಹುಪತ್ನಿತ್ವದ ಅರ್ಥಶಾಸ್ತ್ರವನ್ನು' ಹೀಗೆ ವಿವರಿಸುತ್ತಾರೆ: ''ಈ ದೇಶಗಳಲ್ಲಿ ಕಂಡುಬರುವ ವಿವಿಧ ರೀತಿಯ ಕುಟುಂಬಗಳಿಗೂ ಮತ್ತು ಭೂ ಗೇಣಿ ಪದ್ಧತಿಗೂ ಹತ್ತಿರದ ಸಂಬಂಧವಿದೆ. ಸರತಿ ವ್ಯವಸಾಯ ಪದ್ಧತಿಯಿರುವ ಪ್ರದೇಶಗಳಲ್ಲಿ ಆಹಾರ ಬೆಳೆಯುವ ಕೆಲಸವನ್ನು ಸಂಪೂರ್ಣವಾಗಿ ಹೆಂಗಸರೇ ಮಾಡುತ್ತಾರೆ. ಮರಗಳನ್ನು ಕಡಿದು ಭೂಮಿಯನ್ನು ಉಳುವುದಕ್ಕೆ ಸಿದ್ಧಪಡಿಸುವ ಕೆಲಸವನ್ನು ಮಾತ್ರ ಗಂಡಸರು ಮತ್ತು ಗಂಡುಮಕ್ಕಳು ಮಾಡುತ್ತಾರೆ. ಗಂಡುಮಕ್ಕಳು ಮತ್ತು ಹೆಂಗಸರು ಸೇರಿ ಮಾಡುವ ಕೆಲಸಗಳಿಂದ ಮನೆ ಯಜಮಾನ ಶ್ರೀಮಂತನಾಗುತ್ತಾನೆ. ಹೆಂಡತಿಯರ ದುಡಿಮೆಯಿಂದಲೇ ಕುಟುಂಬದ ಆದಾಯ ಹೆಚ್ಚಾಗುತ್ತದೆ. ಸಂತಾನಾಭಿವೃದ್ಧಿಯಾದಂತೆ ಕುಟುಂಬದ ನೆಲೆಯು ಸ್ಥಿರವಾಗುತ್ತಾ ಹೋಗುತ್ತದೆ. ಯಾವ ಕುಟುಂಬದಲ್ಲಿ ವ್ಯವಸಾಯದ ಜವಾಬ್ದಾರಿ ಮತ್ತು ಮನೆ ಕೆಲಸ ಎರಡೂ ಮಹಿಳೆಯರ ಮೇಲಿರುತ್ತದೋ ಅಂತಹ ಕುಟುಂಬದಲ್ಲಿ ಹೆಂಡತಿಯು ಸಹಜವಾಗಿ ತನ್ನ ಗಂಡ ಮತ್ತೊಬ್ಬ ಹೆಂಡತಿಯನ್ನು ಕರೆ ತಂದರೆ ಅವಳನ್ನು ಸ್ವಾಗತಿಸುತ್ತಾಳೆ. ಏಕೆಂದರೆ ದಿನನಿತ್ಯದ ಕೆಲಸದಲ್ಲಿ ಅವಳು ಸಹಾಯ ಮಾಡುತ್ತಾಳೆ ಎಂದು. ಆಫ್ರಿಕಾದ ಕೆಲವು ಪ್ರದೇಶಗಳಲ್ಲಿ ಶೇ. ೮೫ರಷ್ಟು ಮಹಿಳೆಯರು ಏಕಪತ್ನಿತ್ವಕ್ಕಿಂತ ಬಹುಪತ್ನಿತ್ವಕ್ಕೆ ಆದ್ಯತೆ ನೀಡುವುದು ಕಂಡುಬರುತ್ತದೆ. ಅಲ್ಲದೆ, ವೇತನ ನೀಡಿ ಹೊರಗಿನಿಂದ ಕಾರ್ಮಿಕರನ್ನು ತರುವ ಬದಲು ವೇತನವಿಲ್ಲದೆ ದುಡಿಯುವ ಹೆಂಡತಿಯರನ್ನು ತರುವುದು ಹೆಚ್ಚು ಲಾಭದಾಯಕ'' ಎಂಬ ಆರ್ಥಿಕ ಅಂಶವನ್ನು ಬೋಸರಪ್ ತಮ್ಮ ವಿಶ್ಲೇಷಣೆಯ ಮೂಲಕ ತೋರಿಸಿಕೊಟ್ಟರು.

ಯೂರೋಪ್ ಬಿಟ್ಟು ಉಳಿದ ದೇಶಗಳ ಸಂಸ್ಕೃತಿಗಳಲ್ಲಿ ಸಾಮಾಜಿಕ ಮತ್ತು ಮಾನವ ಸಂಬಂಧಗಳ ಸಂಕೀರ್ಣತೆಯನ್ನು ಆಳವಾಗಿ ಅಧ್ಯಯನ ಮಾಡಿದ ಬೋಸರಪ್ ಮಹಿಳಾ ಅಧ್ಯಯನದಲ್ಲಿ ಹೊಸ ಚಿಂತನೆಯನ್ನು ಹುಟ್ಟುಹಾಕಿದರು. ಏಷ್ಯಾ, ಆಫ್ರಿಕಾ ಮತ್ತು ಲ್ಯಾಟಿನ್ ಅಮೆರಿಕಾದ ದೇಶಗಳಲ್ಲಿ ನಡೆಸಿದ ಕ್ಷೇತ್ರಾಧ್ಯಯನವನ್ನು ಆಧರಿಸಿ ಹೊರತಂದ ಗ್ರಂಥ ''ವುಮನ್ಸ್

ರೋಲ್ ಇನ್ ಇಕನಾಮಿಕ್ ಡೆವಲಪ್‌ಮೆಂಟ್'' ಮಹಿಳಾ ಅಧ್ಯಯನದ ಸಾಹಿತ್ಯದಲ್ಲಿ ಒಂದು ಮೈಲಿಗಲ್ಲಾಗಿದೆ. ಈ ಗ್ರಂಥದಲ್ಲಿ ಅವರು ಗ್ರಾಮ ಮತ್ತು ನಗರ ಪ್ರದೇಶಗಳಲ್ಲಿ ದುಡಿಯುವ ಮಹಿಳೆಯರ ಕುರಿತು ಪ್ರಸ್ತಾಪಿಸಿದ್ದಾರೆ. ಪ್ರಸ್ತುತ ಲೇಖನದಲ್ಲಿ ಗ್ರಾಮೀಣ ಮಹಿಳೆಯರ ದುಡಿಮೆ, ಶ್ರಮ ವಿಭಜನೆ, ಸ್ಥಾನ, ಕೃಷಿ, ಕೂಲಿ, ಕೆಲಸದ ಅವಧಿ ಮುಂತಾದವುಗಳ ಬಗ್ಗೆ ಬೋಸರಪ್ ಮಾಡಿರುವ ವಿಶ್ಲೇಷಣೆಯನ್ನು ಮಾತ್ರ ತೆಗೆದುಕೊಳ್ಳಲಾಗಿದೆ. ಅಧ್ಯಯನದ ಅಂಕಿ-ಅಂಶಗಳು ೩೫ ವರ್ಷ ಹಳೆಯದಾದರೂ ಮಾಹಿತಿ ವಿಶ್ಲೇಷಣೆಯು ಈಗಲೂ ಪ್ರಸ್ತುತವಾಗಿರುವುದರಿಂದ ಅಂಕಿ-ಅಂಶಗಳನ್ನು ಬಿಟ್ಟು ವಿಶ್ಲೇಷಣೆಯನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗಿದೆ.

ವ್ಯವಸಾಯ ಪದ್ಧತಿ, ಆಹಾರ ಮತ್ತು ವಾಣಿಜ್ಯ ಬೆಳೆಗಳನ್ನು ಬೆಳೆಯುವುದು, ಲಿಂಗ ಶ್ರಮ ವಿಭಜನೆ, ಪುರುಷರ ವಲಸೆ, ಜನಸಂಖ್ಯೆ ಹೆಚ್ಚಳ ಮತ್ತು ವಸಾಹತು ವ್ಯವಸ್ಥೆಯನ್ನು ಆಧಾರವಾಗಿಟ್ಟುಕೊಂಡು ಬೋಸರಪ್ ಆಫ್ರಿಕಾದ ಗ್ರಾಮೀಣ ಮಹಿಳೆಯರ ದುಡಿಮೆ ಯನ್ನು ವಿಶ್ಲೇಷಿಸುತ್ತಾರೆ. ಆಹಾರ ಉತ್ಪನ್ನಗಳ ಕೃಷಿಯಲ್ಲಿ ಮಹಿಳೆಯರ ಭಾಗವಹಿಸುವಿಕೆ ಅಧಿಕವಾಗಿದ್ದರೆ ವಾಣಿಜ್ಯ ಬೆಳೆಗಳಲ್ಲಿ ಗಂಡಸರ ಭಾಗವಹಿಸುವಿಕೆ ಅಧಿಕ ವಾಗಿರುತ್ತದೆ. ಯೂರೋಪಿಯನ್ನರು ಆಫ್ರಿಕಾವನ್ನು ಆಕ್ರಮಿಸಿಕೊಂಡ ನಂತರ ಯೂರೋಪಿಯನ್ನರ ಕೃಷಿ ಪದ್ಧತಿ ಜಾರಿಗೆ ಬಂದಿತು. ಗಂಡಸರನ್ನು ಇತರ ಕೆಲಸ ಗಳಿಗೆ ನೇಮಿಸಿಕೊಂಡಿದ್ದರಿಂದ ಹೆಂಗಸರ ಕೃಷಿ ಕೆಲಸ ಹೆಚ್ಚಾಗುತ್ತಾ ಹೋಯಿತು. ಹಿಂದಿನ ಅಧ್ಯಯನಗಳು ವ್ಯವಸಾಯವು ಸ್ತ್ರೀ ಪ್ರಧಾನವಾಗಿದೆ ಎಂದು ತೋರಿಸಿ ಕೊಟ್ಟಿದ್ದವು. ಆದರೆ ಎಸ್ತರ್ ಬೋಸರಪ್ ಅದು ಸ್ತ್ರೀ ಪ್ರಧಾನವಾಗಲು ಕಾರಣಗಳೇನು ಎಂಬುದನ್ನು ಬೆಳಕಿಗೆ ತಂದರು. ವಯಸ್ಸಾದ ಗಂಡಸರು ದುಡಿಮೆ ನಿಲ್ಲಿಸಿದರು. ಮಕ್ಕಳು ಶಾಲೆಗೆ ಹೋಗಲು ಪ್ರಾರಂಭಿಸಿದರು. ವಯಸ್ಕ ಗಂಡಸರು ವಲಸೆ ಹೋದರು. ಗ್ರಾಮದಲ್ಲಿ ಉಳಿದ ಹೆಂಗಸರು ಕೈ ಕೆಲಸದಲ್ಲಿ ತೊಡಗುವುದು ಅನಿವಾರ್ಯ ವಾಯಿತು. ಕೃಷಿಯ ಅರ್ಧದಷ್ಟು ಕೆಲಸವನ್ನು, ಕೆಲವು ಕಡೆ ಶೇ. ೮೦ರಷ್ಟು ಕೆಲಸವನ್ನು, ಹೆಂಗಸರೇ ಮಾಡುವುದು ಕಂಡುಬರುತ್ತದೆ. ಕೆಲಸದ ಅವಧಿಯನ್ನು ನೋಡಿದರೂ ಹೆಂಗಸರು ಗಂಡಸರಿಗಿಂತ ಹೆಚ್ಚು ಅವಧಿ ಕೆಲಸ ಮಾಡುತ್ತಾರೆ. ಇದರಿಂದ ಆಫ್ರಿಕಾದ ರಾಷ್ಟ್ರಗಳಲ್ಲಿ ಕೃಷಿಯು 'ಸ್ತ್ರೀ ಕೃಷಿ' ಎನಿಸಿಕೊಂಡಿದೆ. ಪುರುಷ ಪ್ರಧಾನ ಕೃಷಿ ವ್ಯವಸ್ಥೆಯನ್ನು ನೋಡಿದ್ದ ಯೂರೋಪಿಯನ್ನರಿಗೆ ಆಫ್ರಿಕಾದ ಕೃಷಿ ಪದ್ಧತಿ ಹಾಗೂ ಅಲ್ಲಿಯ ಶ್ರಮ ವಿಭಜನೆ ನೋಡಿ 'ಆಫ್ರಿಕಾದ ಗಂಡಸರು ಸೋಮಾರಿಗಳು' ಎಂಬ ಕಲ್ಪನೆ ಮೂಡಿತು. ಅದನ್ನೇ ಆಧಾರವಾಗಿಟ್ಟುಕೊಂಡು ನಿರುದ್ಯೋಗ ಸೃಷ್ಟಿಸಿ ರೈತರು ವಾಣಿಜ್ಯ ಬೆಳೆಗಳನ್ನು ಬೆಳೆಯಲು ಒತ್ತಾಯಿಸಿದರು. ಅವಿವಾಹಿತ ಗಂಡಸರನ್ನು ಕಟ್ಟಡ ನಿರ್ಮಾಣ, ಗಣಿ ಮತ್ತು ತೋಟಗಾರಿಕೆಗಳಲ್ಲಿ ನೇಮಿಸಿಕೊಂಡಿದ್ದರಿಂದ ಕೃಷಿ ಕೆಲಸವನ್ನು ಹೆಂಗಸರೇ ಮಾಡುವಂತಾಯಿತು.

ಲ್ಯಾಟಿನ್ ಅಮೆರಿಕಾದಲ್ಲಿ ಇಂಡಿಯನ್ ಮತ್ತು ನೀಗ್ರೋ ಸಮುದಾಯಗಳಲ್ಲಿ ಕೃಷಿ ಕೆಲಸವು ಸಂಪೂರ್ಣ ವಾಗಿ ಹೆಂಗಸರ ಕೈಯಲ್ಲೇ ಇದೆ. ಇಂಡಿಯನ್ ಬುಡಕಟ್ಟು




ಜನರಲ್ಲಿ ಹೆಂಗಸರು ಗಂಡಸರಿಗಿಂತ ಹೆಚ್ಚು ದುಡಿಯುತ್ತಾರೆ. ಕೃಷಿಪದ್ಧತಿ (ಸರತಿ ಅಥವಾ ಖಾಯಂ ಪದ್ಧತಿ), ಭೂ ಒಡೆತನ, ಸಾಮಾಜಿಕ ವ್ಯವಸ್ಥೆ ರೈತ ಸಮಾಜವೇ ಅಥವಾ ಬುಡಕಟ್ಟು ಸಮಾಜವೇ ಎಂಬ ಅಂಶಗಳು ಕೃಷಿ ಮಹಿಳೆಯರ ದುಡಿಮೆಯನ್ನು ನಿರ್ಧರಿ ಸುತ್ತವೆ. ಜನಸಂಖ್ಯೆ ಹೆಚ್ಚಳಕ್ಕೂ ಮತ್ತು ಸ್ತ್ರೀಯರ ಕೃಷಿ ಕೆಲಸಕ್ಕೂ ಸಂಬಂಧವಿದೆ. ಜನಸಾಂದ್ರತೆ ಕಡಿಮೆಯಿದ್ದು ಸರತಿ ಕೃಷಿ ಪದ್ಧತಿಯಿದ್ದರೆ ಅಲ್ಲಿ ಹೆಂಗಸರ ಕೆಲಸದ ಹೊರೆ ಹೆಚ್ಚಾಗಿರುತ್ತದೆ. ಗಂಡಸರು ಕಡಿಮೆ ಕೆಲಸ ಮಾಡುತ್ತಾರೆ. ಜನಸಾಂದ್ರತೆ ಹೆಚ್ಚಾಗಿದ್ದು ಖಾಯಂ ಕೃಷಿ ಪದ್ಧತಿಯಿದ್ದರೆ ಗಂಡಸರಿಗೆ ಕೆಲಸ ಜಾಸ್ತಿಯಿರುತ್ತದೆ. ಆದರೆ ಇಲ್ಲಿ ಹೆಂಗಸರು ಮನೆಗೆಲಸ, ಪಶುಪಾಲನೆ, ಬೀಜ ಸಂಸ್ಕರಣೆ ಮತ್ತಿತರ ಕೃಷಿ ಉಪ ಕಸುಬುಗಳಲ್ಲಿ ತೊಡಗಿರುತ್ತಾರೆ.

ಕುಟುಂಬ ಹಾಗೂ ಕೃಷಿಕ್ಷೇತ್ರಕ್ಕೆ ಮಹಿಳೆಯರ ಕೊಡುಗೆಯನ್ನು ಅಂಕಿ-ಅಂಶದಿಂದ ತಿಳಿಯಬಹುದು. ಆಫ್ರಿಕಾದ ಯೊರುಬಾದಲ್ಲಿ ಶೇ. ೯೩ ಕುಟುಂಬಗಳಲ್ಲಿ ಗಂಡ, ಮಕ್ಕಳು ಮತ್ತು ಮನೆಯ ಬೇಡಿಕೆ ಅಗತ್ಯಗಳನ್ನು ಪೂರೈಸುವವರು ಸ್ತ್ರೀಯರು. ಕೇವಲ ಶೇ. ೫ರಷ್ಟು ಮಹಿಳೆಯರು ಹಣ, ಆಹಾರ ಮತ್ತು ಬಟ್ಟೆಗಾಗಿ ಗಂಡಂದಿರನ್ನು ಅವಲಂಬಿಸಿರುತ್ತಾರೆ. ಶೇ. ೨ರಷ್ಟು ಮಹಿಳೆಯರು ಮನೆಗೆಲಸದಲ್ಲಿ ತೊಡಗಿರುತ್ತಾರೆ. ಐದನೇ ಒಂದು ಭಾಗದಷ್ಟು ಮಹಿಳೆಯರು ಯಾವುದಕ್ಕೂ ಗಂಡಸರನ್ನು ಅವಲಂಬಿಸಿರುವುದಿಲ್ಲ. ಬದಲಿಗೆ ಗಂಡಂದಿರ ಖರ್ಚಿಗೆ ಇವರೇ ಹಣ ಕೊಡಬೇಕಾಗುತ್ತದೆ. ಆಫ್ರಿಕಾದಲ್ಲಿ ಕುಟುಂಬದ ಒಟ್ಟು ಆದಾಯಕ್ಕೆ ಸ್ತ್ರೀಯರ ಕೊಡುಗೆ ಶೇ. ೪೪ರಷ್ಟಿರುತ್ತದೆ.

ಒಟ್ಟಿನಲ್ಲಿ, ಗ್ರಾಮೀಣ ಸಮುದಾಯದಲ್ಲಿ ಹೆಂಗಸರ ಪರಿಸ್ಥಿತಿಯನ್ನು ವಿಶ್ಲೇಷಿಸಿದರೆ ಎರಡು ಪ್ರಕಾರದ ಗುಂಪು ಗಳನ್ನು ನೋಡಬಹುದು. ಒಂದು ಸರತಿ ಕೃಷಿ ಪದ್ಧತಿ ಇರುವ ಸಮಾಜ. ಅಲ್ಲಿ ಹೆಚ್ಚಿನ ಕೆಲಸವನ್ನು ಮಹಿಳೆಯರೇ ಮಾಡುತ್ತಾರೆ. ಬಹುಪತ್ನಿತ್ವ ಅಸ್ತಿತ್ವದಲ್ಲಿ ಇರುತ್ತದೆ. ವಧುವಿಗೆ ಹಣ ಕೊಟ್ಟು ವಿವಾಹವಾಗುವ ಪದ್ಧತಿ ಇರುತ್ತದೆ. ಸ್ತ್ರೀಯರು ಹೆಚ್ಚು ಶ್ರಮಜೀವಿಗಳಾಗಿ ಇರುತ್ತಾರೆ. ಅವರಿಗೆ ಗಂಡಂದಿರ ಬೆಂಬಲವಿರುವುದಿಲ್ಲ. ಅವರ ಓಡಾಟದ ಮೇಲೆ ನಿರ್ಬಂಧಗಳಿರುವುದಿಲ್ಲ. ತಾವು ಬೆಳೆದ ಬೆಳೆಗಳನ್ನು ಮಾರಿ ಆರ್ಥಿಕ ಸ್ವಾವಲಂಬನೆಯನ್ನು ಹೊಂದಿರುತ್ತಾರೆ.

ಇನ್ನೊಂದು ಗುಂಪಿನಲ್ಲಿ ಸ್ಥಿರ ವ್ಯವಸಾಯ ಪದ್ಧತಿ ಯಿದ್ದು ಉಳುಮೆಗೆ ನೇಗಿಲನ್ನು ಬಳಸುತ್ತಾರೆ. ಹೆಂಗಸರು ಗಂಡಸರಿಗಿಂತ ಕಡಿಮೆ ಕೆಲಸ ಮಾಡುತ್ತಾರೆ. ಕೃಷಿಯ ಶ್ರಮ ಆಧಾರಿತ ಕೆಲಸಗಳನ್ನು ಪುರುಷರು ಮಾಡುತ್ತಾರೆ. ಇಲ್ಲಿಯೂ ಬಹುಪತ್ನಿತ್ವ ರೂಢಿಯಲ್ಲಿದ್ದರೂ ವರದಕ್ಷಿಣೆ ಕೊಡುವ ಪದ್ಧತಿಯಿರುತ್ತದೆ. ಹೆಂಡತಿ ಸಂಪೂರ್ಣವಾಗಿ ಗಂಡನನ್ನು ಅವಲಂಬಿಸಿರುತ್ತಾಳೆ. ಗಂಡನಿಗೂ ಹೆಂಡತಿ ಮಕ್ಕಳನ್ನು ನೋಡಿಕೊಳ್ಳಬೇಕೆಂಬ ಒಪ್ಪಂದವಿರುತ್ತದೆ. ಮೊದಲ ಗುಂಪಿಗೆ ಸೇರಿದ ಸಮುದಾಯಗಳು ದಕ್ಷಿಣ ಆಫ್ರಿಕಾದ ಬುಡಕಟ್ಟು ಜನಾಂಗ ಮತ್ತು ಆಗ್ನೇಯ ಏಷ್ಯಾದಲ್ಲಿ ಕಂಡುಬರುತ್ತವೆ. ಎರಡನೇ ಪ್ರಕಾರದ ಸಮುದಾಯಗಳು ಅರಬ್, ಹಿಂದು ಮತ್ತು ಚೀನಿ ಸಂಸ್ಕೃತಿಗಳಲ್ಲಿ ಕಂಡುಬರುತ್ತವೆ.

ವಸಾಹತು ರಾಷ್ಟ್ರಗಳಲ್ಲಿ ಯೂರೋಪಿಯನ್ನರ ಆಡಳಿತ ವ್ಯವಸ್ಥೆ ಮಹಿಳೆಯರ ಸ್ಥಿತಿಯಲ್ಲಿ ಬದಲಾವಣೆ ತಂದಿತು. ಅವರ ಭೂ ಕಾಯಿದೆ ಪುರುಷರಿಗೆ ಒಡೆತನ ನೀಡಿದರೆ ಅದುವರೆಗೂ ಮಹಿಳೆಯರು ಹೊಂದಿದ್ದ ಭೂ ಸ್ವಾಯತ್ತತೆಯನ್ನು ಕಳೆದುಕೊಳ್ಳುವಂತೆ ಮಾಡಿತು. ಕೃಷಿ ಅಭಿವೃದ್ಧಿ, ವಾಣಿಜ್ಯ ಬೆಳವಣಿಗೆ ಹಾಗೂ ತಾಂತ್ರಿಕ ಬದಲಾವಣೆ ತರುವಾಗ ಹೆಂಗಸರ ಶ್ರಮವನ್ನು ಗಣನೆಗೆ ತೆಗೆದುಕೊಳ್ಳಲಿಲ್ಲ. ಗಂಡಸರ ಶ್ರಮ ಮತ್ತು ಉತ್ಪಾದನೆ ಯನ್ನು ಹೆಚ್ಚಿಸಲು ಗಮನ ಕೊಟ್ಟರು. ವ್ಯವಸಾಯವು ಗಂಡಸರ ಕೆಲಸ, ಸ್ತ್ರೀಯರಿಗಿಂತ ಪುರುಷರೇ ಉತ್ತಮ ಕೃಷಿಕರಾಗಬಹುದೆಂದು ನಂಬಿ ಎಲ್ಲಾ ಪ್ರಯತ್ನಗಳು ಪುರುಷರ ಉತ್ಪಾದನೆಯನ್ನು ಹೆಚ್ಚಿಸುವುದಕ್ಕೆ ಸೀಮಿತ ವಾಗಿರುತ್ತಿತ್ತು. ಕೃಷಿ ಅಭಿವೃದ್ಧಿಯಾಗಬೇಕೆಂದರೆ 'ಸ್ತ್ರೀ ಕೃಷಿ'ಯಿಂದ 'ಪುರುಷ ಕೃಷಿಗೆ' ಬದಲಾಯಿಸುವುದು ಅಗತ್ಯ ಎಂದು ತಿಳಿದು ಆ ನಿಟ್ಟಿನಲ್ಲೇ ಕೆಲಸ ಮಾಡಿದರು. ಕೃಷಿ ಸ್ತ್ರೀ ಪ್ರಧಾನವಾಗಿದ್ದರೂ ಹೊಸ ವಿಧಾನಗಳನ್ನು ಅಳವಡಿಸಿಕೊಳ್ಳುವಾಗ ಸ್ತ್ರೀಯರನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿ ಗಂಡಸರಿಗೆ ಮಾತ್ರ ತರಬೇತಿ ಮತ್ತು ಮಾಹಿತಿ ಗಳನ್ನು ನೀಡಲಾಯಿತು. ಸೆನೆಗಲ್, ಪಶ್ಚಿಮ ಆಫ್ರಿಕಾ ಮತ್ತು ಚೀನಾದ ತಂತ್ರಜ್ಞರು ಭತ್ತದ ಉತ್ಪಾದನೆಯಲ್ಲಿ ಉತ್ತಮ ತಂತ್ರಜ್ಞಾನವನ್ನು ಜಾರಿಗೆ ತರಲು ವಿಫಲ ರಾದರು. ಏಕೆಂದರೆ ತಂತ್ರಜ್ಞಾನವನ್ನು ಸ್ತ್ರೀಯರಿಗೆ ಕಲಿಸದೆ ಪುರುಷರಿಗೆ ಮಾತ್ರ ಕಲಿಸಲು ಪ್ರಯತ್ನಿಸಿದರು.

ಗಂಡಸರು ವಾಣಿಜ್ಯ ಬೆಳೆಗಳನ್ನು ಬೆಳೆಯುತ್ತಾ ಹೋದಂತೆ ಹೆಂಗಸರು ಆಹಾರ ಬೆಳೆಗಳಲ್ಲೆ ಉಳಿದು ಅವರಿಬ್ಬರ ನಡುವಿನ ಉತ್ಪಾದನಾ ಶಕ್ತಿಯ ಅಂತರ ಹೆಚ್ಚಾಯಿತು. ಕೊನೆಗೆ ಸ್ತ್ರೀಯರು ಕೃಷಿ ಕೆಲಸದಿಂದ ಹೊರಬರುವಂತಾಯಿತು. ಗಂಡಸರ ಆದಾಯ ಹೆಚ್ಚಾದಂತೆ ಹೆಂಗಸರನ್ನು ಕೃಷಿ ಕೆಲಸದಿಂದ ದೂರವಿಡ ಲಾಯಿತು. ಕೃಷಿಕ್ಷೇತ್ರದಲ್ಲಿ ನಡೆಸಲಾದ ಸಂಶೋಧನಾ ಕಾರ್ಯಗಳು ವಾಣಿಜ್ಯ ಬೆಳೆಗಳಿಗೆ ಸಂಬಂಧ ಪಟ್ಟಿರುತ್ತಿದ್ದವು. ಸರ್ಕಾರಗಳೂ ವಾಣಿಜ್ಯ ಬೆಳೆಗಳಿಗೆ ಪ್ರೋತ್ಸಾಹ ನೀಡಿತೆ ಹೊರತು ಹೆಂಗಸರು ಬೆಳೆಯುತ್ತಿದ್ದ

ಆಹಾರ ಬೆಳೆಗಳಿಗೆ ನೀಡಲಿಲ್ಲ. ವಾಣಿಜ್ಯ ಬೆಳೆಯಿಂದ ಬಂದ ಲಾಭವನ್ನು ಪುರುಷರು ಕೃಷಿ ಉತ್ಪಾದನೆಯನ್ನು ಮತ್ತಷ್ಟು ಹೆಚ್ಚಿಸಲು ಬಂಡವಾಳವನ್ನಾಗಿ ಬಳಸಿಕೊಂಡು ಆರ್ಥಿಕ ಭದ್ರತೆಯನ್ನು ಪಡೆಯುತ್ತಾ ಹೋದರು. ಇದಕ್ಕೆ ವಿರುದ್ಧವಾಗಿ ಹೆಂಗಸರು ಕಡಿಮೆ ಆದಾಯದಿಂದ ಆರ್ಥಿಕವಾಗಿ ಪರಾವಲಂಬಿಗಳಾಗುತ್ತಾ ಬಂದರು. ಪುರುಷರ ಪ್ರತಿಷ್ಠೆ ಹೆಚ್ಚಾದಂತೆ ಸ್ತ್ರೀಯರ ಸ್ಥಾನ ಕುಂದುತ್ತಾ ಬಂದಿತು. ಅವರು ಮಾಡುವ ಕೆಲಸಗಳಲ್ಲೂ ಬದಲಾವಣೆಯುಂಟಾಯಿತು. ಗಂಡಸರು ಯಂತ್ರಗಳನ್ನು ಬಳಸಿದರೆ ಸ್ತ್ರೀಯರು ದೈಹಿಕ ಶ್ರಮದಲ್ಲೇ ಉಳಿದರು. ರಾಸಾಯನಿಕ ಗೊಬ್ಬರ ಸಿಂಪಡಿಸುವುದು ಗಂಡಸರ ಕೆಲಸವಾದರೆ ಜೈವಿಕ ಗೊಬ್ಬರ ಹರಡುವುದು ಹೆಂಗಸರ ಕೆಲಸವಾಯಿತು. ಗಂಡಸರು ಬೈಸಿಕಲ್ ಅಥವಾ ಲಾರಿ ಬಳಸಿದರೆ ಸ್ತ್ರೀಯರು ತಲೆಯ ಮೇಲೆ ಹೊರಬೇಕಾಯಿತು. ಒಟ್ಟಿನಲ್ಲಿ ಕೃಷಿ ಆಧುನೀಕರಣಗೊಂಡಂತೆ ಪುರುಷರ ಪ್ರತಿಷ್ಠೆ ಹೆಚ್ಚಾಯಿತು. ಸ್ತ್ರೀ ಪುರುಷರ ನಡುವಿನ ಜ್ಞಾನ ಮತ್ತು ತರಬೇತಿಯ ಅಂತರ ಹೆಚ್ಚಾಯಿತು. ಸ್ತ್ರೀಯರು ಭೂಮಿ ಹಕ್ಕನ್ನು ಕಳೆದುಕೊಂಡರು. ಆಧುನೀಕರಣ ಪುರುಷರನ್ನು ಸ್ವತಂತ್ರ ಕೃಷಿಕರನ್ನಾಗಿಸಿದರೆ ಸ್ತ್ರೀಯರನ್ನು ಪರಾವಲಂಬಿಗಳನ್ನಾಗಿಸಿತು.

ಗ್ರಾಮೀಣ ಪ್ರದೇಶದಲ್ಲಿ ಜಾರಿಗೆ ತಂದ ಪ್ರಾಥಮಿಕ ಶಿಕ್ಷಣವೂ ಸ್ತ್ರೀಯರಿಗೆ ವಿರುದ್ಧವಾಗಿ ಕೆಲಸ ಮಾಡಿತು. ಅದು ಸ್ತ್ರೀ ಪುರುಷರ ನಡುವಿನ ತಾಂತ್ರಿಕ ಮತ್ತು ಸಾಂಸ್ಕೃತಿಕ ಅಂತರವನ್ನು ಹೆಚ್ಚಿಸಿತು. ಗಂಡುಮಕ್ಕಳು ಶಾಲೆಗೆ ಹೋದರೆ ಹೆಣ್ಣುಮಕ್ಕಳು ಮನೆಯಲ್ಲೇ ಉಳಿದರು. ಒಂದು ಕಾಲದಲ್ಲಿ ಎಲ್ಲಾ ಗ್ರಾಮೀಣ ಜನರ ಚಿಹ್ನೆಗಳಾಗಿದ್ದ ಅನಕ್ಷರತೆ, ಸಾಂಪ್ರದಾಯಿಕ ನಡವಳಿಕೆ, ಮೂಢನಂಬಿಕೆ ಮುಂತಾದ ಹಿಂದುಳಿಯುವಿಕೆಯ ಚಿಹ್ನೆಗಳು ಕ್ರಮೇಣ ಸ್ತ್ರೀಯರ ಗುಣಲಕ್ಷಣಗಳ ಚಿಹ್ನೆಗಳಾದವು. ಶಾಲೆಗೆ ಹೋದ ಗಂಡುಮಕ್ಕಳು ಸ್ವಲ್ಪಮಟ್ಟಿನ ವೈಜ್ಞಾನಿಕ ಮನೋಭಾವವನ್ನು ಬೆಳೆಸಿಕೊಂಡರು. ಆದರೆ ಅನಕ್ಷರಸ್ಥ ತಾಯಂದಿರು ಹೆಣ್ಣುಮಕ್ಕಳಿಗೆ ಹಳೆ ಪದ್ಧತಿ ಹಾಗೂ ಮೂಢನಂಬಿಕೆಗಳನ್ನು ಕಲಿಸಿದರು. ಜೊತೆಗೆ ಅವರು ಆಧುನಿಕ ಕೃಷಿ ವಿಧಾನಗಳನ್ನು ಕಲಿಯುವುದರಿಂದ ವಂಚಿತರಾದರು.

ಕೃಷಿಕ್ಷೇತ್ರದ ಪ್ರಮುಖ ಭಾಗವಾಗಿರುವ ಅನಿಶ್ಚಿತ ಮಹಿಳಾ ಕೂಲಿ ಕಾರ್ಮಿಕರ ಬಗ್ಗೆಯೂ ಎಸ್ತರ್ ಬೋಸರಪ್ ವಿಶ್ಲೇಷಣೆ ನೀಡುತ್ತಾರೆ. ಮಹಿಳಾ ಕೂಲಿಕಾರರು ವ್ಯವಸಾಯಕ್ಕೆ ಪೂರಕವಾಗಿ ಕೆಲಸ ಮಾಡುತ್ತಾರೆ. ಇವರು ಕೆಳಜಾತಿ, ವರ್ಗ ಅಥವಾ ಬುಡಕಟ್ಟು ಜನಾಂಗಕ್ಕೆ ಸೇರಿರುತ್ತಾರೆ. ರೈತ ಮಹಿಳೆಯರಿಗೂ ಇವರಿಗೂ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಆರ್ಥಿಕ ಅಂತರವಿರುತ್ತದೆ. ಉದಾಹರಣೆಗೆ, ಆಫ್ರಿಕಾದ ತುಟ್ಲ ಮತ್ತು ಹೂಟು ಸಮುದಾಯಗಳಲ್ಲಿ, ತುಟ್ಲ ಮೇಲು ಜಾತಿಯಾಗಿದ್ದು ಇಲ್ಲಿ ಹೆಂಗಸರು ಸಮುದಾಯದ ಮುಖ್ಯಸ್ಥರಿಗೆ, ಅವರ ಹೆಂಡತಿಯರಿಗೆ ಮತ್ತು ತಮ್ಮ ಪುರುಷರಿಗೆ ಅಧೀನರಾಗಿದ್ದರೂ ಹೂಟು ಪುರುಷರು ಮತ್ತು ಮಹಿಳೆಯರ ಮೇಲೆ ಅಧಿಕಾರ ಹೊಂದಿರುತ್ತಾರೆ. ಆದರೆ ಹೂಟು ಹೆಂಗಸರು ಸಾಮಾಜಿಕ ಶ್ರೇಣಿಯಲ್ಲಿ ಕೆಳಮಟ್ಟದಲ್ಲಿದ್ದು, ಅತ್ಯಂತ ಶ್ರಮಜೀವಿಗಳಾಗಿದ್ದಾರೆ. ಗಂಡಂದಿರೂ ಸೇರಿದಂತೆ ಸಮುದಾಯದ ಎಲ್ಲಾ ಜನರಿಗೂ ಅಧೀನರಾಗಿ ಜೀವನ ನಡೆಸುತ್ತಿದ್ದಾರೆ.

ಭಾರತದಂತಹ ದೇಶದಲ್ಲಿ ಭೂಮಿಯಿರುವವರು, ಇಲ್ಲದವರು, ಮೇಲುಜಾತಿ, ಕೆಳಜಾತಿ, ರೈತ ಅಥವಾ ಬುಡಕಟ್ಟು ಜನಾಂಗ ಎಂಬ ವಿವಿಧ ಗುಂಪುಗಳಿದ್ದು ಸ್ತ್ರೀಯರು ವರ್ಗ, ಜಾತಿ, ಲಿಂಗ ತಾರತಮ್ಯ, ಶೋಷಣೆಗಳಿಗೆ ಒಳಗಾಗುತ್ತಿರುತ್ತಾರೆ. ಲಕ್ಷಾಂತರ ಕೆಳಜಾತಿ ಹಾಗೂ ಬುಡಕಟ್ಟು ಮಹಿಳೆಯರು ಮೇಲು ಜಾತಿಯ ಹಿಂದುಗಳ ಭೂಮಿಯಲ್ಲಿ ಅನಿಶ್ಚಿತ ಕೆಲಸಗಾರರಾಗಿ ದುಡಿಯುತ್ತಿದ್ದಾರೆ. ತೋಟಗಳಲ್ಲೂ ಈ ಮಹಿಳೆಯರ ಸಂಖ್ಯೆ ಅಧಿಕವಾಗಿರುತ್ತದೆ. ರಫ್ತು ಕ್ಷೇತ್ರದಲ್ಲಿ ಶ್ರಮದ ಖರ್ಚನ್ನು ಕಡಿಮೆ ಮಾಡಲು ಕಡಿಮೆ ಕೂಲಿಗೆ ಸ್ತ್ರೀ ಕಾರ್ಮಿಕರನ್ನು ಹೆಚ್ಚಾಗಿ ನೇಮಿಸಿಕೊಳ್ಳಲಾಗುತ್ತದೆ. ತೋಟಗಳಲ್ಲಿ ಕೆಲಸ ಮಾಡುವ ಸ್ತ್ರೀಯರು ದಿನಕ್ಕೆ ಏಳರಿಂದ ಎಂಟು ಗಂಟೆಗಳ ಕಾಲ ಹೊರಗೆ ದುಡಿದು ಬೆಳಿಗ್ಗೆ ಸಂಜೆ ಮನೆಯಲ್ಲೂ ಕೆಲಸ ಮಾಡಬೇಕು. ಉತ್ತರ ಭಾರತದಲ್ಲಿ ಕೆಳಜಾತಿ ಮಹಿಳಾ ಕಾರ್ಮಿಕರ ಪೂರೈಕೆ ಕಡಿಮೆಯಿರುವುದರಿಂದ ಮತ್ತು ಸ್ತ್ರೀಯರು ಕೃಷಿ ಕೆಲಸ ಮಾಡುವುದರ ಮೇಲೆ ಕೆಲವು ಸಾಮಾಜಿಕ ಹಾಗೂ ಸಾಂಸ್ಕೃತಿಕ ನಿರ್ಬಂಧಗಳಿರುವುದರಿಂದ ಅಲ್ಲಿ ಸ್ತ್ರೀ ಪುರುಷರ ಕೂಲಿ ಅಂತರ ಕಡಿಮೆಯಿದೆ. ಕೆಲವು ಕಡೆ ಸಮಾನ ಕೂಲಿಯಿದೆ. ಆದರೂ ಇಡೀ ಭಾರತದಲ್ಲಿ ಸ್ತ್ರೀ ಕೃಷಿ ಕಾರ್ಮಿಕರ ಪರಿಸ್ಥಿತಿ ಶೋಚನೀಯವಾಗಿದ್ದು ಅವರ ಸ್ಥಿತಿಯನ್ನು ಉತ್ತಮಪಡಿಸಲು ಗಂಭೀರ ಪ್ರಯತ್ನ ಮಾಡಬೇಕಾಗಿದೆ. ಒಟ್ಟು ಕೃಷಿ ಅಭಿವೃದ್ಧಿಯಾಗಬೇಕೆಂದರೆ ಕೃಷಿ ಶಿಕ್ಷಣ ಮತ್ತು ಹೊಸ ಕೃಷಿ ವಿಧಾನಗಳ ತರಬೇತಿಯನ್ನು ಸ್ತ್ರೀಯರಿಗೂ ನೀಡಬೇಕೆಂದು ಬೋಸರಪ್ ಹೇಳುತ್ತಾರೆ.

ಹೀಗೆ ಎಸ್ತರ್ ಅವರು ಲ್ಯಾಟಿನ್ ಅಮೇರಿಕಾ, ಆಫ್ರಿಕಾ ಮತ್ತು ಏಷ್ಯಾ ರಾಷ್ಟ್ರಗಳಲ್ಲಿ ಅಧ್ಯಯನ ನಡೆಸಿ ಕೃಷಿ ಮಹಿಳೆಯರ ದುಡಿಮೆ ಕುರಿತು ಒಂದು ಸಮಗ್ರ ಚಿತ್ರಣ ನೀಡುತ್ತಾರೆ. ಒಬ್ಬ ಅರ್ಥಶಾಸ್ತ್ರಜ್ಞೆಯಾಗಿ ಹಾಗೂ ಸ್ತ್ರೀವಾದಿಯಾಗಿ ಸ್ತ್ರೀ ದುಡಿಮೆಗೆ ಎಸ್ತರ್ ಹೊಸ ಆಯಾಮವನ್ನು ನೀಡಿದ್ದಾರೆ. ಮಹಿಳೆಯರ ದುಡಿಮೆ ಕುರಿತು ಭಿನ್ನವಾದ ವಾಸ್ತವಾಂಶಗಳನ್ನು ಬೆಳಕಿಗೆ ತಂದು ಮಹಿಳಾ ಅಧ್ಯಯನದ ಸಾಹಿತ್ಯಕ್ಕೆ ವಿಶೇಷ ಕೊಡುಗೆ ನೀಡಿದ್ದಾರೆ.

*(ಆಧಾರ: ವಿಮೆನ್ಸ್ ರೋಲ್ ಇನ್ ಎಕನಾಮಿಕ್ ಡೆವಲಪ್‌ಮೆಂಟ್.)*

**ಹೇಮಲತಾ ಎಚ್. ಎಂ.**
ನಂ. ೭೧/೧, ಟೆಲಿಕಾಂ ಲೇ ಔಟ್, ವಯಾ ಹೇಮಾವತಿ
ಬೋಗಾದಿ ಮೊದಲ ಹಂತ, ಮೈಸೂರು - ೫೭೦ ೦೦೯

**ಈ** ನೆಲದ ಮಣ್ಣಿನ ಮಕ್ಕಳು ನಾವು
ಜಗದ ಸೊಬಗಿನ ನಗುವು
ಬಾನಿಗು ಆಚೆ ಬೆಳೆದಾ ಶಕ್ತಿ
ನಮ್ಮೀ ಐಕ್ಯತೆ ಉಸಿರು.

ಇಲ್ಲಿ ಬೀಸುವ ಈ ತಂಗಾಳಿ
ನಮ್ಮ ಬದುಕಿನ ಭಾವದ ಚಿಲುಮೆ
ಬೆಳಗಿನ ಸೂರ್ಯನ ಬಿಂಬ
ನಮ್ಮ ಶ್ರಮದಾ ಸ್ಫೂರ್ತಿಯ ಪ್ರತಿಮೆ

ನಾವೇ ಈ ದೇಶ
ನಾವೇ ಈ ವಿಶ್ವ.

(ಹಾಡಿನ ಕೊನೇ ಸಾಲು ಹಾಡುತ್ತಲೇ ಪಾತ್ರಧಾರಿಗಳು ವೃತ್ತಾಕಾರದಲ್ಲಿ ಅರ್ಧ ಗೋಳಾಕೃತಿಯಂತೆ ನಿಲ್ಲುವರು. ಪ್ರತೀ ನಟರೂ ಒಂದೇ ಬಣ್ಣದ (ವೇಲ್) ಬಟ್ಟೆ-ಬೆನ್ನಿಗೆ, ಹೊದ್ದು ಮುಖಾಮುಖಿ ನಿಂತು ಸುತ್ತಿದರೆ ಪರಿಣಾಮಕಾರಿ. ನಡುವಿನಿಂದ 'ಭೂದೇವಿ' ಪಾತ್ರ ಮೇಲೇಳುವುದು)

**ಭೂದೇವಿ** : ಇದು ನನ್ನ ಕತೆ. ನನ್ನ ಕರುಳಿನ ಮಕ್ಕಳ ಕತೆ. (ಭೂದೇವಿ ಮೇಲೇಳುತ್ತಲೇ ಸುತ್ತುವ ನಟರು ಕೂಡುವರು) ನಾನು ಈ ಭೂಮಿ. ಇರುವೆ- ಎಂಬತ್ತಾರು ಕೋಟಿ ಜೀವ ರಾಶಿಗಳ ಹಡೆದಮ್ಮ. ಇವರೆಲ್ಲಾ ನನ್ನ ಮಕ್ಕಳು. ಲಕ್ಷ ವರ್ಷಗಳ ಹಿಂದೆ ಪ್ರಾಣಿಗಳಾಗಿದ್ದವರು ಈಗ ಮನುಷ್ಯರಾಗಿದ್ದಾರೆ. (ಗೋಳವಾಗಿದ್ದ ನಟರು ರಂಗದ ಸುತ್ತ ಕೂಡುವರು) ಆದರೆ ದುಷ್ಟ ಬುದ್ಧಿ ಬೆಳೆದು ನನ್ನ ಮೇಲೆಯೇ ಯಜಮಾನಿಕೆ ನಡೆಸಲು ಹೊರಟಿದೆ ಮೂರ್ಖರ ಒಂದು ಹಿಂಡು. (ಒಂದು ಮೂಲೆಯಲ್ಲಿ ದೃಶ್ಯ). ಅಂತಹ ಹಿಂಡಿನ ಒಡೆಯನಾಗಿ ಕೊಬ್ಬುತ್ತಿದೆ ಒಂದು ರಣಹದ್ದು. (ಮೂಲೆಯ ದೃಶ್ಯದಿಂದ ಅಮೆರಿಕಾ ಪಾತ್ರ ಗತ್ತಿನಿಂದ ರಂಗದ ಒಂದು ಸುತ್ತು ಹಾಕುವುದು) ಹದ್ದಿನ ಹುನ್ನಾರಕ್ಕೀಗ ಎರಡೇ ಅಸ್ತ್ರ ಒಂದು ಅರ್ಥ. (ಡಾಲರ್ ಪಾತ್ರ) ಇನ್ನೊಂದು ಧರ್ಮ. (卐 (ಸ್ವಸ್ತಿಕ್) ಮಾರ್ಕಿನ ಪಾತ್ರ-ಕೇಸರಿ ಮತ್ತು ಹಸಿರು ಪಾತ್ರಗಳನ್ನು ಬೆನ್ನು ಚಪ್ಪರಿಸಿ ದೂಡುವುದು. ಅವೆರಡೂ ವಿರುದ್ಧ ದಿಕ್ಕಿನಲ್ಲಿ ಚಲಿಸಿ-ಮುಖಾಮುಖಿಯಾಗುವವು) ಒಂದರ ನಿಶೆ ಇಳಿಸಲು ಇನ್ನೊಂದು ನಿಶೆ. ಹೀಗೆ ಎರಡೆರಡು ನಿಶೆಗೆ ಬಲಿಯಾದ ನನ್ನ ಪ್ರೀತಿಯ ಅಂಗವಾದ ಭಾರತ ರಣರಂಗವಾದ ಒಂದು ದಾರುಣ ಚಿತ್ರಣವಿದು. (ನಿರ್ಗಮನ)

(ರಂಗದ ನಡುವೆ, ರೈತ, ರೈತನ ಹೆಂಡತಿ, ಆಕಳು, ರೈತನ ಮಗು)

(ರಾಗವಾಗಿ)

**ಪ್ರಚಾರಕ** : (ಪ್ರವೇಶ) ಸಮುದ್ರ ವಸನೇ ದೇವೀ

**ಹಿನ್ನೆಲೆ** : ಕುಡಿಯಾಕ ಬೊಗಸಿ ನೀರ್ ಕೊಡೇ ತಾಯಿ.

**ಪ್ರಚಾರಕ** : ಪರ್ವತಸ್ತನ ಮಂಡಲೇ...

**ಹಿನ್ನೆಲೆ** : ಜೋಪಡಿಗೂ ಗತಿ ಇಲ್ದಂಗಾತಲ್ಲಲೇ...

**ಪ್ರಚಾರಕ** : ಪಿತೃ ಭೂ-ಪುಣ್ಯ ಭೂಶ್ಚೈವ...

**ಹಿನ್ನೆಲೆ** : ಬೆಳ್ಕಂಡ್ ತಿನ್ನಾಕ ತುಂಡು ಭೂಮಿ ಕೊಡೋ ಶಿವ...

**ರೈತ** : ಹಸ್ತ್ಹೊಟ್ಟ್ಯಾಗ ಹದ್ ಹಾರಾಕ್ ಹತ್ತ್ಯಾವ.

ಬೇಸಾಯ ಅಂದ್ರ ನೀಸಾಯ, ನಿನ ಹೆಂಡ್ರು ಮಕ್ಳು ಸಾಯ ಅನ್ನಾ ಹೊತ್ ಬಂದೈತಿ. ಸಂಜೀಕಿದ್ರೆ ಮುಂಜಾನಿಲ್ಲ, ಮುಂಜಾನಿದ್ರೆ ಸಂಜೀಕಿಲ್ಲ. ಎಂತಾ ಬರಗಾಲ ಬಂದ್ರೂ ಯಾ ಸಾವ್ಕಾರ್ರೂ ಉಪಾಸ ಮಕ್ಕಳಾದಿಲ್ಲ, ಬಡೂರು ಸತ್ರೆ ಕೇಳಾರಿಲ್ಲ. ಪ್ಯಾಟ್ಯಾಗ ಯಾ ಅಂಗಡೀ ಗೋದ್ರೂ ಕಾಳ್ ಕಡೀ ನಿಟ್‌ಮ್ಯಾಲೆ ನಿಟ್ ಒಟ್ಟ್ಯಾರ. ಅಂಗಡ್ಯಾಗೇನು ಬಂಗಾರದ ಗಟ್ಟೀನಾ ಅದಾವು. ಆದ್ರ ತಟ್ಟ್ಯಾಗ ತುತ್ತು ಕೂಳು ಕಾಣಾಕ ಕೊಳ್ಳಾ ತ್ರಾಣ ಇರಬೇಕಲ್ಲ, ದುಡೀತೀವಪ್ಪ ಕೂಲೀ ಕೊಡ್ರೀ ಅಂದ್ರ...

**ಪ್ರಚಾರಕ** : ಭವ್ಯ ಭಾರತದ ಮಹಾಪ್ರಜೆಗಳೆ, ನಮ್ಮದು ಲಕ್ಷ ವರ್ಷಗಳ ಪ್ರಾಚೀನ ಧರ್ಮ. ನಮ್ಮದು ಕೋಟಿ ವರ್ಷಗಳ ಸನಾತನ ಸಂಸ್ಕೃತಿ. (ಪ್ರೇಕ್ಷಕರನ್ನು ಉದ್ದೇಶಿಸಿ)

**ರೈತ** : ಬೆಳಕ್ ಹರಿದ್ರೆ ದುಗ್ಗಾಣಿ ದುಡಿಮೀ ಇಲ್ಲಂತ ನಾವ್ ಯೋಚ್ನೆ ಮಾಡಿದ್ರ... ಇವ್ರು ಅದೇನೋ ಅಂತಾರಲ್ಲ. ಅಜ್ಜೀಗ್ ಅರಿವೀ ಚಿಂತೀ... (ಸ್ವಗತ)

**ಪ್ರಚಾರಕ** : ನಮ್ಮದು ಸಭ್ಯ, ಸುಸಂಸ್ಕೃತ, ಮಹೋನ್ನತ

■

**ಬಿ. ಪೀರ್‌ಬಾಷ**




*೧೬.೧೦.೨೦೦೨ರಂದು ಹರಿಯಾಣ ರಾಜ್ಯದ ಜಜಾರ್‌ನಲ್ಲಿ ಸತ್ತ ಆಕಳ ಚರ್ಮ ಸುಲಿದ ತಪ್ಪಿಗಾಗಿ ವಿಶ್ವ ಹಿಂದೂ ಪರಿಷತ್ತಿನ ಕಾರ್ಯಕರ್ತರು ಜನ ದಲಿತರನ್ನು ಬಯಲಿನಲ್ಲಿ ಕಲ್ಲಿನಿಂದ ಹೊಡೆದು ಸಾಯಿಸಿದ ದುರಂತ ಘಟನೆಯ ನಾಟಕದ ರೂಪ ಈ "ಶೂದ್ರ ಶಕ್ತಿ". ಆನಂತರವೂ ಇದೇ ಕಾರಣಕ್ಕಾಗಿ ಕೊಲೆಗಳಾಗುತ್ತಿರುವ ವರದಿಗಳು ಬರುತ್ತಿರುವುದು ಗಮನಾರ್ಹ. ಬೀದಿ ನಾಟಕ ಇತ್ತೀಚೆಗೆ ಮೈಸೂರಿನ 'ರಂಗಾಯಣ'ವು 'ಸಾಮಾಜಿಕ ನ್ಯಾಯ' ಧೋರಣೆ ಅಡಿಯಲ್ಲಿ ಸಂಘಟಿಸಿದ್ದ ರಾಷ್ಟ್ರೀಯ ನಾಟಕೋತ್ಸವದಲ್ಲಿ ಪ್ರದರ್ಶನಗೊಂಡಿದ್ದು ಅನೇಕರ ಗಮನವನ್ನು ಸೆಳೆದಿದೆ.*

ನಾಗರಿಕತೆ.

**ರೈತ** : ಸೆಗಣೀ ಬಳಿಯಾನು ಯಾವನೂ ಇಲ್ಲ, ಬಟ್ಟೇ ಮಾಸಲಾರದಂಗ ಭಾಷಣ ಹೊಡಿಯಾ ಶೂರತನಕ್ಕೇನು ಕಡಿಮೀ ಇಲ್ಲ.

**ಪ್ರಚಾರಕ** : ನಾವು ಇಂತಹ ಸಂಸ್ಕೃತಿಯನ್ನ ಉಳಿಸಿಕೊಳ್ಳಬೇಕು. ಇಂದು ನಮ್ಮ ಇಂತಹ ಧರ್ಮಕ್ಕೆ ಧಕ್ಕೆ ಬಂದಿದೆ. ನಾವಿದನ್ನ ಉಳಿಸಿಕೊಳ್ಳಬೇಕು. ನಾವೆಲ್ಲ ಬಂಧುಗಳು. ನಾವೆಲ್ಲ ಒಂದು...

**ಕೋಡಂಗಿ** : ನಾವೆಲ್ಲ ಹಿಂದಿರುವಾಗ ನೀವೇಕೆ ಮುಂದು. ನೀವೂ ಆಗಲೇಬೇಕು ಹಿಂದು. (ಮುಂದೆ ಕುಳಿತವನೊಬ್ಬನನ್ನು ಹಿಂದಕ್ಕೆಳೆದು ಬಿಸುಟುವನು) ಇಲ್ಲದಿದ್ದರೆ ನಿಮ್ಮ ಕಾಲೆಳೆಯಲು ನಾವೆಲ್ಲ ಒಂದು.

**ಪ್ರಚಾರಕ** : ವಂದೇ...

**ಕೋಡಂಗಿ** : ಮಾತರಂ... (ಕೂಗುತ್ತಾ ನಿರ್ಗಮನ)

**ಮಗು** : (ಪ್ರವೇಶ) ಯಪ್ಪಾ... ಯಪ್ಪಾ... ಹೊಟ್ಟೀ ಹಸದೈತಪ್ಪಾ.

**ರೈತ** : ಈಟೊತ್ತು ಭಾಷಣ ಕೇಳಿದ್ಯಲ್ಲ, ಹೊಟ್ಟೀ ತುಂಬಿಲ್ಲೇನು. ನಡೀ ಅತ್ಲಾಗ. (ಆಕಳು ಒದರುವುದು)

**ರೈತನ ಹೆಂಡತಿ** : ತಿನ್ನಾಕ ನಮಿಗಾ ಕೂಳಿಲ್ಲ ಇನ್ ಇದಕ್ಕೆಲ್ಲಿಂದ ಮೇವು ತರ್ಬೇಕಾ. ಈಲಿಲ್ಲ, ಹಿಂಡ್ಲಿಲ್ಲ, ಕಟುಕರಿಗೆ ಮಾರಿದ್ರೆ ನಾಕ್ ರೊಕ್ಕರಾ ಬಂದೀತು. (ಗಂಡನನ್ನು ಕುರಿತು) ಏ... ಸಂತೀಗರಾ ಹೋಗಿ ಮಾರ್ಕಂಡ್ ಬಾ ಅದನ್ನ. ಮಳೀಗಾಲ ಬಂತು. ಒಂದೀಟು ಚಪ್ಪರನರಾ ಗಟ್ಟಿ ಮಾಡ್ಕಳಾನ.

**ಬ್ರಾಹ್ಮಣ** : (ಪ್ರವೇಶ). ಧರ್ಮೋ ರಕ್ಷತಿ ರಕ್ಷಿತಃ. ಗೋಹತ್ಯೆ ಮಹಾಪಾಪ. ಏ ಶೂದ್ರ ಹೆಂಗಸೇ ನಿಮಗೇನು ಧರ್ಮ-ಸಂಸ್ಕೃತಿ ಅನ್ನಾದು ಇಲ್ಲೇನು ? ಗೋವು ಅಂದ್ರೆ ಸಾಕ್ಷಾತ್ ಕಾಮಧೇನು. ಇದರ ಹೊಟ್ಯಾಗ ಕೋಟ್ಯಾನುಕೋಟಿ ದೇವತೆಗಳು ವಾಸವಾಗಿರ್‍ತಾರೆ.

**ರೈತ** : ಇದ್ರ ಹೊಟ್ಟ್ಯಾಗ ಹಿಡಿ ಮೇವಿಲ್ರಿ. ಇನ್ನು ದೇವ್ರು, ದಿಂಡ್ರು ಎಲ್ಲಿರುತಾವ. ಅದು ಇದ್ದಿದ್ರೆ ಇದ್ಯಾಕ ಹಿಂಗ ಹಗ್ಲೂ ರಾತ್ರೀ ಒದರ್‍ತಿತ್ರೀ.

**ಬ್ರಾಹ್ಮಣ** : ಛೀ ! ಅಜ್ಞಾನಿ. ಅದೆಲ್ಲಾ ನಿನಗೆ ಹೇಗೆ ಅರ್ಥ ಆದೀತು. ಅದು ಬ್ರಹ್ಮಜ್ಞಾನ. ನೀನೇನಾದ್ರೂ ಇದನ್ನ ಕಟುಕರಿಗೆ ಮಾರಿದ್ರೆ ಘೋರ ನರಕ ತಪ್ಪದು. ಅಷ್ಟೇ ಅಲ್ಲ ನಮ್ಮ ಶಾಸ್ತ್ರಗಳ ಪ್ರಕಾರ ನಿನಗೆ ಕ್ರೂರ ಶಿಕ್ಷೆ ನೀಡಬೇಕಾಗ್ತದೆ ಎಚ್ಚರ.

**ರೈ-ಹೆಂಡತಿ** : ಗುಟುಕ್ ಗಂಜೀ ಕುಡ್ದು ನಾವೇನು ಹೆಂಗರಾ ಬದುಕ್ಕೆಂತೀವಿ. ಈ ಆಕಳಿಗೆ ಹೆಂಗ ಸಾಕ್ಬೇಕು. ಹಂಗಾರ ಒಂದು ಹಿಡೀ ಹುಲ್ಲರ ಕೊಡಿಸ್ರೀ. ನಿಮಗೂ ಪುಣ್ಯ ಬರ್‍ತೈತಿ. (ವಟಗುಟ್ಟುತ್ತಾ ಬ್ರಾಹ್ಮಣ ನಿರ್ಗಮನ) ಈಯಪ್ಪಾ ಬ್ಯಾರೆ ಏನೇನಾ ಹೇಳಿ ಹೋದ. ಹಣೆಬರದಾಗ ಇದ್ದಂಗ ಆಗ್ಲಿ ಬಿಡು.

**ರೈ-ಮಗು** : (ಓಡುತ್ತಾ ಬಂದು) ಯಪ್ಪಾ... ಯಪ್ಪಾ... ಆಕುಳ ಸತ್ತೈತಪ್ಪಾ. (ರೈತ-ಹೆಂಡತಿ...ಇಬ್ಬರೂ ಅಳುತ್ತಾ)

**ರೈ-ಹೆಂಡತಿ** : ಅಯ್ಯೋ ದೇವ್ರೆ. ಅದ್ರ ಹೊಟ್ಟ್ಯಾಗ ದೇವ್ರದಾವ ಅಂದಿದ್ನಲ್ಲಪ್ಪೋ. ಹಂಗಾರ ನನ್ನಾಕ್ಳ ಯಾಕ್ ಉಳೀಲಿಲ್ಲೋ. ಈಗೆಲ್ಲಿ ಆ ದೇವ್ರು ಹೋದ್ವೋ...

**ರೈತ** : ಸಾಕಿದ್ ಆಕ್ಳಾ ಕಣ್ಣೆದರಾ ಹಸ್ಕಂಡ್ ಸಾಯ್ತಲ್ಲಪ್ಪೋ. ಕೊಯ್ಕಂಡರಾ ತಿಂದ್ರ ಒಂದ್ನೆವತ್ ಮಂದೀ ಹೊಟ್ಟೀ ತುಂಬ ಉಂಡರಾ ಉಣ್ಣಾರು. ಮಾರಿದ್ರೆ ಒಂದೀಟ್ ರೊಕ್ಕರಾ ಬರ್‍ತೈತ್ತು. ಸಾಕಿದ ಆಕ್ಳ ಸತ್ತರಾ ಹೋಗ್ಲಿ ಹಸಕಂಡಾರು ಹೊಟ್ಟೇಗೆ ಉಣ್‌ಬ್ಯಾಡ್ರೀ ಅಂದ್ರ ಇದ್ಯಾಸೀಮಿ ಶಾಸ್ತ್ರನಪ್ಪಾ. ಬಡೂವ್ರು ಬಾಯಿಗೆ ಮಣ್ ಹಾಕ್ಕಂಡ್ ಸಾಯ್ರಿ ಅಂದ್ರಾ ಇದ್ಯಾ ಧರ್ಮ. ಒಟ್ಟ್ಯಾಗ ನಮ್ ಕರ್ಮಪ್ಪೋ ಕರ್ಮಾ. (ನಿರ್ಗಮನ)

* * *

ಕಾಳ, ನೀಲ, ಬೆಳ್ಳಿ, ಗುರುವ, ಚೆನಿಯಾ
ಚೋಮನ ಮಕ್ಕಳು ನಾವುಗಳು
ಚೋಮನ ಮಕ್ಕಳು ನಾವುಗಳು (ಹಾಡುತ್ತಾ ಐವರ ಪ್ರವೇಶ)

**ಗುರುವ** : ಲೇ... ಗೌಡ್ರ ಆಕಳ ಸತ್ ಹೋಯ್ತಂತಲೇ.

**ಕಾಳ** : ಭಾಳಾ ಹಳೇ ಆಕಳಲೇ ಅದು. ಚೊಲೋ ಹಿಂಡ್ತಿತ್ತು.

**ನೀಲ** : ಹಂಗಾರ ನಮ್ಮ ಗೌಡ್ರೀಗೆ ದಿನಾ ಮೂರ್ ಸೇರ್ ಹಾಲ್ ಲಾಸ್ ಆತನ್ನು.

**ಬೆಳ್ಳಿ** : ಗೌಡ್ರ ಸುದ್ದಿ ಏನರಾ ಇರ್‍ಲೀ. ನಮ್ಮ ಚೆನ್ನ್ಯಾಗ ಒಂದ್ ದನದ್ ದವತೀ ಕಡಿಮೀ ಆತ್ ನೋಡು.

**ಚೆನ್ನಾ** : ಲೇ ಬರ್‍ರಲೇ... ಆಮೇಲೆ ಮಾತಾಡ್ರಂತೆ. ಮೊದ್ಲು ಅದನ್ನ ಸಾಗಿಸಾನ ಬರ್‍ರೀ... (ನಿರ್ಗಮನ)

**ಗೌಡ** : ನಮ್ಮನತನದಾಗ ಒಳ್ಳೇ ಆಕ್ಳ ಇದು. ಇದು ಹುಟ್ಟಿದಾಗ್ನಿಂದ ನಮ್ಮನಿ ಎಳ್ಗೀ ಇತ್ತು.

**ಗೌಡತಿ** : ನಮ್ಮನಿ ಕಾಮಧೇನು ಇದು. ಮನೀ ಬಿಟ್ಟು ಹೋಗ್ತದಾಳ. (ಇಬ್ಬರೂ ಅಳುವರು. ಐವರು ದಲಿತರು ಅದನ್ನು ಹೊತ್ತೊಯ್ಯುವರು)

(ಆಕಳು ಹೊತ್ತೊಯ್ಯುತ್ತಾ)
ಹಾರುವನ ಪಿಂಡ
ಆಳುವವರ ದಂಡ
ಶೆಟ್ಟೀ ಹೊಟ್ಟೇ ದುಂಡ
ಹೊಲೆಯನ ಹೊಟ್ಟೇ ಭಂಡ... ಹ... ಹ... ಹ...

ಅನ್ನದ್ದೇವರ ಮುಂದ
ಅನ್ಯ ದೇವರು ಹಿಂದ
ರಟ್ಟೀ ತ್ರಾಣ ನಂದ
ನೆತ್ತಿ ತ್ರಾಣ ನಿಂದ... ಹ... ಹ... ಹ...

ದಂಡ ಪಿಂಡ ದುಂಡ
ಹೊಲೆಯನ ಹೊಟ್ಟೀ ಭಂಡ
ಅನ್ನದ್ದೇವರ ಮುಂದ
ಅನ್ಯ ದೇವರು ಹಿಂದ... ಹ... ಹ... ಹ...

(ರಂಗದ ಸುತ್ತು ಹಾಕಿ, ರಂಗದ ಮಧ್ಯೆ ಇಳಿಸಿ, ಚರ್ಮ ಸುಲಿವ ದೃಶ್ಯ)

**ಚೆನಿಯಾ** : ಲೇ ಹದಿನೈದು ವರ್ಷಾ ಹಳೇ ಆಕಳಲೇ ಇದು. ಭಾಳಾ ಚಲೋ ಆಕಳ. ಇವರವ್ವನೂ ಹಿಂಗಾ ಇತ್ತು. ಅದು ಸತ್ತಾಗ ನಮ್ಮಪ್ಪ ಮೂರ್ ದಿನ ಅಳ್ಕಂತ ಮಕ್ಕಂಡಿದ್ದ. ಗೌಡ್ರಮನಿ ಮಂದೀಗೆಲ್ಲ ಕೆರ ಮಾಡಿಕೊಟ್ಟಿದ್ದ. ನಮ್ಮಪ್ಪ ಭಾಳಾ ಪ್ರೇಮಲೇ ಜ್ವಾಪಾನ ಮಾಡಿದ್ನಲೇ ಅದನ್ನ.

**ಕಾಳ** : ಹೂಂ ! ಇವರವ್ವನ್ನ ನಿಮ್ಮಪ್ಪ ಸಾಕಿದ್ದ. ಇದನ್ನ ನೀನ್ ಸಾಕಿದ್ದೀ. ನಿಮ್ಮಜ್ಜನ ಕಾಲ ದಿಂದ ಸೆಗಣೀ ಬಳ್ದು ಮೇವು ಹಾಕಿ ನೀವು ಸಾಕಿದ್ರೂ ಹೈನಾ ತಿನ್ನೋನಂತೂ ಗೌಡನಾ ಅಲ್ಲ ?

**ಬೆಳ್ಳಿ** : ಲೇ... ಯಾವತ್ತರಾ ಗೌಡ್ರ ಮನೀದು ಒಂದು ಲೋಟ ಮಜ್ಗೀ ಕುಡದೀ ಏನಲೇ.

**ಗುರುವ** : ಯೋ... ಯಾಕ್ ಕುಡ್ದಿಲ್ಲ, ಕುಡ್ದಾನಪ್ಪೋ (ವ್ಯಂಗ್ಯ) ಗೌಡ್ರ ಹಟ್ಟೀ ಗ್ವಾತ. (ಎಲ್ಲರೂ ನಗುವರು)

**ಚೆನಿಯಾ** : ಯೇ... ಬಿಡ್ಲೆಲೇ. ನಮ್ ಕರ್ಮಾ ನಮೀಗೆ, ಅವರ್ ಪುಣ್ಯಾ ಅವ್ರಿಗೆ. ಕಡೀಕ ಸತ್ ಮ್ಯಾಲರ ಈಟ್ ಮಾಸ ಸಿಗ್ತೈತಲ್ಲ.

**ಗುರುವ** : ನನ್ಹೇಣ್ತಿ ಕೆರೀ ಏರೀಮ್ಯಾಗಿನ ಸೊಪ್ಪು ತಿಂದೂ ತಿಂದೂ ಸಾಕಾಗೇತಿ ಅಂತಿದ್ಲು. ಬಾಯ್‌ಕೆಟ್ ಹೋಗಿತ್ತಲೇಯಪ್ಪಾ. ನಮ್ ನಸೀಬಕ್ಕ ಈಟರಾ ಸಿಗ್ತು.

**ಕಾಳ** : ನಿನಗ ಕೆರೀ ಮ್ಯಾಗಿನ ಸೊಪ್ಪರಾ ಸಿಗ್ತೈತಲೇ. ನನ್ಹೇಣ್ತಿ ಬ್ಯಾರೆ ಬಸರದಾಳ. ಯಾರ್‍ನೋಗಿ ಹರ್‍ಕಂಡ್ ಬರ್‍ಬೇಕು, ಆಟ್ ದೂರ. ಏನಾ ಒಂದೇಟು ಕೂಲಿನರಾ ಸಿಕ್ರ ಒಪ್ಪೊತ್ತರಾ ಕಳ್ಳೀಗೆ ಒಂದೀಟ್ ಹಾಕ್ಕಂಣಾನಾ ಅಂದ್ರ ಹೊಲಾ ಒಕ್ಕಾಕ, ನೆಲಾ ಕಡಿಯಾಕ ಎಲ್ಲಾ ಮಿಷೀನ್ ಬಂದು ಬದ್ಕಾ ಇಲ್ದಂಗಾಗೇತಲೇಯಪ್ಪಾ. ಒಂದ್ ವಾರಾತು ಹೊಟ್ಟೀಗೆ ಗಂಜೀ ಬಿಟ್ರೆ ಬ್ಯಾರೇನೂ ಬಿದ್ದಿಲ್ಲ.

**ಬೆಳ್ಳಿ** : ಲೇ... ಮಾತಾಡ್ಕಂತ ಚರ್ಮ ಕೆಡಿಸೀತಿ. ಸರೀಗೆ ತೆಗೀ. ಮತ್ತೆ ಬರಾ ದುಗ್ಗಾಣೀಗೂ ಕೊರೀ ಬಿದ್ದೀತು.

**ಗುರುವ** : ಲೇ... ಕೊಳ್ ಸರೀಗೆ ಬಿಡಿಸಲೇ...

(ಪೂರ್ಣ ತೆಗೆದು... ಕೊಡವಿ, ಮಡಚಿ, ಹೊತ್ತೊಯ್ಯುವರು. ಒಬ್ಬ ಇಣುಕಿ ನೋಡಿ ಓಡುವನು)

* * *

(ಕೋಡಂಗಿ, ಆಚಾರ್ಯ, ಪ್ರಚಾರಕರ ಗುಂಪು ಪ್ರವೇಶ)

**ಪ್ರಚಾರಿ** : ಧರ್ಮ ಸಂಸ್ಥಾಪನಾರ್ಥಾಯ
ಸಂಭವಾಮಿ ಯುಗೇ ಯುಗೇ. (ಕೋಡಂಗಿಗೆ ಕಲಿಸುವನು)

**ಕೋಡಂಗಿ** : ಸಂಬಯಾಮಿ ಉಗೇ ಉಗೇ (ತಪ್ಪು ಉಚ್ಚಾರ... ಪುನರಪಿ).

**ಪ್ರಚಾರಿ** : ಛೀ. ನಿನ್ನ ಮೂಲ ಕುಲದ ಜಿಡ್ಡು ಇನ್ನೂ ತೊಲಗಿಲ್ಲ. ನಿನ್ನ ನಾಲಗೆ ಇನ್ನೂ ಸಂಸ್ಕಾರಗೊಂಡಿಲ್ಲ.

**ಕೋಡಂಗಿ** : ಹೌದಾ ಗುರೂಜಿ. ಹಾಗಾದ್ರೆ ಏನು ಮಾಡಲಿ ಗುರೂಜಿ.

**ಪ್ರಚಾರಿ** : ಒಂದಿಷ್ಟು ಸಗಣೀ ತಿನ್ನು.

**ಕೋಡಂಗಿ :** ಸರಿ ಗುರೂಜಿ.

**ಆಚಾರ್ಯ :** ಛೀ... ಛೀ... ಏನಿದು ಶೂದ್ರ ಭಾಷೆ ಬಳಸ್ತಿದ್ದೀರಿ. ಆರ್ಯ ಭಾಷೆ ರೂಢಿಸಿಕೊಳ್ಳಿ. ಈ ಸೆಗಣಿ... ಈ... ಛೇ... ಛೇ.

**ಪ್ರಚಾರಿ :** ಅಮೇಧ್ಯಾ ಎನ್ನಲೇ...

**ಕೋಡಂಗಿ :** (ಕೋತಿಯಂತೆ ಕುಣಿಯುತ್ತಾ) ಗುರೂಜಿ, ನನಗೆ ಅದನ್ನು ಹೇಳಾಕ ಬರ್‍ರೈತಿ ಗುರೂಜಿ... ಅಯೋಧ್ಯಾ...

**ಆಚಾರ್ಯ :** (ಕೇಳುತ್ತಲೇ ಸಿಟ್ಟಿನಿಂದ) ಏ... ಕಪಿಯೇ, ಅಪಚಾರ ನುಡೀತೀಯಾ (ಜಾಡಿಸಿ ಒದೆಯುವನು. ಕೋಡಂಗಿ ಬೀಳುವನು)

**ಕೋಡಂಗಿ :** ತಪ್ಪಾಯ್ತು ಗುರುಗಳೇ.. ಕ್ಷಮಿಸಿ ಗುರುಗಳೇ.. (ಕಾಲ ಹಿಡಿವ/ಕೈ ಮುಗಿವ) (ಬೇಹುಗಾರ ಓಡಿಬಂದು -ಏಕಕಾಲಕ್ಕೆ ಮೂವರ ಕಿವಿಯಲ್ಲಿ ವರದಿ ಒಪ್ಪಿಸಿ ಓಡುವನು)

**ಆಚಾರ್ಯ-ಪ್ರಚಾರಿ :** ಧರ್ಮಗ್ಲಾನಿ... ಧರ್ಮಗ್ಲಾನಿ.

**ಕೋಡಂಗಿ :** ದರಮಗಲಾನಿ... ದರಮಗಲಾನಿ.

**ಆಚಾರ್ಯ :** ಏನಿದು... ನಮ್ಮ ಪಾರುಪತ್ಯ ಸೀಮೆಯಲ್ಲಿ ಇನ್ನೂ ಎಲ್ಲರೂ ಸರಿಹೋಗಿಲ್ಲ

**ಕೋಡಂಗಿ :** ಆಚಾರ್ಯರೇ... ರೈಲಿಗೆ ಬೆಂಕಿ ಹಚ್ಚಿದಾಗ ಹೇಗೆ ಒಂದು ಸಂತತಿಯನ್ನು ಇಲ್ಲವಾಗಿಸಲು ಹೊರಟೆವೋ ಹಾಗೆ ಈ ಬಾರಿ ಗೋಹತ್ಯೆಯ ನೆಪದಲ್ಲಿ ಶೂದ್ರರನ್ನು...

**ಪ್ರಚಾರಿ :** ನಿಲ್ಲಿಸಿ. ಅವಸರ ಕೂಡದು. ವಿದೇಶಿ ಸಂತಾನ ನಾಶಮಾಡಲು ನಮಗೆ ಶೂದ್ರಸೇನೆ ಬೇಕು. ಅವರನ್ನು ನಾಶಮಾಡದೆ ನಮ್ಮ ರಕ್ಷಣೆಗಾಗಿ ಬಳಸಿಕೊಳ್ಳಬೇಕು.

**ಆಚಾರ್ಯ :** ಆದರೆ ಅವರ ಧ್ವನಿ ಒರಟಾಗದಂತೆ, ಅವರ ತಲೆಗಳು ನಮ್ಮೆದುರು ಏಳದಂತೆ, ಅವರಿಗೆ ಶಿಕ್ಷಣ ಕೊಡಬೇಕು.

**ಕೋಡಂಗಿ :** ಶಿಕ್ಷಣದ ಮಾತು ನಂತರ. ಮೊದಲು ಶಿಕ್ಷೆಯ ಮಾತಾಡಿ. ಗೋಹತ್ಯೆ ಮಾಡಿದವರನ್ನು ಬಹಿರಂಗ ದಂಡಿಸಿ ಶೂದ್ರರಲ್ಲೇ ಭಯ ಹುಟ್ಟಿಸಬೇಕು. ಇನ್ನೆಂದೂ ಅವರು ಇಂತಹ ಕೃತ್ಯ ಮಾಡಬಾರದು.

**ಆಚಾರ್ಯ :** ಭೇಷ್... ಭೇಷ್...

**ಪ್ರಚಾರಿ :** ಹಾಗಾದರೆ ಈ ಗೋಹತ್ಯೆಗೈದವರನ್ನು ದಂಡಿಸುವುದು ಸರಕಾರವಲ್ಲ ನಮ್ಮ ದಂಡನೆಗೆ ಸರಕಾರದ ಕಾನೂನು, ಪೋಲೀಸು, ನ್ಯಾಯಾಂಗ ಅಡ್ಡಿಯಾಗಬಾರದು. ಅಡ್ಡಿಯಾದರೆ ಅವನ್ನೂ ಕೆಡವಿ ಹಾಕಬೇಕು. ನಮ್ಮ ಸ್ವಯಂ ಸೇವಕರ ಆಣತಿಯ ಮೇರೆಗೆ ಈ ಕಾರ್ಯ ನಿರ್ವಹಿಸಬೇಕು. ಇದು ತೀರ್ಮಾನ.

**ಆಚಾರ್ಯ :** ಒಪ್ಪಿಗೆ.

**ಕೋಡಂಗಿ :** ಒಪ್ಪಿಗೆ.

**ಪ್ರಚಾರಿ :** ಹ್ಞಾಂ! ಇನ್ನೊಂದು ಸೂಚನೆ: ನಮ್ಮ ಮಿತ್ರ ಮಂಡಲಿಯ ಸದಸ್ಯರು ದೂರ ದಿಂದ ಆದೇಶ -ಸೂಚನೆ ನೀಡುತ್ತಾ ಅನುಷ್ಠಾನ ಮಾಡಿಸಬೇಕೇ ಹೊರತು ಮಾಡಬಾರದು. ಆದೇಶ ನಮ್ಮದು. ಅನುಷ್ಠಾನ ಕಪಿಸೈನ್ಯದ್ದು. ನಾವು ನೇಪಥ್ಯದಲ್ಲಿ, ಅವರು ರಣರಂಗದಲ್ಲಿ

**ಮೂವರೂ :** ಸಂಭವಾಮಿ ಯುಗೇ ಯುಗೇ

ಸಂಭವಾಮಿ ಯುಗೇ ಯುಗೇ (ನಿರ್ಗಮನ).

(ಹಿಂದಿನ ದೃಶ್ಯದಂತೆ - ಆಕಳ ಚರ್ಮ ಹೊತ್ತು ಬರುತ್ತಿರುವ ದಲಿತರು. ಅವರಿಗೆ ಎದುರಾಗಿ ಕೋಡಂಗಿ ನೇತೃತ್ವದ ಗುಂಪು ಕಲ್ಲಿನಿಂದ ಹೊಡೆಯುವರು. ದಲಿತರು ಓಡಿ ಪೋಲೀಸ್ ಠಾಣೆಯಲ್ಲಿ ಬಚ್ಚಿಟ್ಟುಕೊಳ್ಳುವರು. ಪ್ರವೇಶಿಸಿದ 'ಪ್ರಚಾರಕ' ಠಾಣೆಗೆ ಹೋಗಿ ಪೋಲೀಸ್‌ನನ್ನು ಗದರಿಸುವನು. ಕೋಡಂಗಿ ಪೋಲೀಸ್‌ನನ್ನು ಹೊಡೆದು ಕೆಡವಿ, ಒಳನುಗ್ಗಿ, ದಲಿತರನ್ನು ಹೊರಗೆ ಅಟ್ಟುವನು. ಹೊರಗಿನಿಂದ ಮೊದಲಿನಂತೆ ಕಲ್ಲಿನ ದಾಳಿ. ಐವರು ಹೆಣವಾಗಿ ಬೀಳುವರು. ಕೋಡಂಗಿ-ಪ್ರಚಾರಕ)

**ಕೋಡಂಗಿ ಪ್ರಚಾರಿ :** ಝುಂಡಾ ಊಂಚಾ ರಹೇ ಹಮಾರಾ, ವಿಜಯೀ ವಿಶ್ವ ಭಗವಾ ಪ್ಯಾರಾ... (ರೌದ್ರವಾಗಿ ಹೇಳುತ್ತಾ ಒಂದು ಬುದ್ಧ ಪಾತ್ರಧಾರಿ ಬೆನ್ನ ಮೇಲೆ ಕಾಲುಗಳನ್ನಿಟ್ಟು ಸ್ಥಿರ (Still) ವಾಗುವುದು-ಶಿಲ್ಪದಂತೆ).

**ಭೂದೇವಿ :** (ಪ್ರವೇಶ) ಅಯ್ಯೋ. ನನ್ನ ಮಕ್ಕಳ ನೆತ್ತರಿನಲ್ಲಿ ನಾನು ನೆನೆಯಬೇಕಾಯ್ತೆ. ಯಾವ ಧರ್ಮದ ಉಳಿವಿಗೆಂದು ಈ ಸಹಸ್ರಾರು ಕೊಲೆಗಳು? ಹಸು ಮಕ್ಕಳನ್ನು, ಬಸಿರು ತಾಯಂದಿರನ್ನು ಕೊಲ್ಲುವ ಇವರ ನರ ಯಜ್ಞಕುಂಡಕ್ಕೆ ಧಿಕ್ಕಾರವಿರಲಿ. ಈ ರಾಕ್ಷಸ ಸಂಸ್ಕೃತಿಯ ಹೆಣವೂ ನನ್ನ ಮಡಿಲು ಸೇರದಂತೆ ಸುಟ್ಟುಹೋಗಲಿ.

ಗೋಹತ್ಯೆ ಮಹಾಪಾಪ. ಆದರೆ ಮನುಷ್ಯರ ಹತ್ಯೆಗೆ ಪಾಪವೇ ಇಲ್ಲ, ಅದು ಪುಣ್ಯ ಕಾರ್ಯ! ಸಾವಿರ ಸಾವಿರ ಮನುಷ್ಯರನ್ನು ಕೊಂದ ರಾಕ್ಷಸರ ಬಾಯಲ್ಲಿ ದನಗಳನ್ನು ಉಳಿಸುವ ಪ್ರೀತಿಯ ಮಾತು. ಹಿಡಿ ಹುಲ್ಲು ಹಾಕದ ಇವರಿಗೆ ಅದನ್ನು ಉಳಿಸಿಕೊಳ್ಳಲೇನು ಹಕ್ಕು. ಹುಲಿ, ಸಿಂಹ, ಇಲಿ, ಹೆಗ್ಗಣಗಳೆಲ್ಲ ಬದುಕುತ್ತವೆ. ಆದರೆ ಅನ್ನ ಬೆಳೆವ ಶೂದ್ರನೇಕೆ ಹಸಿವಿನಿಂದ ಸಾಯಬೇಕು. ಅಯ್ಯೋ ನಿಜ ಸಂಸ್ಕೃತಿಯ ವಕ್ತಾರರೇ... ಹಸಿವಿನಿಂದ ಜನ ಹುಲ್ಲು ಹುಳ ತಿಂದು ಪ್ರಾಣ ಹಿಡಿದುಕೊಂಡಿರುವಾಗ ನಿಮಗೆ ಹಾಲು ತುಪ್ಪ ಕುಡಿಯ ಲೆಂದು ಆಕಳನ್ನು ಉಳಿಸಿಕೊಡಬೇಕೇ. ಈ ರಾಕ್ಷಸರು ಇಲ್ಲವಾಗಲಿ. ಇವರ ಹೆಣವೂ ನನ್ನ ಉಡಿಯಲ್ಲಿ ಬೀಳದಿರಲಿ. (ನಿರ್ಗಮನ)

* * *

**ವ್ಯಕ್ತಿ೧ :** (ಇಬ್ಬರ ಪ್ರವೇಶ) ಏ ಯಾರೋ ಇವ್ರು (-ಹೆಣಗಳತ್ತ ಕೈತೋರಿಸಿ) ಮತ್ತೆ ಇವ್ರು (ಕ್ರೌರ್ಯದಿಂದ ನಿಂತ ಕೋಡಂಗಿ-ಪ್ರಚಾರಿಗಳತ್ತ ಕೈತೋರಿಸಿ)

**ವ್ಯಕ್ತಿ೨ :** ಇವ್ರು... ತಾಲಿಬಾನ್‌ಗಳು.

**ವ್ಯಕ್ತಿ೧ :** ಏ... ಅವ್ರು ಅಫಘಾನಿಸ್ತಾನ್‌ದಲ್ಲಿದ್ದದ್ದು.

**ವ್ಯಕ್ತಿ ೨ :** ಹೌದು. ಅದು ಅಫಘಾನಿಸ್ತಾನ್ ತಾಲಿಬಾನ್. ಇದು ಹಿಂದುಸ್ತಾನೀ ತಾಲೀಬಾನ್.

**ವ್ಯಕ್ತಿ೧ :** ಮತ್ತೆ ಪಾಕಿಸ್ತಾನ್.

**ವ್ಯಕ್ತಿ೨ :** ಅಮೇರಿಕಾ ರೆಡೀ ಮಾಡಾಕ ಹತ್ತೇತಿ ಅದರ ಖಬರಸ್ತಾನ್.

**ವ್ಯಕ್ತಿ೧ :** ಏ... ಏನಪ್ಪಾ, ಇಲ್ಲಿ ಹೆಣಾ ಬಿದ್ದಾವು. ಯಾರವಿವು, ಯಾರ್ ಸಾಯಿಸಿದ್ರು ಅಂತಾ ಕೇಳಿದ್ರೆ ನೀನೇನು ಅಸ್ತಾನ್, ಈಸ್ತಾನ್, ತಾಲಿಬಾನ್, ಅದ್ವಾನ್ ಅಂತೆಲ್ಲಾ ಶುರು ಹಚ್ಕಂಡೆಲ್ಲ, ಏನಿದು? ನಿನಗೂ ಈ ಹೆಣಕ್ಕೂ, ಈ ಹೆಣಕ್ಕೂ ಆ ಧ್ವಜಕ್ಕೂ, ಆ ಧ್ವಜಕ್ಕೂ (ಪ್ರಚಾರಿ ಕೈಯ ಕೇಸರಿ ಧ್ವಜ ತೋರಿಸುತ್ತಾ), ತಾಲಿಬಾನಿಗೂ ಏನ್ ಸಂಬಂಧ, ಏನ್ ಹಕೀಕತ್ತು ಬಿಡಿಸಿ ಹೇಳೋ ಮಾರಾಯ.

(ಕೋಡಂಗಿ-ಪ್ರಚಾರಿಗಳು ತುಳಿದಿದ್ದ ಕಾಲಬುಡದಿಂದ ಒಮ್ಮೆಗೆ ಬುದ್ಧ ಏಳುವನು. ಆ ರಭಸಕ್ಕೆ ಇಬ್ಬರೂ ಬೀಳುವರು)

**ಬುದ್ಧ :** ಅದನ್ನು ನಾನು ಹೇಳುತ್ತೇನೆ. ಆಸ್ಥಾನವನ್ನೇ ಬಿಟ್ಟು ಜನಸ್ಥಾನಕ್ಕೆ ಹೋದವನು ನಾನು. ಹಾಗೆಂದೇ ಆಸ್ಥಾನದ ಗದ್ದುಗೆ ಏರುವ ಜನರಿಗೆಲ್ಲ ನನ್ನ ಮೇಲೆ ಆಕ್ರೋಶ. ನನ್ನ ಜೊತೆ ಜನ ಹೆಚ್ಚಾಗುತ್ತಿದ್ದಂತೆಯೇ ಅವರು ನಡುಗಿದರು. ನನ್ನ ಜನರನ್ನು ಹೊಡೆದರು, ಸಾಯಿಸಿದರು. ನನ್ನ ಸ್ತೂಪಗಳನ್ನು ಕೆಡವಿ ದೇಗುಲ ಕಟ್ಟಿಕೊಂಡರು. ಅಲ್ಲಿ ಅವರೂ ನನ್ನ ಮೂರ್ತಿಯನ್ನು ಫಿರಂಗಿಯಿಂದ ಒಡೆದು ಒಗೆದರು. ಇಲ್ಲಿ, ನಾನು ಹುಟ್ಟಿದ ದಿನವೇ ನನ್ನ ಹೆಸರಿನಲ್ಲಿ ಜನರನ್ನು ಸಾಯಿಸುವ ಬಾಂಬನ್ನು ಸ್ಫೋಟಿಸಿ 'ಬುದ್ಧ ನಕ್ಕ' ಎಂದರು. ನನ್ನೆದೆಗೆ ಬಂದೂಕು ಹಿಡಿದು ನಗು ಎಂದರೆ ನಗಲೋ, ಅಳಲೋ.

**೧ :** ಮಿತ್ರ ಬುದ್ಧ, ಬುದ್ಧ ಮಿತ್ರಾ, ಅದೆಲ್ಲಾ ಇರ್‍ಲಿ, ಇಲ್ಲಿ ಇವ್ರುನ್ನ ಕೊಂದ ಶಕ್ತಿ ಯಾವ್ದು ಅದು ಮೊದಲು ಹೇಳು.

**ಬುದ್ಧ :** ಆ ಶಕ್ತಿಯ ಹೆಸರೇ ಧರ್ಮ. ಆ ಶಕ್ತಿಯೇ ಅಲ್ಲಿ ಗಡ್ಡ ಬಿಡಬೇಕು, ಬುರ್ಖಾ ಹಾಕಿಕೊಳ್ಳಬೇಕು, ಇಲ್ಲದಿದ್ರೆ ಕಲ್ಲಿನಿಂದ ಹೊಡೆದು ಸಾಯಿಸ್ತೀವಿ, ಅಂತು. ಆ ಶಕ್ತಿಯೇ ಇಲ್ಲಿ ನೀವು ಇಂಥಾದ್ದನ್ನೇ ತಿನ್ನಬೇಕು, ಹೀಗೇನೇ ಬದುಕಬೇಕು ಅಂತ ಇವ್ರನ್ನ ಕಲ್ಲಿನಿಂದ ಹೊಡೆದು ಸಾಯಿಸ್ತು. ಈ ಶಕ್ತೀನೇ ಪತ್ರಕರ್ತರನ್ನ ಕಲಾವಿದರನ್ನ ಶಿಕ್ಷಿಸ್ತು, ಪಾದ್ರೀನ, ಹಸು ಮಕ್ಕಳ ಸಮೇತ ಜೀವಂತ ಸುಡ್ತು, ಧರ್ಮದ ಹೆಸರಿನಲ್ಲಿ ರೈಲಿಗೆ, ದೇಶಕ್ಕೆ ಬೆಂಕಿ ಹಚ್ತು, ಇದೇ ಆ ಶಕ್ತಿ.

**೧ :** ಏ... ಇದು ಧರ್ಮ ಅಲ್ಲ ಬಿಡು... ಅಧರ್ಮ.

**ಬುದ್ಧ :** ಹ್ಞಾಂ... ಮೆಲ್ಲಗೆ ಮಾತಾಡು. ಅವರು ಕೇಳಿಸಿಕೊಂಡ್ರೆ ನಿನ್ನನ್ನೂ ಕೊಂದು ಬಿಟ್ಟಾರು. ನೀನಂದೆಯಲ್ಲ...

**೧ :** ಅಧರ್ಮ

**ಬುದ್ಧ :** ಹ್ಞಾಂ; ಅದಕ್ಕೆ ಅವರಿಟ್ಟ ಹೆಸರು ಧರ್ಮ. ಹಾಗಾಗಿ ಅವರ ಆ ಧರ್ಮದ ಪ್ರಕಾರ ಇವರು ಸತ್ತುಹೋದ ಆಕಳ ಚರ್ಮ ಸುಲಿದದ್ದು ತಪ್ಪು. ಆ ತಪ್ಪಿಗಾಗಿ ಆ ಧರ್ಮ ರಕ್ಷಕರು ಇವರನ್ನು ಕಲ್ಲಿನಿಂದ ಹೊಡೆದು ಸಾಯಿಸಿದ್ರು.

**೧ :** ಮಿತ್ರ ಬುದ್ಧ, ಅಂದ್ರೆ ಅವರ ಆ ಧರ್ಮದಲ್ಲಿ ಹಿಂದೆ ಯಾರೂ ಮಾಂಸ ತಿಂದೇ ಇಲ್ಲೇನು?

**ಬುದ್ಧ :** ಮನುಷ್ಯ ಮೊದ್ಲು ತಿಂದಿದ್ದೇ ಮಾಂಸ. ಆಮೇಲೆ ಕಾಳು-ಕಡ್ಡಿ ತಿನ್ನೋದನ್ನ ಕಲಿತ.

**೧ :** ಅದೇನೋ ವೇದಕಾಲ ಅಂತಾರಲ್ಲ ಅವಾಗ. ಆ ಶ್ರೀರಾಮ, ಶ್ರೀಕೃಷ್ಣ ಅವ್ರಕಾಲ್ದಾಗ.

**ಬುದ್ಧ :** ಎಲ್ಲರೂ ಮಾಂಸ ತಿಂದು ಬೆಳೆದವರೇ. ಶ್ರೀರಾಮಚಂದ್ರನ ಅರಮನೆಯ ಅಡಿಗೆ ಮನೆಯಲ್ಲಿ ಮಾಂಸದ ಅಡಿಗೆ ಮಾಡುತ್ತಿದ್ದರು. ಅವರಿರಲಿ ಬ್ರಾಹ್ಮಣರಿಗಂತೂ ಗೋಮಾಂಸ ತಿನ್ನುವುದು ಪವಿತ್ರವಾಗಿತ್ತು. ಯಜ್ಞಗಳಿಗಾಗಿ ಸಾವಿರ-ಸಾವಿರ ಕುರಿ-ಕುದುರೆ ಆಕಳುಗಳನ್ನು ಬಲಿಕೊಡುತ್ತಿದ್ದರು. ಬ್ರಾಹ್ಮಣರ ಮನೆಗೆ ಬಂದ ಅತಿಥಿಗೆ ಆಕಳ ಮಾಂಸ

ದಿಂದ ಮಾಡಿದ ಮದ್ಯ ಮತ್ತು ಆಕಳ ಮಾಂಸ ನೀಡಿಯೇ ಉಪಚಾರ ಮಾಡುತ್ತಿದ್ದರು. ಒಟ್ಟಿನಲ್ಲಿ ಮಾಂಸ- ಗೋಮಾಂಸ ತಿನ್ನುವುದು ಎಂದೂ ಅಪವಿತ್ರವಾಗಿರಲಿಲ್ಲ.

**೧** : ಹಂಗನ್ನಂಗಿದ್ರೆ, ಗೋಹತ್ಯೆ ಮಹಾಪಾಪ ಅನ್ನೋದೆಲ್ಲಾ ಸುಳ್ಳೇನು ?

**ಬುದ್ಧ**: ಸುಳ್ಳಷ್ಟೇ ಅಲ್ಲ. ಸುಳ್ಳಿಗಿಂತಲೂ ಅಪಾಯದ ಅರ್ಧಸತ್ಯ. ಗೋಮಾಂಸ ನಿಷೇಧ ಅನ್ನೋದರ ಹಿಂದಿರೋದು ಗೋವುಗಳ ಮೇಲಿನ ಪ್ರೀತಿ ಅಲ್ಲ. ಸಂಸ್ಕೃತೀನೂ ಅಲ್ಲ. ರಾಜಕಾರಣ. (ಹೇಳುತ್ತಿದ್ದಂತೆ... ಶಿಲ್ಪದಂತೆ ಸ್ಥಿರ)

**೨** : (ಪ್ರವೇಶ) ವೈದಿಕ ಆಚರಣೆಗಳೇ ಶ್ರೇಷ್ಠವೆಂದು ನಂಬಿಸಲಾಗಿದ್ದ ಕಾಲದಲ್ಲಿ ಬುದ್ಧ ಕಟ್ಟುಕತೆಗಳನ್ನು ಪ್ರಶ್ನಿಸುವುದನ್ನು ಕಲಿಸಿದ.

**೩** : (ಪ್ರವೇಶ) ದಿನೇ ದಿನೇ ಬುದ್ಧ ಜನಪ್ರಿಯನಾದ. ವೈದಿಕ ಧರ್ಮಕ್ಕೆ ಹಿನ್ನಡೆಯಾಯ್ತು.

**೪** : (ಪ್ರವೇಶ) ಮಾಂಸ ತಿನ್ನುವವರ ಸಂಖ್ಯೆ ಹೆಚ್ಚಾಗಿದ್ದನ್ನು ಗಮನಿಸಿದ ಬುದ್ಧ.

**ಬುದ್ಧ**: ರೈತ ಬೆಳೆದರೆ ಮಾತ್ರ ದೇಶ ಸುಭಿಕ್ಷೆಯಿಂದಿರುತ್ತದೆ. ಆದ್ದರಿಂದ ಹೈನು ನೀಡುವ ಆಕಳುಗಳನ್ನು, ಉಳುವ ಎತ್ತುಗಳನ್ನು ತಿನ್ನಬೇಡಿ. ಇದರಿಂದ ಕೃಷಿಗೆ ನಷ್ಟವಾಗಬಹುದು.

**೪** : ಎಂದು ಹೇಳಿದ.

**೧** : ಬುದ್ಧ ಹೀಗೆ ಹೇಳುವ ಹೊತ್ತಿಗೆ ಅತಿ ಹೆಚ್ಚು ಗೋವುಗಳನ್ನು ತಿನ್ನುತ್ತಿದ್ದ ಬ್ರಾಹ್ಮಣರಿಗೆ ಮುಖಭಂಗವಾಯ್ತು.

**೨** : ತಮ್ಮ ಅಸ್ತಿತ್ವ ಜನಪ್ರಿಯತೆ ಉಳಿಸಿಕೊಳ್ಳಲು ಗೋಮಾಂಸ ತಿನ್ನುವುದನ್ನೇ ಬಿಟ್ಟರು.

**೩** : ಅಷ್ಟೇ ಅಲ್ಲ, ಬುದ್ಧನಿಗಿಂತ ತಾವೇ ಶ್ರೇಷ್ಠ ಎಂದುಕೊಳ್ಳಲು ಒಟ್ಟು ಮಾಂಸ ತಿನ್ನುವುದನ್ನೇ ಬಿಟ್ಟುಬಿಟ್ಟರು.

**೪** : ತಮ್ಮ ಶಾಸ್ತ್ರ, ನೀತಿ, ಪುರಾಣಗಳನ್ನೆಲ್ಲ ತಿದ್ದಿ ಬರೆದುಬಿಟ್ಟರು.

(ರಾಗವಾಗಿ)

**೧** : ಹೊತ್ತು ಬಂದರೆ ನಾಯಿ ತಿನ್ನು ಎನ್ನುತ್ತಿದ್ದ ವಿಶ್ವಾಮಿತ್ರ.

**೨** : ಎಳೇ ಕರುವಿನ ಮಾಂಸ ಇಷ್ಟ ಎಂದ ಯಾಜ್ಞವಲ್ಕ್ಯ.

**೩** : ಹಸುವಿನ ಮಾಂಸ ತಿನ್ನಬೇಕೆನ್ನುವುದು ವಾಜಸನೇಯಿ ಸಂಹಿತೆ.

**೪** : ಇಂದ್ರ ಅಗ್ನಿಗೆ ಎತ್ತಿನ ಮಾಂಸ ಬೇಕೆನ್ನುವುದು ಋಗ್ವೇದ.

**೧+೨** : ದ್ವಿಜರ ಪ್ರೀತಿಯ ಮಧುಪರ್ಕವೆಂದರೆ ಆಕಳ ಮಾಂಸದ ಹೆಂಡ.

**೩+೪** : ಇಂತಹ ಸಾವಿರ ಉದಾಹರಣೆಗಳು ಧರ್ಮ ಗ್ರಂಥಗಳಲ್ಲೇ ಲಭ್ಯ.

**೧** : ಬುದ್ಧ ಮಿತ್ರ, ನನಗ್ಯಾಕೋ ಇವರ ಜೊತೆ ಇರಾಕ ಹೆದ್ರಿಕಿ ಆಗಾಕ ಹತ್ತೇತಿ. ಇಲ್ಲಿದ್ದು ಶೂದ್ರ ಅನಿಸಿಕೊಳ್ಳಾಕ್ಕಿಂತ ನಿನ್ ಜತೀಗೆ ಬಂದು ನಿನಗ ಮಿತ್ರ ಅನ್ನೇಕು ಅನ್ಸೇತಿ. ನನಿಗೂ ನಿನ್ನ ಜೊತಿ ಕರ್‍ಕೊಂಡುಹೋಗು.

(ಬುದ್ಧ ಮುಗುಳ್ನಗೆ- ಅನುಮೋದನೆ ಅಭಿನಯ- ಮೆಲ್ಲಗೆ ನಡಿಗೆ)

**೨** : ನಾನೂ ಬರ್‍ತೀನಿ ತಡಿಯೋ ಮಾರಾಯ. ನಮ್ ಬಾಬಾ ಸಾಹೇಬ್ ಅಂಬೇಡ್ಕರ್‍ರು ಅವಾಗ ಹೇಳಿದ್ರು. ನಾವ್ ಕೇಳಿರ್‍ಲಿಲ್ಲ. ನಮ್ ಮಕ್ಳು ಮರೀನರಾ ಸುಖವಾಗಿರ್‍ಲಿ. ನಾನೂ ಇವತ್ತಿಂದ ಬುದ್ಧನ ಶಿಷ್ಯಾನ.

**೩** : ಏ... ನಾನೂ ಬಂದೆ ತಡಿಯೋ ಮಾರಾಯ. ಇಲ್ಲಿದ್ದು ಛೀ... ಥೂ... ಅಂತಾ ಉಗಳಿಸ್ಕಂಡು ಸಾಯಾದ್ಕಿಂತ ಸಾಯಾಮುಂದರ ಮರ್ಯಾದಿಲೆ ಸಾಯಾನ.

**೪** : ನನಿಗೂ ಕರ್‍ಕೊಳ್ರೋ... ನಾನೂ ಬಂದೆ ತಡೀರೋ...

(ಬುದ್ಧನ ಹಿಂದೆ- ಹಿಂಡು- ನಿರ್ಗಮನ)

**ಕೋಡಂಗಿ** : ಆಚಾರ್ಯರೇ, ನಮ್ಮ ಶೂದ್ರ ಸೈನಿಕರೆಲ್ಲ ಆ ಬುದ್ಧನ ಹಿಂದೆ ಹೋದ್ರೆ ನಾವು ರಾಜ ಸಿಂಹಾಸನದ ಯುದ್ಧ ಗೆಲ್ಲೋದಾದ್ರೂ ಹೇಗೆ ?

**ಆಚಾರ್ಯ** : ಮಂಡನೆ- ದಂಡನೆಗಳನ್ನು ಬಲ್ಲ ನನ್ನಲ್ಲಿ ನಿಷೇಧಗಳೂ ಇವೆ ಸೇವಕ.

**ಕೋಡಂಗಿ** : ಏನದು ಆಚಾರ್ಯರೇ ?

**ಆಚಾರ್ಯ** : ನಾನೊಂದು ಮಂತ್ರ ಹೇಳಿಕೊಡುತ್ತೇನೆ. ಅದನ್ನು ಜೋರಾಗಿ ಹೇಳು. ಮಂತ್ರ ಬಾಯಲ್ಲಿ ದಂಡ ಕೈಯಲ್ಲಿ, ಮಂತ್ರ-

**ಕೋಡಂಗಿ** : ದಂಡ... (ವಿಕಟ ನಗೆ) ಮಂತ್ರದಂಡ. (ಕೈಯ ಗದೆ ಕುಣಿಸುತ್ತಾ)

**ಆಚಾರ್ಯ** : ಸರಿ. ನಾನು ಹೇಳಿದಂತೆ ಆ ಮಂತ್ರ ಉಚ್ಚರಿಸು. ಮತಾಂತರ ನಿಷೇಧ.

**ಕೋಡಂಗಿ** : ಮತಾಂತರ ನಿಷೇಧ. (ಅಚ್ಚರಿ, ಸಂತಸ... ಮಿಶ್ರಿತ ನಗೆ- ಕುಣಿತ) ಮತಾಂತರ ನಿಷೇಧ.

**ಆಚಾರ್ಯ** : ಏ... ಬಾಯಲ್ಲಿ. ಈ ಮಂತ್ರ ಬಾಯಲ್ಲಿ. ದಂಡ ಕೈಯಲ್ಲಿ. ಇದು ನಮ್ಮ ಹೊಸ ಕಾನೂನು. ತಪ್ಪಿದರೆ ದಂಡ.

**ಕೋಡಂಗಿ** : ಹ್ಞಾ... ಮತಾಂತರ ನಿಷೇಧ. (ಕುಪ್ಪಳಿಸುವನು) ತಪ್ಪಿದರೆ ದಂಡ... ತಲೆ ದಂಡ... (ಕೂಗುತ್ತಾ- ಹೇಳುತ್ತಾ... ರಂಗದ ತುಂಬಾ ಬೀಭತ್ಸವಾಗಿ ಕುಣಿದಾಡುವನು).

(ಈ ಮೂವರು ಆಚಾರ್ಯ- ಪ್ರಚಾರಕ- ಕೋಡಂಗಿ ಸಮೂಹಕ್ಕೆ ಅಭಿಮುಖವಾಗಿ ಬುದ್ಧ ಸಮೂಹ ಪ್ರವೇಶ- ಅವರನ್ನು ತನ್ನ ಗದೆಯಿಂದ ತಡೆಗಟ್ಟಿದ ಕೋಡಂಗಿ)

**ಕೋಡಂಗಿ** : ಏ.. ಇದು ಹೊಸ ಕಾನೂನು. ಮತಾಂತರ ನಿಷೇಧ. ತಪ್ಪಿದರೆ ತಲೆದಂಡ.

**೧** : ನಾವೀಗ ಬುದ್ಧನ ಶಿಷ್ಯರು. ನಿಮ್ಮ ಹಿಂದೆ ಬಂದ್ರೆ ಮತಾಂತರ ಆದಂಗಾಗಲ್ಲೇನು. ನೀವೇ ಹೇಳ್ತೀರಿ ಮತಾಂತರ ನಿಷೇಧ ಅಂತ.

**ಕೋಡಂಗಿ** : (ತಲೆ ಕೆರೆದುಕೊಳ್ಳುತ್ತಾ... ತಿರುಗಿ) ಹೌದಲ್ಲ ಆಚಾರ್ಯರೇ.

**ಆಚಾರ್ಯ** : ಹೀಗೆ ಮಾಡಿದರೆ ಮತಾಂತರ ಅಲ್ಲ. ಅದು ಪೂರ್ವಾಶ್ರಮಕ್ಕೆ ಮರಳಿದಂತೆ. ಹೋದರೆ ಮತಾಂತರ.

**ಕೋಡಂಗಿ** : ಹ್ಞಾಂ. ಹೋದರೆ ಮತಾಂತರ. ಬಂದರೆ ಪೂರ್ವಾಶ್ರಮಕ್ಕೆ ಮರಳಿದಂತೆ. ಏ ಬನ್ರೋ ಈ ಕಡೆ... (ಆಕ್ರಮಣ ಮಾಡಿ ಒಬ್ಬೊಬ್ಬರನ್ನೇ ಎಳೆದು ಹಾಕುವನು) ಒಂದೋ... ಎರಡೋ... (ಪ್ರೇಕ್ಷಕರಲ್ಲಿಂದ ಅಭಿನಯ) ಹತ್ತೋ, ನೂರೋ... ಸಾವಿರ. (ದಣಿಯುವನು)

ಆಚಾರ್ಯರೇ, ಇವರೆಲ್ಲಾ ಬಂದರು. ಇವರಿಗೆಲ್ಲಿ ಜಾಗ ತೋರಿಸಲಿ ?

**ಆಚಾರ್ಯ** : ಬಂದರು ತಾನೇ... ಅಲ್ಲೇ ಇರಲಿ ಬಿಡು. ತೋರಿಸು ಅವರಿಗೆ ಆ ಕಟ್ಟಕಡೆಯ ಕಾಲೋನಿ. (ನಿರ್ಗಮನ)

**೧** : ಮಿತ್ರ ಬುದ್ಧ. ನನಗೆ ಈ ಯಾವ ಧರ್ಮದ ಕಾಲೋನಿಗಳೂ ಬೇಡ. ನಾವು ದುಡಿಯೋ ಮಂದಿ. ದುಡಿಯೋದಾ ನಮ್ಮ ಧರ್ಮ. ನಮ್ಮ ದಾರಿ ನಮೀಗೆ. (ಶ್ರಮ ಜೀವಿಗಳ ಧ್ವಜ ಎತ್ತಿ ಹಿಡಿದು ರಭಸದ, ಬೀಸು ಹೆಜ್ಜೆಗಳನ್ನು ಹಾಕಿ ಹೊರಡುವನು. ಅವನನ್ನು ಅನುಸರಿಸಿ ಉಳಿದೆಲ್ಲ ದಲಿತ-೧-೨-೩-೪-ಪಾತ್ರಗಳು. ನೋಡುತ್ತಾ ಅಚ್ಚರಿಯಿಂದ ನಿಂತ ಬುದ್ಧನೂ ಮುಗುಳ್ನಕ್ಕು ಅವರನ್ನು ಕೂಡಿಕೊಳ್ಳುವನು. ಭೂದೇವಿಯೂ ಧ್ವಜ ಹಿಡಿದವನ ಜೊತೆಯಾಗುವಳು. ಒಂದು ದೊಡ್ಡ ಸಮೂಹ)

(ಅವರಿಗೆದುರಾಗಿ ಕೋಡಂಗಿ, ಆಚಾರ್ಯ, ಪ್ರಚಾರಕ ಪ್ರವೇಶ - ಮುಖಾಮುಖಿ)

**ಆಚಾರ್ಯ** : ಇದು ಕೂಡದು. ನೀವೆಲ್ಲ ನಮ್ಮ ವಿಶಾಲ ಸಂಸ್ಕೃತಿಯ ಭಾಗ. ಬನ್ನಿ ನಮ್ಮ ಜೊತೆ.

**೧** : ಸಾಧ್ಯವಿಲ್ಲ. ನಾವು ಯಾರ ಭಾಗವೂ ಅಲ್ಲ.

(ಮೂವರೂ ತಡೆಯಲು ಅಡ್ಡ- ಪ್ರಯತ್ನಿಸುವರು. ಸಮೂಹ ಅವರನ್ನು ಹಿಂದಕ್ಕೆ ಸರಿಸುವುದು. ಮುಖಾಮುಖಿ. ಶ್ರಮಜೀವಿ ಸಮೂಹದ ಮುನ್ನಡೆ. ಕೋಡಂಗಿ ಕೂಟದ ಹಿನ್ನಡೆ... ಹೆಜ್ಜೆಗಳು... ಅವರನ್ನು ರಂಗದಿಂದ ಸರಿಸಿ. ರಂಗ ಮಧ್ಯಕ್ಕೆ ಬಂದು ಧ್ವಜ ಎತ್ತಿಹಿಡಿಯುವ ದಲಿತ/ಶ್ರಮಿಕ. ಎಡಬಲಗಳಲ್ಲಿ ಬುದ್ಧ- ಭೂದೇವಿ- ಉಳಿದೆಲ್ಲ ಪಾತ್ರಗಳು–ಹಾಡುವರು).

ಶೂದ್ರ ಶಕ್ತಿ, ವಿಶ್ವ ಶಕ್ತಿ
ಶ್ರಮಿಕ ಧರ್ಮ- ಮನುಜ ಧರ್ಮ.

ಹೊಸ ಶತಮಾನಕೆ ವಾರಸುದಾರರು
ಶೂದ್ರರು ನಾವು ಶೂದ್ರರು.
ಶೂದ್ರ ಶಕ್ತಿಯ ಮೇಲಿನ ಹಲ್ಲೆಯ
ಸಹಿಸಲಾರೆವು ಸಹಿಸಲಾರೆವು.

ನೆಲ ಹಡೆದ ಮನುಜ, ಬೆಳೆ ಬೆಳೆವ ರೈತ
ಹೊಸ ರಾಷ್ಟ್ರ ಕಟ್ಟಿದವ ಕಾರ್ಮಿಕ
ಜಗದಗಲ ಒಂದೆ ದುಡಿವವರ ಧರ್ಮ
ನಮ್ಮ ಮಂತ್ರ ಕಾಯಕವೆ ಕೈಲಾಸ.

ಮುಕ್ಕೋಟಿ ದೇವರು, ನಮ್ಮ ಸೃಷ್ಟಿಯು
ಮೂರು ಲೋಕಗಳು ಮೋಸದ ಕತೆಯು.
ವೇದ ಶಾಸ್ತ್ರಗಳೆ ಸುಲಿಗೆ ಶಸ್ತ್ರಗಳು
ಎದೆಯ ಬಗೆಯುವ ಚೂರಿಗಳು,
ನಮ್ಮ ಎದೆಯ ಬಗೆಯುವ ಚೂರಿಗಳು.

ಬಿ. ಪೀರ್‌ಬಾಷ
ಪತ್ರಕರ್ತರು, ಪಿಂಜಾರ ಓಣಿ, ಹೂವಿನ ಹಡಗಲಿ, ಬಳ್ಳಾರಿ ಜಿಲ್ಲೆ - ೫೮೩ ೨೧೯

# ಕಾವ್ಯದಾಹಿಗಳ ಪಾಲಿನ ಹರಿವ ತೊರೆ – 'ಬಾಯಾರಿಕೆ'



**ಕಾ**ವ್ಯವು ಸಂವೇದನಾಶೀಲ ಹೃದಯದ ಆಂತರಿಕ ಅಗತ್ಯ. ಕವಿಗೆ ತನ್ನ ಆಳದ ಸಂವೇದನೆಗಳು ಪಕ್ವಗೊಂಡಾಗ ಅವುಗಳನ್ನು ಹೊರಹಾಕಲೇಬೇಕಾದ ತುರ್ತು ಒದಗಿಬರುತ್ತದೆ. ಭಾಷೆ ಮತ್ತು ಸಂವೇದನೆಗಳ ಪ್ರಾಮಾಣಿಕ ಬೆಸುಗೆಯಿಂದ ಮೂಡಿಬರುವ ಕಾವ್ಯ ಖಂಡಿತವಾಗಿಯೂ ಓದುಗರನ್ನು ತಟ್ಟುತ್ತದೆ. ಡಾ|| ವಿನಯಾ ಅವರಲ್ಲಿ ಅಂಥ ಕವಿತೆಗಳನ್ನು ಕೊಡುವ ತಾಕತ್ತಿದೆ. ಅಂತೆಯೇ ಅವರ ಮೊಟ್ಟಮೊದಲ ಕವನ ಸಂಕಲನವಾದ 'ಬಾಯಾರಿಕೆ' ಪ್ರಕಾಶಕ ಬಸವರಾಜ ಸೂಳಿಭಾವಿಯವರು ಹೇಳುವಂತೆ ಎಲ್ಲ ರಿಯಾಯಿತಿಗಳನ್ನು ನಿರಾಕರಿಸಿ ಗಟ್ಟಿ ಸಂಕಲನ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಕನ್ನಡ ಕಾವ್ಯ ಹೊಸ ದಿಕ್ಕಿಗಾಗಿ ಹಾತೊರೆಯುತ್ತಿರುವ ಪ್ರಸ್ತುತ ಸಂದರ್ಭದಲ್ಲಿ 'ಬಾಯಾರಿಕೆ' ಭರವಸೆ ಮೂಡಿಸುವ ಸಂಕಲನವಾಗಿದೆ.

ಈ ಸಂಕಲನ ಸ್ತ್ರೀ ಸಂವೇದನಾ-ಕಾವ್ಯದ ಸಫಲ ಮಾದರಿ. 'ಬಯಲ ಬಾಯಾರಿಕೆ' ಕವಿತೆಯ ಈ ಸಾಲುಗಳನ್ನು ಗಮನಿಸಿ :

*ನಿರಾಕಾರಿ ಹುಡುಕಾಟಗಳ ಧೇನಿಸುತ್ತ*
*ಸರಿದು ಹೋಗಲೆ ಬರಿದೇ ?*
*ಬಯಲ ಬಾಯಾರಿಕೆಗೊಂದು*
*ಹರಿವ ತೊರೆಯೂ ಆಗದೇ...*

ಇಲ್ಲಿ ಕವಿ ಮಹಾದೇವಿ ಅಕ್ಕಳನ್ನು ಸ್ಮರಿಸುವ ರೀತಿ, 'ಬಯಲ ಬಾಯಾರಿಕೆಗೆ ಹರಿವ ತೊರೆಯಾದರೂ ಆದೇನು' ಎಂಬ ಸದಾಶಯ, ಬದುಕಿನ ಎಲ್ಲ ಆಗು-ಹೋಗುಗಳಿಗೆ ಎದೆಗೊಟ್ಟು ನಿಲ್ಲುವ ತವಕ, ವರ್ತಮಾನವನ್ನು ಛಾಲೆಂಜ್ ಆಗಿ ಸ್ವೀಕರಿಸುವ ಪರಿ - ಕಾವ್ಯದ ವ್ಯಾಪ್ತಿಯನ್ನು ಹಿಗ್ಗಿಸಿವೆ.

ವಿನಯಾ ಅವರ ಕಾವ್ಯದುದ್ದಕ್ಕೂ ಸ್ತ್ರೀ 'ತಾಯಿ'ಯ ಪಾತ್ರದಲ್ಲಿ ಹೆಚ್ಚು ಶಕ್ತಳಾಗಿ ವ್ಯಕ್ತವಾಗಿದ್ದಾಳೆ. ತಾಯಿಯ ಕುರಿತಾದ ಸುಪ್ತ ಸಂವೇದನೆಗಳು ತೋರಿಕೆಯವಾಗಿರುವುದಿಲ್ಲ – ಎಂಬುದಕ್ಕೆ ಈ ಸಾಲುಗಳೇ ಸಾಕ್ಷಿ :

*'ಅವ್ವ ಭಯವಾಗುತ್ತಿದೆಯೆ*
*ಅವ್ವ ಚಳಿಯಾಗುತ್ತಿದೆಯೆ*
*ಎಂದೊರಲಲಿಲ್ಲ' (ತೂಗಬಲ್ಲೆಯಾ ಮತ್ತೆ ತೊಟ್ಟಿಲು?)*
*'ಬಿಮ್ಮಗೆ ಕೂತವಳಿಗೆ ಅವ್ವ ಮತ್ತಗೆ ಅಂದಳು*
*'ಎಲ್ಲ ತಾನಾಗೇ ರೂಢಿಯಾಗುತ್ತದೆ'*
*ಯಾಕೋ ಅವಳ ಕಂಗಳಲ್ಲಿ ಇಣುಕುವ*
*ಧೈರ್ಯ ಬರಲಿಲ್ಲ'*

(ಸೀರೆ ಎಂದರೆ ಎಂಥ ಹುಚ್ಚು ನನಗೆ)

ಇಲ್ಲಿ ಎಳ್ಳಷ್ಟೂ ಕೃತಕತೆ ಇಲ್ಲ. ಸರ್ವ ತಾಯಿ ಮತ್ತು ಮಗಳ ನಡುವೆ ಸದಾ ಸುಪ್ತವಾಗಿರುವ ಪ್ರೀತಿ ಮತ್ತು ಕ್ರಮೇಣ ಸೃಷ್ಟಿಯಾಗುವ ಅಂತರ ಎರಡನ್ನೂ ಕವಿ ಹಿಡಿದಿಡುವ ರೀತಿ ಅನನ್ಯ :

*'ಒಡಲು ಕುದಿವಲ್ಲಿ ಹಸಿವು ಸುಡುವಲ್ಲಿ*
*ನೋವು ಉಳಿವಲ್ಲಿ ಪ್ರೀತಿ ಚಿಗುರಲ್ಲಿ*
*ನಿನ್ನ ಹೆಸರು' ('ತಾಯಿ')*

ಇದು ಪ್ರತಿ ಮಗುವೂ ತನ್ನ ತಾಯಿಗೆ ಹೇಳಬೇಕಾದ ಮಾತು. ಕಾವ್ಯದ ದನಿ ಇಷ್ಟು ಸಹಜವಾಗಿರಬೇಕು.

ಸ್ತ್ರೀಯಾಗಿರುವ ಸಂಭ್ರಮ ಮತ್ತು ಸ್ತ್ರೀ ಬದುಕಿನ ಅನಿವಾರ್ಯ ವಿಷಾದಗಳನ್ನು ಕವಿ ಏಕಕಾಲಕ್ಕೆ ಗ್ರಹಿಸುವ ರೀತಿ ಆಪ್ಯಾಯಮಾನ. ಇಲ್ಲಿ ಕಣ್ಣೀರು ಸದ್ದಿಲ್ಲದೇ ಹರಿಯುತ್ತದೆ. ಕಣ್ಣಂಚಿನಲ್ಲಿ ಸದಾ ಪ್ರೀತಿ ಜಿನುಗುತ್ತದೆ. ಮುನ್ನುಡಿಯಲ್ಲಿ ಜಿ. ಎಸ್. ಆಮೂರ ಅವರು ಹೇಳುವಂತೆ 'ಸಂಯಮ ಹಾಗೂ ಮೆಲುದನಿ' ಅವರ ಕಾವ್ಯ ಭಾಷೆಯ ಮುಖ್ಯ ಲಕ್ಷಣಗಳು. 'ಉರಿವ ಇಳೆ ಊರ್ಮಿಳೆ', 'ಸ್ವಗತ'ದಂಥ ಕವಿತೆಗಳು, ಅವು ಅಪ್ಪಿಕೊಳ್ಳುವ ವಿಷಾದ ಮತ್ತು ಸಹಜ ತಲ್ಲಣಗಳಿಂದಾಗಿ ಓದುಗರನ್ನು ಬೆಂಬತ್ತಿ ಕಾಡುತ್ತವೆ.

*ಆಕಾಶ ಸುರಿಸಿದ ಬೆವರ ಹುಂಡಿಗೆ*
*ಭುವಿಯ ಬಸಿರಲ್ಲಿ ಜೀವ ಪ್ರಸವದ ಕಾವು*
*ನಾ ಮಾತ್ರ ಹಸಿರಿಲ್ಲ ಬಸಿರಿಲ್ಲ*
*ಜೀವದುಸಿರಿಲ್ಲ ಉರಿವ ಇಳೆ ಊರ್ಮಿಳೆ ?*

*(ಉರಿವ ಇಳೆ ಊರ್ಮಿಳೆ)*

*ತುಂಬಿದ ಕಣ್ಣ ಕೊಳದಲ್ಲಿ*
*ಸೂರ್ಯ ಕರಗಿ... ಕೆಂಪಾಗಿ*
*ನೆನಪ ಅಲೆಗಳಿಗೀಗ*
*ಕಪ್ಪು ಬುರುಗು*
*ಬದುಕು-ಆರತಿಯ ಕರ್ಪೂರ (ಸ್ವಗತ)*

ಈ ಕವಿತೆಗಳಲ್ಲಿ ಕವಿ ಸ್ವಗತದ ಧಾಟಿಯಲ್ಲಿ ಶಾಂತಲೆ, ಊರ್ಮಿಳೆಯರ ಆಳದ ನೋವು-ತಲ್ಲಣಗಳನ್ನು ತೆರೆದಿಡುವಾಗ, ಓದುಗರಿಗೆ ಕವಿ-ಕಾವ್ಯಗಳ ನಡುವೆ ಏರ್ಪಡುವ ತಾದಾತ್ಮ್ಯಾನುಭೂತಿಯ ದರ್ಶನವಾಗುತ್ತದೆ.

ಇತ್ತೀಚಿಗೆ ಗೆಳೆಯ ವಿಕ್ರಮ ವಿಸಾಜಿ ಹೇಳಿದ ಮಾತೊಂದು ನೆನಪಿಗೆ ಬರುತ್ತಿದೆ : 'ಕಾವ್ಯದ ಮಾಂತ್ರಿಕತೆಯನ್ನು ಕಳೆಯದೆ, ವೈಯಕ್ತಿಕ ಅನುಭವಗಳನ್ನು ಬಿಟ್ಟುಕೊಡದೆ, ಸಮುದಾಯದ ತಲ್ಲಣಗಳಿಂದ ದೂರವಾಗದೆ, ಇವೆಲ್ಲ ನನ್ನಲ್ಲಿ ಒಂದಾಗಿ ಕಾವ್ಯವಾಗುವ ಆ ಅಮೃತ ಘಳಿಗೆಗಾಗಿ ಕಾಯುತ್ತಿರುವೆ!' ಬಹುಶಃ ವಿನಯಾ ಅವರಲ್ಲಿ ಅಂಥ ಅಮೃತ ಘಳಿಗೆಗಳೇ ಕಾವ್ಯವಾಗಿವೆ. 'ಸೋಮಾಲಿಯಾದ ಸ್ವಗತ', 'ಮುಲುಗುಡುವ ತಾಯ ಬಸಿರು', 'ಪ್ರತಿ ರಾತ್ರಿಯ ಕನಸು' 'ಹೊಸ ವರುಷ'ದಂಥ ಕವಿತೆಗಳು ಸಮಕಾಲೀನ ಸಂದರ್ಭಕ್ಕೆ, ಕಾಲದ ಅಗತ್ಯಕ್ಕೆ ಕವಿ ಸ್ಪಂದಿಸುವ ರೀತಿಯನ್ನು ತೋರುತ್ತವೆ.

*ರಕ್ತ ಕೀವಿನ ನಾತ ಕುಡಿಯುತ್ತ*
*ಕೊರೆವ ಮನಸ ಮುಡಿಪಿಟ್ಟು*
*ಮುದ್ದಿಸುವೆನೇ ಆ ಮಕ್ಕಳನ್ನೆಲ್ಲ*
*ಮತ್ತೊಮ್ಮೆ ಹೆತ್ತು..*

*(ಸೋಮಾಲಿಯಾದ ಸ್ವಗತ)*

ಇಲ್ಲಿ 'ಭೂಮಿ' ತಾಯಾಗಿ ವಿಲಪಿಸುವ ಪರಿ ಎಂಥ ಹೃದಯವನ್ನೂ ಹಸಿಗೊಳಿಸುವಂಥದ್ದು.

ಮುಂದೆ, 'ಮುಲುಗುಡುವ ತಾಯ ಬಸಿರು' ಎಂಬ ಕವಿತೆಯಲ್ಲಿ 'ಸಾವು ಅರ್ಥ ಕಳಕೊಂಡ ನೆಲದಲ್ಲಿ ಹುಟ್ಟು ಹಬ್ಬ ಆಗುವುದಿಲ್ಲ ಮಗೂ' ಎಂದು ಪ್ರಸ್ತುತ ಬದುಕಿನ ದುರಂತಗಳನ್ನು ಚಿತ್ರಿಸುವ ಕವಿ, ಮುಂದಕ್ಕೆ – 'ನೀನೊಂದು ಬೆಳಕಿನ ಬೀಜ. ಹೊತ್ತು ತಾ ಜೀವಸೆಲೆಯನ್ನು, ಬಸವಳಿದ ಬದುಕಿಗೆ' ಎಂದು ಕವಿತೆಗೆ ಆಶಾದಾಯಕ ಕೊನೆ ನೀಡುತ್ತಾರೆ. ವೈಯಕ್ತಿಕ ತಲ್ಲಣ ಹಾಗೂ ಸಮುದಾಯದ ತಲ್ಲಣಗಳನ್ನು ಸಮೀಕರಿಸಿ, ಸಾರ್ವಕಾಲಿಕ ಕವಿತೆಗಳನ್ನು ನೀಡಿದ್ದಾರೆ ವಿನಯಾ.

ಪುಟಗಳು : ೭೦ ರೂ. ೩೫
ಲಡಾಯಿ ಪ್ರಕಾಶನ
೪೨, ಪ್ರಸಾದ ಲಾಡ್ಜ್, ಗದಗ

'ಹಕ್ಕಿ ಸಾವನು ಲೋಕ ನೋಡಲಾಗದು', 'ಹಾಡು ಮತ್ತು ಹಕ್ಕಿ'ಯಂಥ ಕವಿತೆಗಳು ಆಮೂರರು ಗುರುತಿಸುವಂತೆ ವಿನಯಾ ಅವರ ಸೃಜನಶೀಲತೆಯ ಕುರಿತಾದ ಕಾಳಜಿಯನ್ನು ಬಿಂಬಿಸುತ್ತವೆ. ಗಂಡು-ಹೆಣ್ಣಿನ ನಡುವಿನ ಸಂಬಂಧಗಳು, ಪ್ರೀತಿ, ವಿರಹ ಇತ್ಯಾದಿ ಸಂವೇದನೆಗಳು ಪ್ರತಿಯೊಬ್ಬ ಕವಿಯಲ್ಲೂ ಭಿನ್ನವಾಗಿ ಮೂರ್ತಗೊಂಡಿರುತ್ತವೆ. ಇಂಥ ಪ್ರೀತಿ ತುಂಬಿದ ಸಂಬಂಧ ವಿನಯಾರ ಪಾಲಿಗೆ 'ಬಟ್ಟ ಬಯಲಲ್ಲಿ ಮೆಲ್ಲನೆ ಮಿಡಿವ ಮೃದಂಗ'ದಂತೆ. 'ಪ್ರೀತಿ' ಎಂಬ ಕವಿತೆಯಲ್ಲಿ ಆಕೆ ಹೇಳುತ್ತಾರೆ :

*'ಈ ರಾತ್ರಿಯ ಆಣೆ*
*ಅದು ಎಂದೇ ಆಗಿರಲಿ*
*ನನ್ನ ಶವದ ಮುಚ್ಚಿದ ಕಣ್ಣಂಚಲ್ಲೂ*
*ಹೆಪ್ಪುಗಟ್ಟದ ಹನಿಯೊಂದು ಹೊಳೆಯುತ್ತಿರುತ್ತದೆ*
*ನಿನ್ನ ಪ್ರೀತಿಗಾಗಿ'*

ಇದಕ್ಕಿಂತ ಹೆಚ್ಚಿಗೆ ಪ್ರೀತಿಸಿಕೊಳ್ಳುವ ಆ ಜೀವ ಬೇರೇನು ಬಯಸೀತು ? 'ನೀನಿಲ್ಲದ ನೀರವವನ್ನು ಯಾವುದೂ ತುಂಬದು, ಮಗುವಿನ ನಗುವೂ ಸಹ !' ಎಂಬ ಮಾತಿನ ಹಿಂದಿರುವ ಪ್ರೀತಿಯ ಆ ಅದಮ್ಯ ತಹ ತಹವನ್ನು ಓದುಗರೇ ಗುರುತಿಸಿಕೊಳ್ಳಬೇಕು. 'ನೀನಿಲ್ಲದ ನೀರವ', 'ಪ್ರೀತಿ', 'ಎದೆಯಂಗಳದಲ್ಲಿ', 'ಒದ್ದೆ ಎವೆಗಳ ಸುತ್ತ' ಇತ್ಯಾದಿ ಕವಿತೆಗಳು ಪ್ರೀತಿ ಮತ್ತು ವಿರಹದ ವಿವಿಧ ಮುಖಗಳನ್ನು ಬಲು ಸೊಗಸಾಗಿ ಬಿಚ್ಚಿಡುತ್ತವೆ.

ನಿಜ, ಕಾವ್ಯದಾಹಿಗಳಿಗೆ 'ಬಾಯಾರಿಕೆ' ಹರಿವ ತೊರೆಯಾಗಿದೆ. ಇಲ್ಲಿ ಏನಿಲ್ಲ ಎಲ್ಲ ಇದೆ; ಕಾವ್ಯಕ್ಕೆ ಒಪ್ಪುವ ಸಹಜ ಸಂವೇದನೆಗಳು, ಸುಂದರ ಪ್ರತಿಮೆಗಳು, ಹಸಿ-ಹಸಿ ಭಾವನೆಗಳು, ಸಾಮಾಜಿಕ ಚಿಂತನೆಗಳು, ಗಂಭೀರ ಕಾಳಜಿಗಳು ಮತ್ತು ಗತಿ-ಲಯ. ಕನ್ನಡ ಕಾವ್ಯ ಲೋಕಕ್ಕೆ ಉತ್ತಮ ಕವಿತೆಗಳ ಕೊಡುಗೆ ನೀಡಿದ ಡಾ|| ವಿನಯಾರಿಗೆ ಅಭಿನಂದನೆಗಳು.

**ವಿಭಾ ತಿರಕಪಡಿ**
ಅಂಚೆ ಸಹಾಯಕಿ, ಮಹಾಲಿಂಗಪುರ ಅಂಚೆ,
ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ

### ೩. 'ಸಾಂಖ್ಯ' ದಾರ್ಶನಿಕ ಪಂಥ

ಕ್ರಿ.ಪೂ. ೬-೫ನೇ ಶತಮಾನದಲ್ಲಿ ಜೀವಿಸಿದ್ದನೆಂದು ಭಾವಿಸಲಾದ ಕಪಿಲನು ಈ ದಾರ್ಶನಿಕ ಪಂಥದ ಸಂಸ್ಥಾಪಕ ಹಾಗೂ 'ಸಾಂಖ್ಯ ಸೂತ್ರ' ಕೃತಿಯ ಕರ್ತೃ ಎಂದು ಹೇಳಲಾಗುತ್ತದೆ. 'ಸಾಂಖ್ಯ ಸೂತ್ರ' ಕೃತಿ ನಷ್ಟವಾಗಿರುವುದರಿಂದ ತದನಂತರದ ಆಕರಗಳ ಮೂಲಕವಷ್ಟೆ – ಈಶ್ವರ ಕೃಷ್ಣನ ಸಾಂಖ್ಯಕಾರಿಕ (ಕ್ರಿ.ಶ. ೩-೪ನೇ ಶತಮಾನ), ವಾಚಸ್ಪತಿ ಮಿಶ್ರನ 'ಸಾಂಖ್ಯ ತತ್ತ್ವ ಕೌಮುದಿ' (೯ನೆಯ ಶತಮಾನ) ಮತ್ತಿತರ ಆಕರಗಳ ಮೂಲಕವಷ್ಟೆ– ಈ ದಾರ್ಶನಿಕ ಪಂಥದ ವಿಚಾರಗಳನ್ನು ತಿಳಿಯಬಹುದು.

ಸಾಂಖ್ಯ ಎಂಬ ಪದಕ್ಕೆ ಎರಡರ್ಥಗಳಿವೆ. ಒಂದು ಎಣಿಕೆ, ಇನ್ನೊಂದು ಧ್ಯಾನ. ಈ ದಾರ್ಶನಿಕ ಪದ್ಧತಿಯಲ್ಲಿ ಉಪನಿಷತ್ತುಗಳ ಸೂತ್ರಗಳನ್ನು ಪಟ್ಟಿ ಮಾಡಿಕೊಟ್ಟಿರುವುದರಿಂದ ಇದಕ್ಕೆ ಈ ಹೆಸರು ಬಂದಿದೆ ಎಂದು ಮೊದಲನೆಯ ಅರ್ಥಕ್ಕೆ ಹೆಚ್ಚು ಒತ್ತು ನೀಡುವ ಕೆಲವರು ಅಭಿಪ್ರಾಯಪಡುತ್ತಾರೆ. ಡಾ|| ಎಸ್. ರಾಧಾಕೃಷ್ಣನ್, ರಾಮ ಮೋಹನ ರಾಯ್ ಮತ್ತಿತರರು ಎರಡನೆಯ ಅರ್ಥಕ್ಕೆ ಹೆಚ್ಚು ಒತ್ತು ನೀಡುತ್ತಾರೆ.



ಈ ಜಗತ್ತು ಭೌತಿಕವಾದುದು ಅನ್ನುವುದು ಕಪಿಲನ ಪ್ರಧಾನ ಸೂತ್ರ. ಭೌತವಸ್ತುವೇ (ಪ್ರಕೃತಿಯೇ) ಎಲ್ಲಕ್ಕೂ ಆಧಾರ. ಅದು ಸರ್ವವ್ಯಾಪಿ, ಚಿರಂತನ ಹಾಗೂ ಏಕೈಕ. ಪ್ರಕೃತಿಯ ಚಲನೆಯೂ ಪ್ರಕೃತಿಯಷ್ಟೆ ಚಿರಂತನ. ಆದಿಕಾಲದಿಂದಲೂ ಇದ್ದುಕೊಂಡು ಬಂದಿರುವ ಪ್ರಕೃತಿಯ ಅಸ್ತಿತ್ವಕ್ಕೆ ಬಾಹ್ಯಕಾರಣ ಯಾವುದೂ ಇಲ್ಲ, ಏಕೆಂದರೆ, ಪ್ರಕೃತಿಗೆ ಆದಿಯೂ ಇಲ್ಲ, ಅಂತ್ಯವೂ ಇಲ್ಲ. ಈ ಜಗತ್ತೂ ಯಾರಿಂದಲೂ ಸೃಷ್ಟಿಸಲ್ಪಟ್ಟದ್ದಲ್ಲ, ಆದ್ದರಿಂದ ಯಾವ ಸೃಷ್ಟಿಕರ್ತನೂ ಇಲ್ಲ, ಈ ಜಗತ್ತೇ ಈ ಜಗತ್ತಿಗೆ ಕಾರಣ. ಅದು ಕ್ರಮೇಣ ವಿಕಾಸಗೊಂಡಂತಹುದು ಎಂದು ಕಪಿಲ ಸ್ಪಷ್ಟಪಡಿಸಿದ.

ಪ್ರಕೃತಿಯಲ್ಲಿ ಕಂಡುಬರುವ ಕಾರ್ಯ-ಕಾರಣ ಸಂಬಂಧಗಳೂ ವಸ್ತುನಿಷ್ಠ ಸ್ವರೂಪದವು. ಪ್ರಕೃತಿಯು ಕೆಳರೂಪಗಳಿಂದ ಉನ್ನತ ರೂಪಗಳಿಗೆ ತಾನೇ ತಾನಾಗಿ ವ್ಯಕ್ತಗೊಳ್ಳುವುದಕ್ಕೆ ಮುನ್ನವೇ ಕಾರಣದಲ್ಲೇ ಅಂತರ್ಗತವಾಗಿರುತ್ತದೆ ಎಂಬ ವಾದವನ್ನು 'ಸತ್ಕಾರ್ಯವಾದ' ಎನ್ನಲಾಗುತ್ತದೆ. (ಅದ್ವೈತ ವೇದಾಂತಿಗಳೂ ಈ ಸತ್ಕಾರ್ಯವಾದದ ಬೆಂಬಲಿಗರಾಗಿದ್ದರು – ಆದರೆ ಒಂದು ಮೂಲಭೂತ ವ್ಯತ್ಯಾಸದೊಂದಿಗೆ. ಕಾರಣವು ಪರಿಣಾಮವಾಗಿ ಸ್ಥಿತ್ಯಂತರಗೊಳ್ಳುವುದು ಕೇವಲ ಒಂದು ಮಾಯೆ ಅಥವಾ ಭ್ರಾಂತಿ (ವಿವರ್ತ) ಎಂದವರು ಘೋಷಿಸಿದರು. ಹಗ್ಗವನ್ನು ನೋಡಿ ಹಾವೆಂದು ಭ್ರಮಿಸಿದರೆ ಹಗ್ಗ ಹಾವಾಗುವುದಿಲ್ಲ. ಈ ಬ್ರಹ್ಮಾಂಡವು ಬ್ರಹ್ಮ ಸೃಷ್ಟಿಯಾದರೆ ಬ್ರಹ್ಮನು ತಾನು ಸೃಷ್ಟಿಸಿದ ಬ್ರಹ್ಮಾಂಡವೇ ಆದಂತೇನೂ ಅಲ್ಲ. ಬ್ರಹ್ಮನ್ (ಈ ಪ್ರಸಂಗದಲ್ಲಿ ಕಾರಣ) ತಾನೇ ತಾನಾಗಿ ಇದ್ದುಕೊಂಡಿರುತ್ತದೆ. ಬ್ರಹ್ಮಾಂಡವು (ಈ ಪ್ರಸಂಗದಲ್ಲಿ ಪರಿಣಾಮವು)ಕೇವಲ ಮಾಯೆ ಅಥವಾ ಭ್ರಾಂತಿ ಆಗಿರುತ್ತದೆ, ಎಂದವರು ವಾದಿಸಿದರು.)

ಕಾರಣಗಳಿಲ್ಲದೆ ಪರಿಣಾಮಗಳಿರವು. ಪ್ರಕೃತಿಯಲ್ಲಿ ಪ್ರತಿಯೊಂದಕ್ಕೂ ತನ್ನದೇ ಕಾರಣವಿರುತ್ತದೆ. ಶರೀರ-ಆತ್ಮ, ಭಾವನೆ-ಬುದ್ಧಿ ಇವುಗಳ ವಿಷಯದಲ್ಲೂ ಈ ಮಾತು ನಿಜ. ಅವು 'ಸೀಮಿತ ಹಾಗೂ ಪರಾವಲಂಬಿ ವಸ್ತುಗಳು.'

ಎಲ್ಲ ಕಾರ್ಯ-ಪರಿಣಾಮಗಳಿಗೂ ಕಾರಣ ಪ್ರಕೃತಿ (ಭೌತವಸ್ತು). ಆದರೆ ಅದಕ್ಕೆ ಕಾರಣವಿಲ್ಲ. ''ಕಾರಣದಿಂದ ಉತ್ಪನ್ನಗಳು. ಉತ್ಪನ್ನಗಳಿಗೆ 'ಕಾರಣ'ವಾದ ಪ್ರಕೃತಿಗೇ ಕಾರಣವಿಲ್ಲ. ಉತ್ಪನ್ನಗಳು ಪರಾವಲಂಬಿ, ಆದರೆ ಅವುಗಳಿಗೆ ಕಾರಣವಾದ ಪ್ರಕೃತಿ ನಿರಾವಲಂಬಿ. ಉತ್ಪನ್ನಗಳು ಸಂಖ್ಯೆಯಲ್ಲಿ ಅನೇಕ ದೇಶ-ಕಾಲಗಳಲ್ಲಿ ಸೀಮಿತ. ಆದರೆ ಪ್ರಕೃತಿ ಸಂಖ್ಯೆಯಲ್ಲಿ ಏಕೈಕ, ದೇಶ-ಕಾಲಗಳಲ್ಲಿ ಸರ್ವವ್ಯಾಪಿ, ಚಿರಂತನ.''

ಸಾಂಖ್ಯ ಸಿದ್ಧಾಂತದ ಪ್ರಕಾರ ಪ್ರಕೃತಿಗೆ ಮೂರು ಬಲ ಅಥವಾ ಗುಣಗಳುಂಟು : ಸತ್ವ, ರಜಸ್, ತಮಸ್. ಸತ್ವ ಹಗುರವಾದ ಉದ್ದೀಪಕ ಗುಣ. ರಜಸ್ ಪ್ರಚೋದಕ, ಚಾಲಕ ಗುಣ. ತಮಸ್ ಭಾರವಾದ ನಿರ್ಬಂಧಕ ಗುಣ. ಸತ್ವವು ಪ್ರಚ್ಛನ್ನ ಪ್ರಜ್ಞೆ, ರಜಸ್ಸು ಚಲನೆಯ/ಕ್ರಿಯೆಯ, ಬೆಳವಣಿಗೆಯ ಆಕರ. ತಮಸ್ಸು ಕ್ರಿಯೆಯನ್ನು ನಿರ್ಬಂಧಿಸುವ,

# ಪ್ರಾಚೀನ ಭಾರತದ ಭೌತವಾದಿ ಪಂಥಗಳು

ವಿಕಾಸಗೊಂಡಿದೆ. ಈ ವಿಕಾಸ ಕ್ರಿಯೆ ನಿರಂತರವಾದುದು, ಎಂದು 'ಸಾಂಖ್ಯಕಾರಿಕ'ದ ಮೊದಲ ಶ್ಲೋಕವೇ ಒತ್ತಿ ಹೇಳುತ್ತದೆ. ಶೂನ್ಯದಿಂದ ಏನೂ ಉದ್ಭವಿಸಲಾರದು. ಕಾರ್ಯ-ಕಾರಣಗಳ ನಡುವೆ ನಿಕಟ ಸಂಬಂಧವಿದೆ. ಹೀಗಿಲ್ಲದಿದ್ದರೆ ಎಲ್ಲೇ ಆಗಲಿ, ಯಾವುದೇ ಘಳಿಗೆಯಲ್ಲಾಗಲಿ ಎಂಥದೇ ಉದ್ಭವಿಸಬಹುದಿದ್ದಿತು. ಒಂದೊಂದು ಕಾರಣವು ಒಂದೊಂದು ನಿರ್ದಿಷ್ಟ ಪರಿಣಾಮ ಉಂಟುಮಾಡುತ್ತದೆ. ಪರಿಣಾಮ ಉಂಟುಮಾಡದ ಕಾರಣ ಎಂಬಂತಹುದು ಯಾವುದೂ ಇಲ್ಲ.

ಕಪಿಲನು ಈ ಕಾರ್ಯ-ಕಾರಣದ ಭೌತವಾದಿ ಸಿದ್ಧಾಂತವನ್ನು ತನ್ನ ನಾಸ್ತಿಕವಾದವನ್ನು ಸಮರ್ಥಿಸಲೂ, ಬ್ರಾಹ್ಮಣವಾದದ ಸಿದ್ಧಾಂತವನ್ನು ಟೀಕಿಸಲೂ ಬಳಸಿಕೊಂಡ. ಮೊದಲ ಕಾರಣ ದೇವರು (ಬ್ರಹ್ಮ) ಆಗಿದ್ದು ಈ ಪ್ರಪಂಚ ಆ ಕಾರಣದ ಪರಿಣಾಮ ಎನ್ನುವುದಾದರೆ ಕಾರ್ಯಕ್ಕೂ ಕಾರಣಕ್ಕೂ ನಡುವೆ ಅಸಾಂಗತ್ಯ ಉಂಟಾಗುತ್ತದೆ. ಆದರೆ ಇದು ಸಾಧ್ಯವಿಲ್ಲ. ಆದ್ದರಿಂದ ಈ ಜಗತ್ತಿನ ಅಸ್ತಿತ್ವಕ್ಕೆ ಮೂಲಕಾರಣ ಭೌತವಸ್ತು (ಪ್ರಕೃತಿ). ಈ ಜಗತ್ತು ಭೌತವಸ್ತುವಿನ ಪರಿವರ್ತನೆಯ ಪರಿಣಾಮ.

ಸಾಂಖ್ಯ ಸಿದ್ಧಾಂತದ ಪ್ರಕಾರ ಪ್ರತಿಯೊಂದಕ್ಕೂ (ಪ್ರತಿಯೊಂದು ವಿದ್ಯಮಾನಕ್ಕೂ) ಅದರದೇ ಭೌತ ಕಾರಣವಿರುತ್ತದೆ. ಪ್ರತಿಯೊಂದು ಪರಿಣಾಮವೂ ಕಾರಣದಲ್ಲೇ ಅಂತರ್ಗತವಾಗಿರುತ್ತದೆ. (ಬೌದ್ಧವಾದಿಗಳು, ನ್ಯಾಯ-ವೈಶೇಷಿಕವಾದಿಗಳೂ ಇದಕ್ಕೆ ವಿರುದ್ಧವಾಗಿದ್ದರು. ಪರಿಣಾಮವು ಭೌತ ಕಾರಣದಲ್ಲಿ ಅಂತರ್ಗತವಾಗಿರುವುದಿಲ್ಲ ಎಂದವರು ವಾದಿಸಿದರು. ಪರಿಣಾಮವು ಕಾರಣದಲ್ಲಿ ಅಂತರ್ಗತವಾಗಿದ್ದರೆ ಕಾರಣದ ಅವಶ್ಯಕತೆಯೇ ಇರುವುದಿಲ್ಲ. ಉದಾಹರಣೆಗೆ ಮಡಕೆಯು ಮಣ್ಣಿನಲ್ಲೇ ಅಂತರ್ಗತವಾಗಿದ್ದರೆ ಕುಂಬಾರ ಏಕೆ ಬೇಕು? ಇದನ್ನು ಆರಂಭವಾದ ಎನ್ನಲಾಗುತ್ತದೆ. ಕಾರಣದಲ್ಲಿ ಪರಿಣಾಮ ಇರುವುದಿಲ್ಲ, ಆದರೆ ಪರಿಣಾಮದಲ್ಲಿ ಹೊಸತು ಹುಟ್ಟಿಕೊಳ್ಳುತ್ತದೆ ಎಂಬುದು ಈ ವಾದದ ಸಾರಾಂಶ.) ಹೀಗಿಲ್ಲದಿದ್ದರೆ, ಪರಿಣಾಮವೂ ಶೂನ್ಯದಿಂದ ಉದ್ಭವಿಸುತ್ತದೆಂದು ಹೇಳಿದಂತಾಗುತ್ತದೆ.

ಪರಿಣಾಮವೂ ಕಾರಣವೂ ಒಂದೇ ಸ್ವರೂಪದವು. ಅವಕ್ಕೆ ಒಂದೇ ಆಧಾರ. ಬಟ್ಟೆಯನ್ನು ನೂಲಿನಿಂದ ಮಾಡಬಹುದೇ ಹೊರತು ಹಾಲಿನಿಂದಲ್ಲ. ಹಾಗೆಯೇ ಮೊಸರನ್ನು ಹಾಲಿನಿಂದ ಮಾಡಲು ಸಾಧ್ಯವೇ ಹೊರತು ನೂಲಿನಿಂದಲ್ಲ. ಪರಿಣಾಮವು ಬೆಳವಣಿಗೆಯನ್ನು ನಿಧಾನಗೊಳಿಸುವ ಶಕ್ತಿ. ಈ ಮೂರು ಯಾವುದೇ ವಸ್ತುವಿನ ಅಥವಾ ವಿದ್ಯಮಾನದ ಮೂಲಾಧಾರ ಗುಣಗಳು. ಇವು ಪರಸ್ಪರ ಪ್ರತ್ಯೇಕಗೊಳಿಸಲಾಗದಂತೆ ಸಂಬಂಧಿತವಾಗಿರುತ್ತವೆ ಮತ್ತು ಪರಸ್ಪರ ಪ್ರಭಾವ ಬೀರುತ್ತ ಒಂದನ್ನೊಂದು ನಿಯಂತ್ರಿಸುತ್ತವೆ. ದೀಪದ ಉರಿ, ಎಣ್ಣೆ ಹಾಗೂ ಬತ್ತಿಗಳಂತೆ ನಿಕಟವಾಗಿ ಸಂಬಂಧಿತವಾಗಿರುತ್ತವೆ.

ಈ ಮೂರು ಗುಣಗಳೂ ಒಂದು ರೀತಿಯಲ್ಲಿ ಮೂಲ ನಿಯಮಗಳಿದ್ದಂತೆ – ಭೌತದ್ರವ್ಯ (ತಮಸ್), ಶಕ್ತಿ (ರಜಸ್) ಹಾಗೂ ಪ್ರಜ್ಞೆ (ಸತ್ವ). ಪ್ರಕೃತಿಯಲ್ಲಿನ ಪ್ರತಿಯೊಂದೂ ಈ ಮೂರು ನಿಯಮಗಳಿಂದ ಆರೋಪಿತವಾಗಿರುತ್ತದೆ. ಇವು ಮೂರು ಅಂತರ ಕ್ರಿಯೆ ಜರುಗಿಸುತ್ತಿರುತ್ತವೆ. ಭೌತದ್ರವ್ಯವಿಲ್ಲದೆ ಶಕ್ತಿ ಇರಲಾರದು, ಶಕ್ತಿ ಇಲ್ಲದೆ ಪ್ರಜ್ಞೆ ಇರಲಾರದು. ಈ ಮೂರು ಶಕ್ತಿ ಕಣಗಳು ಭೌತದ್ರವ್ಯದಲ್ಲಿ ಹೇಗೆಂದರೆ ಹಾಗೆ ಹಂಚಿತವಾಗಿದ್ದು ಸಾಹಜಿಕ ಸಾದೃಶ್ಯತೆಯ ಪ್ರಭಾವದಡಿ ಇಡಿಯಾಗಿ ರೂಪುಗೊಂಡಿರುತ್ತವೆ. ವಸ್ತುವಿನ ವಿವಿಧ ಭಾಗಗಳಲ್ಲಿ ಒತ್ತಡ ಏಕಪ್ರಕಾರವಾಗಿರುವುದಿಲ್ಲವಾದ್ದರಿಂದ ಕ್ರಮೇಣ ಪರಸ್ಪರವಾಗಿ ಭಿನ್ನವಾದ ಕಾಯಗಳು ರೂಪುಗೊಳ್ಳುತ್ತವೆ.

ವಿಕಾಸ ಪ್ರಕ್ರಿಯೆಯಲ್ಲಿ ಪ್ರಕೃತಿ ಪ್ರಮಾಣಾತ್ಮಕವಾಗಿ ಹಿಗ್ಗುವುದೂ ಇಲ್ಲ, ಕುಗ್ಗುವುದೂ ಇಲ್ಲ. ಹಾಗಾಗಿ ಭೌತದ್ರವ್ಯವೊಂದರ ಸೃಷ್ಟಿಯೂ ಸಾಧ್ಯವಿಲ್ಲ, ನಾಶವೂ ಸಾಧ್ಯವಿಲ್ಲ. ಭೌತ ದ್ರವ್ಯದ ಒಟ್ಟು ಮೊತ್ತ – ಅದರ ಎಲ್ಲ ವಾಸ್ತವಿಕ ಅಥವಾ ಸಂಭಾವ್ಯ ಸ್ಥಿತಿಗಳ ಒಟ್ಟು ಮೊತ್ತ – ಯಾವತ್ತೂ ಸ್ಥಿರವಾಗಿರುತ್ತದೆ. ಆದರೆ ಭೌತ ದ್ರವ್ಯದ ಧಾತುಗಳು ಸತತವಾಗಿ ಚಲನೆಯಲ್ಲಿ ಇರುತ್ತವೆ. ಈ ಚಲನೆ ಒಂದು ಕ್ಷಣವೂ ನಿಲ್ಲದು. ಯಾವುದೇ ಬೆಳವಣಿಗೆ ಅಥವಾ ನಾಶ ಭೌತ ದ್ರವ್ಯದ ಪುನರ್ ಹಂಚಿಕೆಯಲ್ಲದೆ, ಭೌತದಿಂದ ವರ್ತಮಾನದಿಂದ ಭವಿಷ್ಯತ್ತಿಗೆ ಅದರ ಸ್ಥಿತ್ಯಂತರವಲ್ಲದೆ, ಅಥವಾ ಸಂಭಾವ್ಯತೆಯಿಂದ ವಾಸ್ತವಿಕತೆಗೆ ಸ್ಥಿತ್ಯಂತರವಲ್ಲದೆ, ಬೇರೇನೂ ಅಲ್ಲ. ಭೌತದ್ರವ್ಯ ಹಾಗೂ ಶಕ್ತಿಯ ಈ ಪುನರ್ ಹಂಚಿಕೆಯೇ ಭೌತ ಜಗತ್ತಿನ, ಸಸ್ಯ ಹಾಗೂ ಪ್ರಾಣಿ ಜಗತ್ತಿನ, ಇಡೀ ವೈವಿಧ್ಯತೆಯನ್ನು ಉಂಟುಮಾಡುವಂತಹದು.

ಪ್ರಾಚೀನ ಭಾರತೀಯ ದಾರ್ಶನಿಕರ ಈ ಚಿಂತನೆಯು ನಿಜಕ್ಕೂ ಪ್ರತಿಭಾನ್ವಿತ ಎನ್ನಬಹುದು. ಇದು ಆಧುನಿಕ ವೈಜ್ಞಾನಿಕ ಜಗತ್ತಿನ 'ಭೌತದ್ರವ್ಯ ಹಾಗೂ ಶಕ್ತಿ ಸಂರಕ್ಷಣೆ'

ನಿಯಮದ ಅಭಿವ್ಯಕ್ತಿಯೇ ಆಗಿದೆ. ಸಾಂಖ್ಯ ಸಿದ್ಧಾಂತವು ಭೌತದ್ರವ್ಯದ ಬಗೆಗೆ ಒಂದು ದಾರ್ಶನಿಕ ಪ್ರಕಲ್ಪನೆಯನ್ನು ನಿರೂಪಿಸಲು ಗಹನವಾದ ಯತ್ನ ಮಾಡಿದ ಭಾರತದಲ್ಲಿನ ಪ್ರಪ್ರಥಮ ಹಾಗೂ ಬಹುಶಃ ಏಕೈಕ ದಾರ್ಶನಿಕ ಪಂಥವಾಗಿದೆ.

ಚೈತನ್ಯ ಹೇಗೆ ಹುಟ್ಟುತ್ತದೆ ಎಂಬುದೇ ಸಾಂಖ್ಯ ತತ್ವಜ್ಞಾನಿಗಳು ಎಡುವುವಂತೆ ಮಾಡಿದ ಅಂಶವಾಗಿದ್ದಿತು. ಅದನ್ನು ವಿವರಿಸಲೆಂದೇ ಕಪಿಲ 'ಪುರುಷ' ವಿಚಾರವನ್ನು ಸೃಷ್ಟಿಸಿದ, ಎಂದು ರಾಮ ಮೋಹನ ರಾಯ್ ಹೇಳುತ್ತಾರೆ.

ಕಪಿಲನ ಪ್ರಕಾರ 'ಪುರುಷ' ಅನ್ನುವುದು ಸರ್ವವನ್ನು ತಿಳಿದಂತಹುದು, ಅತ್ಯಂತ ಸೂಕ್ಷ್ಮವಾದುದು. ಇದು ಚೈತನ್ಯದಿಂದ ಕೂಡಿರುತ್ತದೆ. ಈ ಗುಣವೇ ಇದನ್ನು 'ಪ್ರಕೃತಿ'ಯಿಂದ ಭಿನ್ನವಾಗಿಸುವುದು. ಪುರುಷ ಏನನ್ನೂ ಸೃಷ್ಟಿಸುವುದಿಲ್ಲ, ಅದು ನಿಷ್ಕ್ರಿಯವಾದ ಸಾಕ್ಷಿಯಷ್ಟೆ. ಇದಕ್ಕೆ ವಿರುದ್ಧವಾಗಿ ಪ್ರಕೃತಿ ತುಂಬ ಕ್ರಿಯಾಶೀಲವಾದುದು. ವಿಕಾಸ ಪ್ರಕ್ರಿಯೆಯಲ್ಲಿ ಪ್ರಕೃತಿ ಪುರುಷನೊಂದಿಗೆ ಸಂಪರ್ಕ ಪಡೆದು ಚೈತನ್ಯ ಪಡೆದುಕೊಳ್ಳುತ್ತದೆ. ಪುರುಷನಿಗೆ ತಾನೆ ಚೈತನ್ಯ ಪಡೆದುಕೊಳ್ಳುವ ಶಕ್ತಿ ಇಲ್ಲ.

ಚೈತನ್ಯಕ್ಕೆ ಸಂಬಂಧಿಸಿದ ಸಾಂಖ್ಯ ಪಂಥದ, ಈ ಅಸಾಂಗತ್ಯವನ್ನು ಪುರೋಹಿತಶಾಹಿ ಚೆನ್ನಾಗಿ ಉಪಯೋಗಿಸಿಕೊಂಡಿತು. ಜೊತೆಗೆ ಮಧ್ಯ ಯುಗದಲ್ಲಿ ಕಾಣಿಸಿಕೊಂಡ ಗೌಡಪಾದ ಮತ್ತು ವಾಚಸ್ಪತಿ ಮಿಶ್ರರಂಥ ವ್ಯಾಖ್ಯಾನಕಾರರು (ಅಥವಾ ಅನುಯಾಯಿಗಳು) ಕಪಿಲನ ಸಿದ್ಧಾಂತವನ್ನು ಮತ್ತಷ್ಟು ತಿರುಚಿ, ವಸ್ತುವಿನಿಂದ ಸ್ವತಂತ್ರವಾದ ಆತ್ಮದ ವಿಚಾರ ಸೇರಿಸಿ, ಅದನ್ನು ಭಾವನಾವಾದಕ್ಕೆ ಸಮೀಪ ಕೊಂಡೊಯ್ದರು.

ಜಗತ್ತಿನ ವಿಕಾಸದ ಒಂದು ನಿರ್ದಿಷ್ಟ ಘಟ್ಟದಲ್ಲಿ ಚೈತನ್ಯ ಉದಯಿಸುತ್ತದೆ, ಪ್ರಮಾಣಾತ್ಮಕ ಬದಲಾವಣೆಗಳು ಗುಣಾತ್ಮಕ ಬದಲಾವಣೆಗಳಿಗೆ ಎಡೆ ಮಾಡಿಕೊಟ್ಟು ಹೊಸ ಗುಣಗಳು ಉಂಟಾಗುತ್ತವೆ, ಎಂದು ಹೇಳಿದ್ದಲ್ಲಿ ಸಾಂಖ್ಯ ಪಂಥದಲ್ಲಿನ ಅಸಾಂಗತ್ಯಗಳು ಇಲ್ಲವಾಗುತ್ತಿದ್ದವೆಂದು ರಾಮ ಮೋಹನ್ ರಾಯ್ ಅಭಿಪ್ರಾಯಪಡುತ್ತಾರೆ.

**ಕೆ. ಎಲ್. ಗೋಪಾಲಕೃಷ್ಣ ರಾವ್**
೨೬೧, ೨ನೇ ಕ್ರಾಸ್, ಸಿ.ಟಿ.ಬೆಡ್, ತ್ಯಾಗರಾಜನಗರ, ಬೆಂಗಳೂರು - ೫೬೦ ೦೨೮

# ಶಕ್ತಿ ಆರಾಧನೆಯ ಒಂದು ಪ್ರಾಚೀನ ಕೇಂದ್ರ ಉದಾರಹಳ್ಳಿ


*ಅಗ್ನಿಜ್ವಾಲೆಯ ಸಹಿತ ದುರ್ಗಿ ಶಿಲ್ಪಗಳು*

**ಉ**ದಾರಹಳ್ಳಿಯು ಕನಕಪುರ ತಾಲ್ಲೂಕಿನಲ್ಲಿನ ಬಾಣಂತಿ ಮಾರಿ ಬೆಟ್ಟ ಶ್ರೇಣಿಯ ತಪ್ಪಲಿನಲ್ಲಿದೆ. 'ಉದಾರ'ವೆಂದರೆ ಘನವಾದ, ದೊಡ್ಡದಾದ ಎಂಬ ಅರ್ಥವಿರುವುದರಿಂದ ದಟ್ಟ ಅರಣ್ಯದ ನಡುವಿನ ವಿಶಾಲ ಭೌಗೋಳಿಕತೆಯ ಈ ಹಳ್ಳಿಗೆ ಈ ಹೆಸರು ಉಚಿತವಾಗಿಯೇ ಇದೆ.

ಕನಕಪುರದಿಂದ ರಾಮನಗರಕ್ಕೆ ಹೋಗುವ ಮಾರ್ಗದಲ್ಲಿ ಅರಳಿಮರದ ಹಳ್ಳಿಯಿಂದ ೫ ಕಿ.ಮೀ. ದೂರದಲ್ಲಿರುವ ಈ ಹಳ್ಳಿಯೂ ಒಳಗೊಂಡಂತೆ ಸುತ್ತಲಿನ ಪರಿಸರದಲ್ಲೆಲ್ಲಾ ಪ್ರಾಗೈತಿಹಾಸಿಕ ಕಾಲಕ್ಕೆ ಸೇರುವ (ಕಾಲ ಸುಮಾರು ಕ್ರಿ. ಪೂ. ೮೦೦) ಬೃಹತ್ ಶಿಲಾಯುಗದ ಭಿನ್ನ ವಿಭಿನ್ನ ಪ್ರಕಾರದ ಶಿಲಾ ಸಮಾಧಿಗಳು ಹರಡಿಕೊಂಡಿವೆ. ಈ ಪ್ರಾಗೈತಿಹಾಸಿಕ ಭೌಗೋಳಿಕತೆಯನ್ನು ಗಮನಿಸಿದರೆ ಆದಿ ಶಿಲಾಯುಗ ಅಂದರೆ ಕ್ರಿ.ಪೂ. ಸುಮಾರು ೫೦,೦೦೦ ವರ್ಷಗಳಿಂದಲೂ ಸತತವಾಗಿ ಮಾನವನ ಒಡನಾಟ ಇಲ್ಲಿ ಇತ್ತೆಂಬುದು ತಿಳಿಯುತ್ತದೆ. ೩೦ಕ್ಕೂ ಹೆಚ್ಚು ಬೃಹತ್ ಶಿಲಾಯುಗದ ಸಮಾಧಿಗಳಿಂದ ಸುತ್ತುವರಿದಿರುವ ಉದಾರಹಳ್ಳಿಯು ಮುಂದೆ ಶಕ್ತಿ ಆರಾಧನೆಯ ಕೇಂದ್ರವಾಗಿ ರೂಪುಗೊಂಡಿದೆ. ಇದುವರೆಗೆ ಐದು ದುರ್ಗಾದೇವಿಯ ಬಿಡಿಬಿಡಿ ವಿಭಿನ್ನ ರೂಪು, ಭಂಗಿಗಳ ಮೂರ್ತಿಗಳು ಇಲ್ಲಿ ಲಭ್ಯವಾಗಿವೆ. ಆದರೂ ಪ್ರಸ್ತುತದಲ್ಲಿ ಶಕ್ತಿ ದೇವತೆಗಳ ಪ್ರಾಚೀನ ಕಾಲದ ಯಾವುದೇ ದೇವಾಲಯಗಳಾಗಲೀ, ಪ್ರಾಚೀನ ಕಾಲದಿಂದ ನಡೆದುಬಂದ ಹಬ್ಬ ಉತ್ಸವಗಳಾಗಲೀ ಕಾಣಸಿಗದಿರುವುದು ಸೋಜಿಗವಾಗಿದೆ.


*ಬಂಡಿಯನ್ನು ಸಾಂಕೇತಿಕವಾಗಿ ಚಿತ್ರಿಸಿರುವ ದುರ್ಗಿ ಶಿಲ್ಪ*
*(ಕಾಲ ಕ್ರಿ. ಶ. ಸುಮಾರು 12ನೇ ಶತಮಾನ)*

ಈ ತಾಲ್ಲೂಕಿನ ಹಲವಾರು ಹಳ್ಳಿಗಳಲ್ಲಿ ದುರ್ಗಾಮಾತೆಯ ಇತರ ಸ್ಥಳೀಯ ರೂಪಗಳ ಆರಾಧನೆ ಇರುವುದಾದರೂ ಇಲ್ಲಿನ ಈ ಶಿಲಾಮೂರ್ತಿಗಳು ಅದ್ವಿತೀಯವಾಗಿವೆ. ಒಂದೂವರೆ ಅಡಿಯಿಂದ ಮೂರು ಅಡಿ ಎತ್ತರವುಳ್ಳ ಗ್ರಾನೈಟ್‌ನ ಈ ಎಲ್ಲಾ ಶಿಲ್ಪಗಳೂ ಚತುರ್ಭುಜಗಳಿಂದ ಕೂಡಿ ಖಡ್ಗ, ಡಮರು, ತ್ರಿಶೂಲ, ಪಾನಬಟ್ಟಲು ಇದ್ದು ಇವುಗಳಲ್ಲಿ ಎರಡು ಶಿಲ್ಪಗಳ ಶಿರದಲ್ಲಿ ಅಗ್ನಿ ಜ್ವಾಲೆಗಳು ಭುಗಿಲೆದ್ದಿವೆ. ಕೆರಳಿ ಕುಳಿತಿರುವ ಈ ಶಿಲ್ಪಗಳು ದುರ್ಗಿಯ ರೂಪವಾದ ಭೈರವಿಯವು ಎಂದು ತಿಳಿಯಬಹುದು.

ಇವುಗಳಲ್ಲಿ ಮೂರು ಶಿಲ್ಪಗಳು ಕಾಲದ ದೃಷ್ಟಿಯಿಂದ ಕ್ರಿ. ಶ. ಸುಮಾರು ೯ನೇ ಶತಮಾನದಿಂದ ಕ್ರಿ.ಶ. ೧೧ನೇ ಶತಮಾನಕ್ಕೆ ಸರಿಹೊಂದುತ್ತವೆ. ಬೃಹತ್ ಶಿಲಾಯುಗದ ಸಮಾಧಿಯೊಂದರೊಳಗೆ ದೊರೆತಿರುವ ಮತ್ತೊಂದು ಶಿಲ್ಪವು ಈ ಮೂರು ಶಿಲ್ಪಗಳಿಗಿಂತ ಸ್ವರೂಪದಲ್ಲಿ ಪ್ರಾಚೀನವಾದುದಾಗಿದೆ. ಅಂದರೆ ಕ್ರಿ.ಶ. ಸುಮಾರು ಏಳನೆಯ ಶತಮಾನಕ್ಕೂ ಮುನ್ನವೆ ಇಲ್ಲಿ ದುರ್ಗಾರಾಧನೆ ಪ್ರಚಲಿತದಲ್ಲಿ ಇತ್ತೆಂದು ಹೇಳಬಹುದು.

ಕ್ರಿ.ಶ. ಸುಮಾರು ಹನ್ನೆರಡನೇ ಶತಮಾನಕ್ಕೆ ಸೇರುವ ಮತ್ತೊಂದು ಸುಂದರ ಶಿಲ್ಪವು ಸರ್ವ ಅಲಂಕಾರಗಳಿಂದ ಭೂಷಿತವಾಗಿದ್ದು ರಥದಲ್ಲಿ ಕುಳಿತಿರುವುದನ್ನು ಎರಡು ಚಕ್ರಗಳನ್ನು ಕೆತ್ತುವುದರ ಮೂಲಕ ಸಾಂಕೇತಿಕವಾಗಿ ತೋರಿಸುವಂತೆ ಚಿತ್ರಿಸಲಾಗಿದೆ. ಈ ರೀತಿಯ ಸಾಂಕೇತಿಕ ಶಾಕ್ತ ಚಿತ್ರದ ಶಿಲ್ಪ ದಕ್ಷಿಣ ಭಾರತದಲ್ಲಿ ಅಪರೂಪದ್ದಾಗಿದೆ.

ಈ ವಿಶಿಷ್ಟ ಶಿಲ್ಪಗಳೊಡನೆ ಇದೇ ಹಳ್ಳಿಯಲ್ಲಿ ಎರಡು ವೀರಗಲ್ಲುಗಳೂ ಒಂದು ಶಾಸನವೂ ಇದ್ದು ಪ್ರಾಗೈತಿಹಾಸಿಕ ಕಾಲದಿಂದ ಇಂದಿನವರೆಗೂ ಈ ಪರಿಸರವು ಮಾನವನ ಚಟುವಟಿಕೆಯ ಕಣಜವಾಗಿದೆ.

ಚಿತ್ರ-ಲೇಖನ : **ಮುತ್ತುರಾಜು**
ಕನ್ನಡ ಅಧ್ಯಾಪಕರು, ಜವಾಹರ್ ನವೋದಯ ವಿದ್ಯಾಲಯ, ರೋಶನಾಬಾದ್ - ೨೪೯ ೪೦೨
ಹರಿದ್ವಾರ ಜಿಲ್ಲೆ, ಉತ್ತರಾಂಚಲ.

**HOSATHU** Kannada Monthly / May 2003 Rs. 10

RNI Regn. No. KARKAN/1999/614 REGD. CPMG / KA / BGE – 7 / 2003-05 Licenced to post without prepayment. Licence No. WPP-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, Bangalore-560 001. Chief Editor : Dr. G. Ramakrishna